# ಈಗ

## ನಿಮ್ಮ ಮೆಚ್ಚಿನ ಆರೋಗ್ಯವರ್ಧಕ ಟಾನಿಕ್

# ವಿಟಮಿನ್‌ಗಳಿಂದ

## ಕೂಡಿರುವ ವಾಟರ್‌ಬರೀಸ್ ಕಂಪೌಂಡ್ ಕೇಳಿ ಪಡೆಯಿರಿ

ನೀವೀಗ ಭಾರತದ ಲೋಕಪ್ರಿಯ ಹಾಗೂ ವಿಟಮಿನ್‌ಯುಕ್ತವಾದ ಆರೋಗ್ಯವರ್ಧಕ ಟಾನಿಕನ್ನು ಪಡೆಯಬಲ್ಲಿರಿ. ವಾಟರ್‌ಬರೀಸ್ ಕಂಪೌಂಡಿನ ಈ ಪ್ರಸಿದ್ಧ ಫಾರ್ಮುಲಾದಲ್ಲಿ ಸ್ಫೂರ್ತಿದಾಯಕವಾದ ಹಾಗೂ ಆರೋಗ್ಯವರ್ಧಕವಾದ ಅಧಿಕ ವಿಟಮಿನ್‌ಗಳನ್ನು ಕೂಡಿಸಿ ಅದರ ಪೌಷ್ಟಿಕತೆಯನ್ನು ಮತ್ತಷ್ಟು ಹೆಚ್ಚಿಸಿರುತ್ತದೆ. ವಾಟರ್‌ಬರೀಸ್ ವಿಟಮಿನ್ ಕಂಪೌಂಡ್ ನಿಮಗೆ ಅನೇಕ ರೀತಿಯಲ್ಲಿ ಹಿತಕಾರಿಯಾಗಿದೆ. ಇದು ರಕ್ತವನ್ನು ಅಧಿಕ ಪುಷ್ಟಿಗೊಳಿಸಿ, ಕಳೆದು ಹೋದ ಸ್ಫೂರ್ತಿ ಮತ್ತು ಶಕ್ತಿಯನ್ನು ಪುನಃ ಒದಗಿಸಿ ಕೊಡುತ್ತದೆ. ಅಲ್ಲದೆ ಇದು ಸ್ನಾಯುಗಳಿಗೆ ಹೊಸ ಚೇತನವನ್ನೊದಗಿಸಿ, ನರಗಳು ಅಧಿಕ ಶಕ್ತಿಯುಕ್ತವಾಗುವಂತೆ ಮಾಡುತ್ತದೆ ಮತ್ತು ರೋಗರುಜಿಗಳನ್ನು ವಿರೋಧಿಸಿ ತಡೆಗಟ್ಟುವ ಶಕ್ತಿಯನ್ನೀಯುತ್ತದೆ. ಕಾಯಿಲೆಯಾದ ನಂತರ ಆರೋಗ್ಯವನ್ನು ಪುನಃ ಶೀಘ್ರವಾಗಿ ಸಂಪಾದಿಸಲು ಇದು ಅತ್ಯಂತ ಸಹಾಯಕಾರಿಯಾಗಿದೆ.




## ವಾಟರ್‌ಬರೀಸ್

ವಿಟಮಿನ್

## ಕಂಪೌಂಡ್

ನಿಮ್ಮ ಆಹಾರಕ್ಕೆ ಪೂರಕವಾಗಿದೆ



ಅಲ್ಲದೆ ಕೆಮ್ಮು ಮತ್ತು ನೆಗಡಿಗಳಿಗೆ ಆದರ್ಶವಾದ ಕ್ರಿಯೊಸೊಟ್ ಮತ್ತು ಗುಯೊಕೊಲ್ ಔಷಧಗಳಿಂದ ಕೂಡಿದ ಕೆಂಪು ಲೇಬಲಿನ ವಾಟರ್‌ಬರೀಸ್ ಕಂಪೌಂಡ್ ಕೂಡಾ ದೊರೆಯುತ್ತದೆ.

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೆ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಸಿ. ರಾಮಚಂದ್ರರಾವ್
ಕೃಪೆಯಿಂದ

ಚಂದಾ ದರ :

| | |
|---|---|
| ವಾರ್ಷಿಕ (ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ.೪.೫೦ |
| ಬಿಡಿಸಂಚಿಕೆ — | ರೂ.೦.೭೫ |

Kasturi February 1961

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ ''ಕಸ್ತೂರಿ'' ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಪುಸ್ತಕವಿಭಾಗ

# ಕಸ್ತೂರಿ

ವರ್ಷ ೫ ಫೆಬ್ರುವರಿ ೧೯೬೧ ಸಂಚಿಕೆ: ೬



# ಶಂಕರಾಚಾರ್ಯರು ಮತ್ತು ಚಾಂಡಾಲ

ಆದ್ಯ ಗುರು ಶಂಕರಾಚಾರ್ಯರು ವಾರಾಣಸಿಯಲ್ಲಿರುತ್ತಿದ್ದಾಗ ಒಂದು ದಿನ ತಮ್ಮ ಶಿಷ್ಯರೊಂದಿಗೆ ಗಂಗಾಸ್ನಾನಕ್ಕೆಂದು ಹೊರಟಿದ್ದರು. ಹಾದಿಯಲ್ಲಿ ಒಬ್ಬ ಶ್ವಪಚ (ಚಾಂಡಾಲ) ಅವರಿಗೆ ಅಡ್ಡವಾಗಿ ನಿಂತ. ಅವನನ್ನು ಕಂಡು ಶಂಕರಾಚಾರ್ಯರು ಹಾದಿ ಬಿಟ್ಟುಕೊಡಲು ಅವನಿಗೆ ಅಪ್ಪಣೆ ಮಾಡಿದರು. ಆದರೆ ಆತ ನಿಂತಲ್ಲಿಂದ ಕದಲದೆ " ಹೋಗಿ, ಮುಂದೆ ಹೋಗಿ ಸ್ವಾಮಿ" ಎಂದ.

ಶಂಕರಾಚಾರ್ಯರು ಮತ್ತೊಮ್ಮೆ ದಾರಿ ಬಿಟ್ಟುಕೊಡಲು ಆದೇಶವಿತ್ತರು. " ನೀನು ಹೀಗೆಯೆ ನಿಂತಿದ್ದರೆ ನಿನ್ನ ಶರೀರದ ಸ್ಪರ್ಶವಾದೀತು. ಆದ್ದರಿಂದ ದಾರಿ ಬಿಟ್ಟುಕೊಟ್ಟು ನಡೆ" ಎಂದರು.

ಶ್ವಪಚನ ಇಚ್ಛಾಪೂರ್ತಿಯಾಯಿತು. ಇದೇ ವಿಷಯವಾಗಿ ಆತನಿಗೆ ಶಂಕರಾಚಾರ್ಯರೊಡನೆ ಮಾತಾಡಬೇಕಾಗಿತ್ತು, ಪ್ರಶ್ನೆಗಳನ್ನು ಕೇಳಬೇಕಾಗಿತ್ತು, ಉತ್ತರ ಪಡೆಯಬೇಕಾಗಿತ್ತು. ಆದ್ದರಿಂದ ಆತ ಖಂಡಿತವಾದ ಸ್ವರದಲ್ಲಿ "ಸ್ವಾಮೀ, ನನ್ನ ಶರೀರ ಸ್ಪರ್ಶದಿಂದ ನಿಮ್ಮ ಶರೀರಕ್ಕೇನಾದರೂ ಆಗುವುದೇ ? " ಎಂದು ಕೇಳಿದ.

ಆಚಾರ್ಯ ಶಂಕರರು ಉತ್ತರವಿತ್ತರು, "ನಿನ್ನದು ಚಾಂಡಾಲನ ದೇಹ. ನನ್ನ ಶರೀರ ಬ್ರಾಹ್ಮಣನದು. ನಿನ್ನ ಶರೀರ ಸ್ಪರ್ಶದಿಂದ ನನ್ನ ಶರೀರ ಅಪವಿತ್ರವಾಗುವುದು."

ಶ್ವಪಚ ಮತ್ತೆ ಹೇಳಿದ, " ಮಹಾತ್ಮಾ ! ಪವಿತ್ರತೆ ಮತ್ತು ಅಪವಿತ್ರತೆ, ಒಳ್ಳೆಯದು ಮತ್ತು ಕೆಟ್ಟದ್ದು, ಶುದ್ಧಿ ಮತ್ತು ಅಶುದ್ಧಿ, ದೊಡ್ಡದು ಮತ್ತು ಸಣ್ಣದು, ಉಚ್ಚ ಮತ್ತು ನೀಚ, ಬ್ರಾಹ್ಮಣ ಮತ್ತು ಚಾಂಡಾಲ-ಎಲ್ಲ ಭೇದಗಳೂ ಮನಸ್ಸಿನ ವಿಕಾರದಿಂದ ಹುಟ್ಟಿದವು ಎಂದು ಹೇಳುತ್ತಾರೆ. ಇದೆಲ್ಲ ಮಾಯಾಜನ್ಯ ಪ್ರಪಂಚ. ತಾವಾದರೊ 'ಮಾಯಾವಾದವನ್ನು ಮಿಥ್ಯವೆನ್ನುತ್ತೀರಿ. ಹಾಗಿದ್ದರೂ ಈ ಸ್ಪೃಶ್ಯಾಸ್ಪೃಶ್ಯ ಭೇದವನ್ನು ಮನ್ನಿಸಿ ಮಾಯೆಯ ಬಲೆಯಲ್ಲಿ ಸಿಲುಕಿದ್ದೀರಿ. ಇದು ಹೇಗೆ ?

' ಸಾಪ್ತಾಹಿಕ ಹಿಂದುಸ್ತಾನ ' ದಿಂದ

"ತ್ಯಾಗಿಪುರುಷಾ, ತಾವು ಅದ್ವೈತವಾದದಲ್ಲಿ ನಂಬುಗೆಯುಳ್ಳವರು. ಹಾಗಿದ್ದರೂ ತಮಗೆ ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ಶ್ವಪಚ ಮುಂತಾದ ಮಾಯಾಜನಿತ ಭೇದಭಾವಗಳಿಂದ ಮುಕ್ತಿ ದೊರಕಿಲ್ಲವೆಂದು ಕಾಣಿಸುತ್ತದೆ.

"ತರುಣ ಸಂನ್ಯಾಸಿ, ತಮ್ಮ ದೇಹಲಕ್ಷಣಗಳನ್ನು ನೋಡಿದರೆ ದಿವ್ಯರೂಪ ಧರಿಸಿರುವ ಯಾವನೊ ಅಸಾಧಾರಣ ಪುರುಷನಂತೆ ಕಾಣಿಸುತ್ತೀರಿ. ಜಗತ್ತಿನ ಕಲ್ಯಾಣಕ್ಕಾಗಿ ಅವತರಿಸಿದವರಂತಿದ್ದೀರಿ. ತಾವು ಜ್ಞಾನಿಗಳು ಎಂದೂ ಕಾಣಿಸುತ್ತದೆ. ತಾವು ಯೋಗಿಗಳೂ ಹೌದು. ಹಾಗಿದ್ದರೂ ಸ್ಪೃಶ್ಯಾಸ್ಪೃಶ್ಯದ ಭೂತ ನಿಮ್ಮನ್ನು ಹಿಡಿದುಕೊಂಡಿದೆ. ಸ್ವಾಮೀಜಿ, ತಮ್ಮ ಸಮ್ಮುಖದಲ್ಲಿ ಹೆಚ್ಚು ಮಾತನಾಡುವುದು ಯೋಗ್ಯವಲ್ಲ. ಆದರೆ ತಾವು ಕೂಡ ವಿಷಮತೆಯ ಮೋಹದಿಂದ ಮುಕ್ತರಾಗಿಲ್ಲವೆಂದು ಅನಿಸುತ್ತದೆ. ಇವೆಲ್ಲ ತಮ್ಮ ಬ್ರಹ್ಮವಾದಕ್ಕೆ ವಿರುದ್ಧವಾದವುಗಳು. ತಾವು ಬ್ರಹ್ಮವಾದವನ್ನು ಪ್ರಚಾರ ಮಾಡುತ್ತಿದ್ದರೂ ವ್ಯವಹಾರದಲ್ಲಿ 'ಮಾಯಾವಾದಿ'ಗಳೇ ಆಗಿರುವಿರಿ ಎಂದು ಅನಿಸುತ್ತದೆ."

ಶ್ವಪಚನ ಮಾತುಗಳನ್ನು ಕೇಳಿ ಶಂಕರಾಚಾರ್ಯರು ವಿಸ್ಮಿತರಾಗಿ ಹೋದರು. ಈತ ಚಾಂಡಾಲ ದೇಹಧಾರಣ ಮಾಡಿರುವ ಯಾವನೊ ಬ್ರಹ್ಮಜ್ಞಾನಿ ಎಂದು ಅವರಿಗೆ ತಿಳಿದು ಹೋಯಿತು. ಶ್ವಪಚನ ಪ್ರಶ್ನೆಗಳನ್ನುತ್ತರಿಸುತ್ತ ಅವರು ಹೇಳಿದರು, "ನೀನು ನೀಚ ಕುಲದಲ್ಲಿ ಹುಟ್ಟಿರುವಿಯಾದರೂ ಜ್ಞಾನಿಯಾಗಿರುವಿ. ಜ್ಞಾನದ ಮೂಲಕ ನಿನಗೆ ಈ 'ವರ್ಣವಿಭೇದ'ವು ಮಾನವಜಾತಿಯ 'ಸ್ವಾಭಾವಿಕ ವಿಧಾನ'ವೆಂಬುದೂ ತಿಳಿದಿರಬೇಕು. ಈ ವಿಧಾನಕ್ಕನುಸರಿಸಿ ಬ್ರಾಹ್ಮಣ, ಚಾಂಡಾಲ ಎಂಬಿತ್ಯಾದಿ ಭೇದಗಳನ್ನು ಮಾಡಿದ್ದಾರೆ. ಇದೇ ಆಧಾರದಿಂದ ಉಚ್ಚ, ನೀಚ ಇತ್ಯಾದಿ ಭೇದಗಳೂ ಮಾಡಲ್ಪಟ್ಟಿವೆ. ನೀನು ಜ್ಞಾನಿ. ವಿಚಾರ ಮಾಡಿ ನೋಡು. ಶ್ವಪಚನ ಶರೀರಸ್ಪರ್ಶದಿಂದ ಬ್ರಾಹ್ಮಣನ ಶರೀರಕ್ಕೆ ಮೈಲಿಗೆ ಏಕೆ ಆಗುವುದಿಲ್ಲ? ಕರ್ಮಕ್ಕನುಗುಣವಾಗಿ ಬೇರೆ ಬೇರೆ ಜಾತಿ ಮತ್ತು ಶಕ್ತಿಗಳಲ್ಲಿ ಭೇದವುಂಟಾಗಿದೆ. ಬ್ರಾಹ್ಮಣನಲ್ಲಿರುವ ಶಕ್ತಿ ಕ್ಷತ್ರಿಯನಲ್ಲಿಲ್ಲ, ಕ್ಷತ್ರಿಯನ ಶಕ್ತಿ ವೈಶ್ಯನಲ್ಲಿಲ್ಲ, ವೈಶ್ಯನಲ್ಲಿರುವ ಶಕ್ತಿ ಶೂದ್ರ ಮತ್ತು ಅಂತ್ಯಜರಲ್ಲಿಲ್ಲ."

ಶಂಕರಾಚಾರ್ಯರ ಉತ್ತರವನ್ನು ಕೇಳಿ ಚಾಂಡಾಲ ಅಟ್ಟಹಾಸದಿಂದ ನಕ್ಕು ಹೇಳಿದ, "ಸಾಧುಪುರುಷಾ, ಬ್ರಾಹ್ಮಣ ಮುಂತಾದ ಶ್ರೇಷ್ಠ ವಂಶದಲ್ಲಿ ಜನ್ಮಿಸಿದ ಮಾತ್ರಕ್ಕೆ ಶ್ರೇಷ್ಠತೆ ಬರುವುದೇ? ಇಲ್ಲ. ತನ್ನ ಸದ್ಗುಣಗಳಿಂದ ಮಾತ್ರವೇ ಮಾನವನು ಶ್ರೇಷ್ಠತೆಯನ್ನು ಪಡೆಯಬಹುದು. ಮನುಷ್ಯ ಉಚ್ಚ-ಅತಿ ಉಚ್ಚ ಕುಲದಲ್ಲಿ ಹುಟ್ಟಿದರೂ ಕೂಡ ಸದ್ಗುಣ ಮತು ಸತ್ಕರ್ಮಗಳೇ ಅವನ ಶ್ರೇಷ್ಠತೆಗೆ ಕಾರಣವಾಗುವವು. ಸದ್ಗುಣವಿಲ್ಲದ, ಸತ್ಕರ್ಮ ಹೀನನಾದವನು ಶ್ರೇಷ್ಠ ವಂಶದಲ್ಲಿ ಹುಟ್ಟಿದ್ದರೂ ಉಚ್ಚನೆಂದೆನಿಸಲಾರ. ತಾನು ಸರ್ವಶ್ರೇಷ್ಠನೆಂದು ತಿಳಿದುಕೊಳ್ಳುವುದು ಅಹಂಕಾರದ ಲಕ್ಷಣ. ಅಹಂಕಾರವು ಮನುಷ್ಯನ ಅಧಃಪತನಕ್ಕೆ ಕಾರಣವಾಗುವುದು. ನಿಜವಾಗಿಯೂ ಗುಣಿಗಳಾದವರು ಸದಾ ನಮ್ರರೂ ದಯಾಶೀಲರೂ ಆಗಿರುತ್ತಾರೆ. ಫಲಭರಿತ ವೃಕ್ಷಕ್ಕೆ ಜನ ಕಲ್ಲೆಸೆದರೂ ಅದು ಫಲಗಳನ್ನು ಕೊಡುತ್ತದೆ. ಫಲಭರಿತ ವೃಕ್ಷಕ್ಕೆ ಕಲ್ಲೆಸೆಯುವವರಂತೆ ಇರುತ್ತಾರೆ ನೀಚರು. ಇದೇ ಉಚ್ಚ, ನೀಚರನ್ನು ಗುರುತಿಸುವ ಬಗೆ."

ಚಾಂಡಾಲನ ಮಾತು ಕೇಳಿ ಆಚಾರ್ಯ ಶಂಕರರ ಕುತೂಹಲ ಹೆಚ್ಚಿತು. ಆತನ ಬಗ್ಗೆ ಅವರಲ್ಲಿ ಸ್ನೇಹವೂ ಸಾವಕಾಶ-ಸಾವಕಾಶವಾಗಿ ಬೆಳೆಯತೊಡಗಿತು.

ಶ್ವಪಚ ಮುಂದುವರಿದು ನುಡಿದ, "ಬ್ರಹ್ಮಚಾರಿ, ಓದಿದ ಮಾತ್ರಕ್ಕೆ ಯಾವನೂ ವಿದ್ವಾಂಸ

ಅಥವಾ ವಿಜ್ಞನಾಗಲಾರ. ವಿದ್ಯೆಯು "ಪ್ರಕೃತ ಜ್ಞಾನ"ಕ್ಕೆ ಕಾರಣವಾಗದು. ಅದಕ್ಕಾಗಿ ಬೇರೆ ಉಪಾಯಗಳು ಬೇಕು. ಪ್ರಕೃತ ಜ್ಞಾನ ವಿರದಿದ್ದರೆ ಉಚ್ಚಕುಲದಲ್ಲಿ ಜನ್ಮಿಸುವುದೇ ಮುಂತಾದವೆಲ್ಲ ವ್ಯರ್ಥ. ಅದಿಲ್ಲದೆ ಹೋದಾಗ ದೊಡ್ಡ ದೊಡ್ಡ ಪಂಡಿತರು ಕೂಡ ಅಜ್ಞಾನದ ಅಂಧಕಾರದಲ್ಲಿ ಮುಳುಗಿ ಹೋಗುತ್ತಾರೆ. ಸಮದರ್ಶಿಯಾಗಿರುವುದೂ ಪಾಂಡಿತ್ಯದ ಒಂದು ಲಕ್ಷಣ. ಸಮದರ್ಶಿಯಲ್ಲದವನು ಪಂಡಿತನೆನಿಸನು. ಸಮದರ್ಶಿಯಾಗುವುದಕ್ಕೆ ಯಾರಾದರೇನು? ಬ್ರಾಹ್ಮಣ, ಚಾಂಡಾಲ, ನಾಯಿ ಎಲ್ಲವೂ ಆ ಮಟ್ಟಿಗೆ ಸರಿಸಮಾನರು."

"ಶ್ವಪಚ ದೇಹಧಾರಿ ಪುರುಷಾ, ನಿನ್ನ ಜ್ಞಾನವೆಷ್ಟು ವಿಶಾಲವಾದುದೆಂದರೆ ಸಾಮಾನ್ಯರು ಅದರ ಬೆಲೆಯನ್ನು ಕಟ್ಟಲಾರರು. ನೀನಾಡಿರುವ ತತ್ತ್ವಪೂರ್ಣ ಮಾತುಗಳನ್ನು ಎಲ್ಲರೂ ಅರಿತುಕೊಳ್ಳಲಾರರು. ಆದ್ದರಿಂದಲೇ ಸರ್ವಸಾಮಾನ್ಯರಿಗಾಗಿ ಜಾತಿ ಮುಂತಾದ ಭೇದ ಭಾವಗಳು ಅವಶ್ಯವೂ ಅಪರಿಹಾರ್ಯವೂ ಆಗಿವೆ" ಎಂದು ಶಂಕರಾಚಾರ್ಯರು ಹೇಳಿದರು.

ಆಚಾರ್ಯರ ಮಾತನ್ನು ಮತ್ತೆ ಖಂಡಿಸುತ್ತ ಶ್ವಪಚ ಹೇಳಿದ. "ಬ್ರಾಹ್ಮಣ ಮುಂತಾದವರಲ್ಲಿ ಜಾತಿ ಭೇದವನ್ನು ಹುಟ್ಟಿಸುವ ಅಜ್ಞಾನವಿದೆಯಲ್ಲ, ಅದರಿಂದ ಮೋಹದ ಉತ್ಪತ್ತಿಯಾಗುವುದು. ಮೋಹದಿಂದ ಸತ್ತ್ವ, ರಜ ಮತ್ತು ತಮೋ ಗುಣಗಳು ಹುಟ್ಟುತ್ತವೆ. ತಮ್ಮಂಥ ಗುಣಾತೀತರಂತೂ 'ಆತ್ಮವತ್ ಸರ್ವಭೂತೇಷು' ಎಂದು ತಿಳಿಯುತ್ತೀರಿ. ತಮ್ಮ ಬಾಯಿಯಿಂದ ಇಂಥ ಮಾತುಗಳನ್ನು ಕೇಳಿ ನನಗೆ ತುಂಬ ಆಶ್ಚರ್ಯವೆನಿಸುತ್ತದೆ. ತಾವು ನನ್ನನ್ನು ಚಾಂಡಾಲನೆಂದು ತಿಳಿದುಕೊಂಡು ನೀಚನೆನ್ನುತ್ತಿರುವುದೂ ತಪ್ಪೇ ಆಗಿದೆ. ತಾವು ಅದ್ವೈತವಾದಿಗಳು, ಬ್ರಹ್ಮಜ್ಞಾನಿಗಳು, ಆತ್ಮಜ್ಞಾನಿಗಳು. ಆತ್ಮವನ್ನು ಗುರುತಿಸುವವನು ಯಾವ ಜೀವಿಯನ್ನೂ ತಿರಸ್ಕಾರದಿಂದ ನೋಡುವುದಿಲ್ಲ. ತಾವು ಅದ್ವೈತವಾದದ ಸಂಚಾಲಕರು ಆಗಿದ್ದೀರಿ. ಆದರೆ ಸ್ವತಃ ಅದ್ವೈತವಾದದಲ್ಲಿ ವಿಶ್ವಾಸವಿಲ್ಲವೇ ತಮಗೆ? ತಮ್ಮ ಮಾತು ಮತ್ತು ಕೃತಿಯಲ್ಲಿ ಎಷ್ಟೊಂದು ವಿಷಮತೆಯಿದೆ! ತಾವು ಅದ್ವೈತವಾದದ ಶಿಕ್ಷಕರಾಗಿದ್ದೂ 'ಬಹುವಾದ'ದ ಭ್ರಮೆಯಲ್ಲಿ ತೊಡಗಿಕೊಂಡಿದ್ದೀರಿ. ತಮ್ಮ 'ಸಂನ್ಯಾಸಕರ್ಮ' ಮತ್ತು ವೇಷಭೂಷಣ ಮತ್ತು ಕೃತಿಗಳಲ್ಲಿ ಅಂತರವೇಕೆ ಕಾಣಿಸುತ್ತಿದೆ? ನನ್ನ ಮತ್ತು ತಮ್ಮ ಶರೀರದಲ್ಲಿ ಯಾವ ಭೇದವೂ ಕಾಣಿಸುವುದಿಲ್ಲ. ಮತ್ತೆ ಶರೀರ ನಶ್ವರವಾಗಿದ್ದು ಅಮರವಾಗಿರುವುದು ಆತ್ಮವೊಂದೇ. ಆತ್ಮವು ಎಲ್ಲರಲ್ಲಿಯೂ ಸಮಾನವಾಗಿರುವುದು. ಆತ್ಮ ಮತ್ತು ಶರೀರದಲ್ಲಿ ಭೇದ ಭಾವವನ್ನೆಣಿಸಿಯೆ ಸಾಮಾನ್ಯ ಜನರು ಮಾಯಾಜಾಲದಲ್ಲಿ ಸಿಲುಕಿಕೊಂಡು ಒದ್ದಾಡುತ್ತಾರೆ."

ಶ್ವಪಚನ ಶ್ರೇಷ್ಠ ಜ್ಞಾನವನ್ನು ಕಂಡು ಆಚಾರ್ಯ ಶಂಕರರು ಸ್ತಂಭಿತರಾದರು. ಶ್ರೀ ಶಂಕರಾಚಾರ್ಯರು ಧ್ಯಾನಮಗ್ನರಾಗಿ ಆ ಶ್ವಪಚ ರೂಪಧಾರಿ ದಿವ್ಯಪುರುಷನ ಅಸ್ತಿತ್ವವನ್ನು ಯೋಚಿಸತೊಡಗಿದಾಗ ಅವರಿಗೆ ಚಾಂಡಾಲನ ಸ್ವರೂಪದಲ್ಲಿ ವಾರಾಣಸಿ ಪತಿ ವಿಶ್ವನಾಥನೇ ಕಾಣತೊಡಗಿದ. *



ಸಂಸ್ಕೃತಿಯನ್ನು ಸಹಿಸುವಂಥ ಜನರನ್ನು ನಿರ್ಮಿಸುವುದೇ ಸಂಸ್ಕೃತಿಯ ಮಹತ್ವದ ಸಾಧನೆ ಎನ್ನಬಹುದು.

— ಫ್ರಾಂಕ್‌ಲಿನ್ ಜೋನ್ಸ್

ಎಲ್ಲೆಡೆಯ ಮಕ್ಕಳ ಪ್ರತಿಭೆಯ
ಪ್ರಕಾಶನಕ್ಕೆ ಒಂದು ಸುವರ್ಣ ಸಂಧಿ

## ಶಂಕರ

# ಅಂತಾರಾಷ್ಟ್ರೀಯ ಮಕ್ಕಳ ಕಲಾಸ್ಪರ್ಧೆ

ಆಸ್ಟ್ರೇಲಿಯದ ಉತ್ತರ ಭಾಗದಲ್ಲಿರುವ ಬಾಥರ್ಸ್ಟ್ ನಡುಗಡ್ಡೆ. ಹಿತಕರವಾದ ಬಿಸಿಲಿನಲ್ಲಿ ಅಲ್ಲಿಯ ಮೂಲನಿವಾಸಿಗಳ ಮಕ್ಕಳನೇಕರು ನಿಂತಿದ್ದರು. ಎಲ್ಲರ ಕಣ್ಣುಗಳೂ ಕುತೂಹಲ, ಉತ್ಸಾಹ, ಹೆಮ್ಮೆಗಳಿಂದ ಹೊಳೆಯುತ್ತಿದ್ದವು. ಭಾರತ ಸರಕಾರದ ಪರವಾಗಿ ಅವರ ಶಿಕ್ಷಕ ಒಂದು ಗಂಟನ್ನು ಬಿಚ್ಚಿದರು. ಒಳಗಿಂದ ಲಕಲಕ ಹೊಳೆಯುವ ನಾಲ್ಕು ಬೆಳ್ಳಿಯ ಹರಿವಾಣಗಳು ಹೊರಬಂದವು.

ಆ ಮಕ್ಕಳಲ್ಲಿ ನಾಲ್ವರು ಮುಂದೆ ಬಂದು ತಮಗೆ ಬಂದ ಈ ಬಹುಮಾನಗಳನ್ನು ಸ್ವೀಕರಿಸಿದರು. ಭಾರತದಲ್ಲಿರುವ ಆಸ್ಟ್ರೇಲಿಯನ್ ಹೈ-ಕಮೀಶನರರ ಪತ್ರ ಮತ್ತು ಭಾರತದ ಪ್ರಧಾನ ಮಂತ್ರಿ ಶ್ರೀ ನೆಹರೂರ ಭಾವಚಿತ್ರಗಳೊಂದಿಗೆ ಬಂದಿದ್ದ ಈ ಬೆಳ್ಳಿ ಹರಿವಾಣಗಳು ಭಾರತದ ಶಂಕರ ಅಂತಾರಾಷ್ಟ್ರೀಯ ಮಕ್ಕಳ ಕಲಾಸ್ಪರ್ಧೆಯಲ್ಲಿ ಈ ಮಕ್ಕಳಿಗೆ ಸಿಕ್ಕ ಬಹುಮಾನಗಳಾಗಿದ್ದವು. "ನಾನು ಬಾಳುವುದು ಹೀಗೆ" ಎಂಬ ಈ ಸ್ಪರ್ಧೆಯಲ್ಲಿ ಆಸ್ಟ್ರೇಲಿಯದ ಮೂಲ ನಿವಾಸಿ ಮಕ್ಕಳು ಭಾಗವಹಿಸಿದ್ದು ಇದೇ (೧೯೬೦) ಮೊದಲ ಸಲವಾಗಿತ್ತು. ಅವರಲ್ಲಿ ನಾಲ್ವರಿಗೆ ಬಹುಮಾನಗಳೂ ಬಂದಿದ್ದವು.

ಇಂಥ ಬಹುಮಾನ ವಿತರಣ ಸಮಾರಂಭಗಳು ಕಾಮನ್‌ವೆಲ್ತಿನ ಎಲ್ಲ ಮತ್ತು ಇತರ ದೇಶಗಳಲ್ಲಿಯೂ ಪ್ರತಿ ವರ್ಷ ನಡೆಯುತ್ತಿವೆ. ಈ ಅಂತಾರಾಷ್ಟ್ರೀಯ ಮಕ್ಕಳ ಕಲಾಸ್ಪರ್ಧೆಯನ್ನು ಭಾರತದ ಪತ್ರಿಕೋದ್ಯಮಿ ಕಲಾವಿದ ಶ್ರೀ ಶಂಕರ ಪಿಳ್ಳೆ (ಇವರು ಪ್ರಸಿದ್ಧ ವ್ಯಂಗ ಚಿತ್ರಕಾರರು. ಇವರ "ಶಂಕರ್ಸ್ ವೀಕ್ಲಿ" ಪತ್ರಿಕೆ ತುಂಬ ಜನಪ್ರಿಯವಾಗಿದೆ) ಇವರು ಏರ್ಪಡಿಸುತ್ತಿದ್ದು ಈ ಬಹುಮಾನ ವಿತರಣ ಸಮಾರಂಭಗಳು ಮುಂದಿನ ವರ್ಷದ ಸ್ಪರ್ಧೆಗೆ ಆ ಆ ದೇಶಗಳಲ್ಲಿ ನಾಂದಿಯನ್ನು ಹಾಕುತ್ತವೆ.

ಮಕ್ಕಳಲ್ಲಿ ತುಂಬ ಆಸ್ಥೆ-ಪ್ರೇಮಗಳಿರುವ ಶಂಕರರು ಅವರ ಸ್ವಾಭಾವಿಕ ಗುಣಗಳ ವಿಕಾಸಕ್ಕೆ ಪ್ರೋತ್ಸಾಹವೀಯುವಂಥ ಯೋಜನೆಗಳಲ್ಲಿ ಮನಸ್ಸು ಹಾಕಿ ಬಹುವಾಗಿ ಶ್ರಮಿಸುತ್ತಿದ್ದಾರೆ. ಮಕ್ಕಳ ನೃತ್ಯ ಮತ್ತು ನಾಟ್ಯ ಮಹೋತ್ಸವಗಳನ್ನು ಇವರು ಏರ್ಪಡಿಸಿದ್ದಾರೆ. ವಿವಿಧ ಪ್ರಕಾರದ ೩೫೦೦ ಮಕ್ಕಳ ಆಟಿಗೆ ಗೊಂಬೆಗಳನ್ನು ಸಂಗ್ರಹಿಸಿರುವ ಇವರು ಅದನ್ನು ಮಕ್ಕಳ ಸಂಗ್ರಹಾಲಯವೊಂದರಲ್ಲಿ ಇಡುವ ಯೋಜನೆ ಮಾಡಿದ್ದಾರೆ. ಭಾರತದಲ್ಲಿ ಮಕ್ಕಳಿಗಾಗಿ ಇನ್ನೂ ಉತ್ತಮ ಪುಸ್ತಕಗಳನ್ನು ಹೊರಡಿಸುವ ಯೋಜನೆಯೊಂದನ್ನೂ ಇವರು ಕಾರ್ಯಗತ ಮಾಡಲಿದ್ದಾರೆ.

"ಕಾಮನ್‌ವೆಲ್ತ್ ಟುಡೇ" ಆಧಾರದಿಂದ

ಚಂದ್ರನಗರದ
ಶಿಮಾ ರಾಯ್
(ವಯಸ್ಸು ೩ ವರ್ಷ)
ಬರೆದ
"ಬುಟ್ಟಿಯ ಹುಡುಗಿ"
ಚಿತ್ರ ಪ್ರಥಮ ಬಹುಮಾನ
ಪಡೆದದ್ದು



೧೯೪೮ ರಲ್ಲಿ "ಶಂಕರ್ಸ್ ವೀಕ್ಲಿ"ಯ ಮಕ್ಕಳ ವಿಶೇಷ ಸಂಚಿಕೆಯೊಂದನ್ನು ಹೊರಡಿಸಲು ಶಂಕರರು ನಿರ್ಧರಿಸಿದಾಗಲೇ ಈ ಅಂತಾರಾಷ್ಟ್ರೀಯ ಕಲಾ ಮತ್ತು ಸಾಹಿತ್ಯ ಸ್ಪರ್ಧೆಗಳ ವಿಚಾರ ಅವರಲ್ಲಿ ಬಂತು. ವಿಶೇಷ ಸಂಚಿಕೆ ಯಶಸ್ವಿಯಾದರೂ ಅದರಲ್ಲಿರುವ ಕೊರತೆಯನ್ನು ಶಂಕರರು ಕಂಡುಕೊಂಡರು. ಅದರಲ್ಲಿ ಮಕ್ಕಳ ಬಗ್ಗೆ ಹೇರಳವಾಗಿ ಮಾತುಗಳು ಬಂದಿದ್ದರೂ ಮಕ್ಕಳೇ ಸೃಷ್ಟಿಸಿದ್ದು ಅದರಲ್ಲಿ ಏನೂ ಇರಲಿಲ್ಲ. ಆದ್ದರಿಂದ ಅವರು ೧೯೪೯ ರ ಮಕ್ಕಳ ವಿಶೇಷ ಸಂಚಿಕೆಯಲ್ಲಿ ಮಕ್ಕಳ ಕಥೆ, ಕವಿತೆ, ಚಿತ್ರಗಳಿಗೆ ಬಹುಮಾನ ಸಾರಿದರು. ಆ ವರ್ಷ ೧೩೦೦ ಚಿತ್ರ, ಕಥೆ, ಕವಿತೆಗಳು ಬಂದವು. ಬರಬರುತ್ತ ಈ ವಿಶೇಷ ಸಂಚಿಕೆಯಲ್ಲಿ ಪ್ರಬುದ್ಧರ ಕೈವಾಡ ಕಡಿಮೆಯಾಗುತ್ತ ಕೊನೆಗೆ ಅದರಲ್ಲಿ ಕೇವಲ ಮಕ್ಕಳ ರಚನೆಗಳಷ್ಟೇ ಇರುವಂತಾಯಿತು.

ಅಲ್ಲಿಂದ ಮುಂದಿನ ಹೆಜ್ಜೆ ಇದಕ್ಕೆ ಅಂತಾರಾಷ್ಟ್ರೀಯ ಸ್ವರೂಪವನ್ನು ಕೊಡುವುದೇ ಆಗಿತ್ತು. ಅಂತಾರಾಷ್ಟ್ರೀಯ ಸ್ಪರ್ಧೆ ಜಾಹೀರಾದದ್ದೇ ತಡ, ಮೊದಲನೆಯ ವರ್ಷವೇ ಅಂದರೆ ೧೯೫೦ ರಲ್ಲಿ ೧೩ ದೇಶಗಳ ಮಕ್ಕಳು ಭಾಗವಹಿಸಿದರು. ೧೯೫೯ ರ ಸ್ಪರ್ಧೆಯಲ್ಲಿ ಜಗತ್ತಿನ ಎಲ್ಲ ದೇಶಗಳ ಮಕ್ಕಳಿಂದ ೬,೦೦೦ ಚಿತ್ರಗಳು ಬಂದವು. ಈ ಸಲದ (೧೯೬೦) ಸ್ಪರ್ಧೆಗೆ ೬೮ ದೇಶಗಳಿಂದ ೬೦,೦೦೦ ಚಿತ್ರಗಳೂ ೫,೦೦೦ ಕಥೆ ಕವಿತೆ ಮುಂತಾದವೂ ಬಂದಿದ್ದವು. ಆದಷ್ಟು

ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಈ ಸ್ಪರ್ಧೆಯಲ್ಲಿ ಭಾಗವಹಿಸಲೆನ್ನುವುದಕ್ಕಾಗಿ ಈ ಸ್ಪರ್ಧೆಯ ನಿಯಮಗಳು ಅತ್ಯಂತ ಸರಳವಾಗಿವೆ. ಈ ವರ್ಷ ಒಟ್ಟು ೩೯೪ ಬಹುಮಾನಗಳು ಕೊಡಲ್ಪಟ್ಟಿವೆ. ಜೊತೆಗೆ ಈ ವರ್ಷದ ಮಕ್ಕಳ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿರುವ ಪ್ರತಿಯೊಂದು ಚಿತ್ರ ಮತ್ತು ಲೇಖನಗಳ ಕರ್ತರಿಗೆ ವಿಶೇಷ ಸಂಚಿಕೆಯ ಪ್ರತಿಯನ್ನು ಉಚಿತ ಕೊಟ್ಟಿದ್ದಾರೆ.

ಶಂಕರರ ದಿಲ್ಲಿಯ ಕಚೇರಿಯಲ್ಲಿ ಸ್ಪರ್ಧೆಯಲ್ಲಿ ಭಾಗವಹಿಸಿದ ಪ್ರತಿಯೊಂದು ಮಗುವಿನ ಹೆಸರು ಮತ್ತು ವಿಳಾಸಗಳ ಯಾದಿಯನ್ನು ಇಟ್ಟಿರುತ್ತಾರೆ. ಪ್ರತಿ ಸ್ಪರ್ಧೆಯ ಸಮಯದಲ್ಲೂ ಅವರಿಗೆ ಸ್ಪರ್ಧೆಯ ಪ್ರಕಟನೆಗಳನ್ನು ಕಳಿಸುವುದರಿಂದ ಸ್ಪರ್ಧೆಯಲ್ಲಿ ಭಾಗವಹಿಸಿದವರೊಡನೆ ಸಂಪರ್ಕವಿಟ್ಟುಕೊಳ್ಳುವುದು ಸಾಧ್ಯವಾಗುತ್ತದೆ. ಸ್ಪರ್ಧೆಯ ಪ್ರಕಟನೆಗಳನ್ನು ಸಹಸ್ರಾರು ಸಂಖ್ಯೆಯಲ್ಲಿ ದೇಶ ದೇಶಗಳಲ್ಲಿರುವ ಭಾರತದ ರಾಯಭಾರಿ ಕಚೇರಿಗಳ ಮೂಲಕ ಮತ್ತು ನೇರವಾಗಿ ಅಲ್ಲಿಯ ಮಕ್ಕಳಲ್ಲಿ ಹಂಚಲಾಗುತ್ತದೆ.

ಯಾವ ದೇಶದ ಮಕ್ಕಳೇ ಆಗಲಿ– ಅವರು ಹದಿನಾರು ವರ್ಷದೊಳಗಿನವರಾಗಿದ್ದರೆ ಸಾಕು-ಈ ಕಲಾ ಮತ್ತು ಸಾಹಿತ್ಯಸ್ಪರ್ಧೆಯಲ್ಲಿ ಭಾಗವಹಿಸಬಹುದು. ಚಿತ್ರಗಳಾಗಲಿ, ಲೇಖನ ಕವಿತೆಗಳಾಗಲಿ ಚಾಲೂ ವರ್ಷದಲ್ಲಿಯೇ ಯಾರ ಸಹಾಯವಿಲ್ಲದೆಯೇ ಸ್ವತಂತ್ರವಾಗಿ ಬರೆದವಿರಬೇಕು. ಚಿತ್ರಗಳನ್ನು ಪೆನ್ಸಿಲೊಂದನ್ನು ಬಿಟ್ಟು ಬೇರೆ ಯಾವ ಸಾಧನದಿಂದಲೇ ಆಗಲಿ ಬರೆಯಬಹುದು. ಚಿತ್ರ ಆಕಾರದಲ್ಲಿ ೮×೧೦ ಇಂಚುಗಳಿಗಿಂತ ಕಡಿಮೆಯಾಗಿರಬಾರದು. ಕಥೆ — ಕವಿತೆಗಳನ್ನು ಇಂಗ್ಲಿಷಿನಲ್ಲಿಯೆ ಸ್ವಂತ ಅಕ್ಷರದಿಂದ ಬರೆದಿರಬೇಕು. ಸ್ಪರ್ಧಾಳು ತನಗೆ ತೋರಿದ ವಿಷಯದ ಮೇಲೆ ಚಿತ್ರಗಳನ್ನು ಬಿಡಿಸಬಹುದು, ಕಥೆ ಬರೆಯಬಹುದು, ಕವಿತೆ ಬರೆಯಬಹುದು. ಸ್ಪರ್ಧಾಳುಗಳಲ್ಲಿ ಮೂರು ವರ್ಷದ ಮಕ್ಕಳು ಕೂಡ ಭಾಗವಹಿಸುತ್ತಿದ್ದಾರೆ.

ಹೊಸ ದಿಲ್ಲಿಯಲ್ಲಿ ಸ್ಪರ್ಧೆಗೆ ಬಂದ ಚಿತ್ರ,

ಚಿತ್ರ ಕಲಾ ಸ್ಪರ್ಧೆಯ ಅಂಗವಾದ
"ಆಶುಚಿತ್ರ" ಸ್ಪರ್ಧೆಯಲ್ಲಿ ಮಕ್ಕಳು



ಕಥೆ, ಕವಿತೆ ಮುಂತಾದವುಗಳನ್ನು ಆ ಆ ವಯಸ್ಸಿನ ಗುಂಪುಗಳಲ್ಲಿ ಪ್ರತ್ಯೇಕಿಸಿ ಪ್ರತಿಯೊಂದಕ್ಕೂ ಒಂದು ಕೋಡ್ ನಂಬರ ಕೊಡುತ್ತಾರೆ. ನಿರ್ಣಾಯಕರಿಗೆ ಸ್ಪರ್ಧಾಳುಗಳ ವಯಸ್ಸೊಂದನ್ನು ಬಿಟ್ಟರೆ ಅವರ ಹೆಸರು, ವಿಳಾಸ ಯಾವುದನ್ನೂ ತಿಳಿಸುವುದಿಲ್ಲ. ಬಹುಮಾನ ಸಾರಿದ ನಂತರವೇ ಈ ವಿಚಾರಗಳನ್ನು ಬಹಿರಂಗ ಪಡಿಸುವರು.

ದಿನಕ್ಕೊಂದು ವಯಸ್ಸಿನವರ ಗುಂಪಿನಂತೆ ಸಾಧಾರಣ ಹದಿನೈದು ದಿನಗಳ ವರೆಗೆ ಪರೀಕ್ಷಕರ ಕಾರ್ಯ ನಡೆಯುತ್ತದೆ. ನಿರ್ಣಾಯಕರು ಚಿತ್ರ ಅಥವಾ ಲೇಖನದಲ್ಲಿ ನಾವೀನ್ಯ, ಸ್ಫೂರ್ತಿ, ಕಲ್ಪಕತೆಗೇ ಹೆಚ್ಚು ಮಹತ್ವ ಕೊಡುತ್ತಾರೆ.

ಸಾಮಾನ್ಯವಾಗಿ ೩೫೦ ಕ್ಕಿಂತ ಹೆಚ್ಚು ಬಹುಮಾನಗಳು ಕೊಡಲ್ಪಡುತ್ತವೆ. ರಾಷ್ಟ್ರಪತಿಗಳ ಬಂಗಾರದ ಪದಕ ಬೇರೆ ಬೇರೆ ವಯಸ್ಸಿನ ಗುಂಪುಗಳಲ್ಲಿ ಪ್ರತಿಯೊಂದರಲ್ಲಿ ಅತ್ಯುತ್ತಮವೆಂದು ಸಾರಲ್ಪಟ್ಟ ವರ್ಣ ಚಿತ್ರಗಳಿಗೆ ಸಿಗುತ್ತದೆ. ಅದೇ ರೀತಿ ಉತ್ತಮವೆಂದು ನಿರ್ಣಯವಾದ ಸಾಹಿತ್ಯ ಕೃತಿಗೆ ಉಪರಾಷ್ಟ್ರಪತಿಗಳ ಬಂಗಾರದ ಪದಕ ಸಿಗುತ್ತದೆ. ಇವೆರಡು ವಿಭಾಗಗಳಲ್ಲೂ ಅತ್ಯುತ್ತಮವೆನಿಸಿದವುಗಳಿಗೆ ಭಾರತದ ಪ್ರಧಾನ ಮಂತ್ರಿಗಳ ಬಹುಮಾನಗಳೂ ಸಿಗುತ್ತವೆ.

ಬಹುಮಾನಗಳನ್ನು ಪಡೆದ ಭಾರತದ ಮಕ್ಕಳಲ್ಲಿ ಅನೇಕರಿಗೆ ದಿಲ್ಲಿಗೆ ಹೋಗಿ ಸ್ವತಃ ಬಹುಮಾನ ಸ್ವೀಕರಿಸುವುದು ಸಾಧ್ಯವಾಗುವುದಾದರೂ ಭಾರತದ ಹೊರಗಿನವರಿಗೆ ಸಾಧ್ಯವಾಗುವುದಿಲ್ಲ. ಹೊರಗಿನ ದೇಶದ ಮಕ್ಕಳ ಪರವಾಗಿ ಅವರವರ ದೇಶದ ರಾಯಭಾರಿ ಅಥವಾ ಪ್ರತಿನಿಧಿ ದಿಲ್ಲಿಯಲ್ಲಿ ನಡೆದ ಬಹುಮಾನ ವಿತರಣ ಸಮಾರಂಭದ ಕಾಲದಲ್ಲಿ ಅವರ ಪರವಾಗಿ ಬಹುಮಾನ ಸ್ವೀಕರಿಸುತ್ತಾರೆ. ಆ ವೇಳೆ ಅವರು ಅದನ್ನು ಆ ಆ ಸ್ಪರ್ಧಾಳುವಿಗೆ ಕಳಿಸಿ ಕೊಡುತ್ತಾರೆ.

ಬಹುಮಾನ ಪಡೆದ ಕೃತಿಗಳೆಲ್ಲಾ 'ಶಂಕರ್ಸ್ ವೀಕ್ಲಿ'ಯ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗುವವು. ಸಾಹಿತ್ಯಕೃತಿಗಳಿಗಿಂತ ಚಿತ್ರಗಳೇ ಹೆಚ್ಚಾಗಿ ಬರುವವಾದರೂ ಸಾಹಿತ್ಯ ಕೃತಿಗಳಲ್ಲಿ ಕೂಡ ಮಕ್ಕಳ ಅಸಾಧಾರಣ ನಿರೀಕ್ಷಣ ಶಕ್ತಿ, ಕಲ್ಪನಾಶಕ್ತಿ ಕಂಡುಬರುತ್ತವೆ.

ಈ ಸ್ಪರ್ಧೆಯಲ್ಲಿ ಅತ್ಯುತ್ತಮವೆನಿಸುವವುಗಳನ್ನು ಆರಿಸುತ್ತಿರುವಾಗ ದಿಲ್ಲಿಯಲ್ಲಿ ಇನ್ನೊಂದು ಚಿಕ್ಕ ಸ್ಪರ್ಧೆಯೂ ನಡೆಯುತ್ತದೆ. ಈ ಸ್ಪರ್ಧೆಯಲ್ಲಿ ಭಾಗವಹಿಸುವ ಮಕ್ಕಳು ಸಮಕ್ಷಮ ಬಂದು ತಮಗೆ ಹೇಳಿದ ವಿಷಯಗಳನ್ನು ಕುರಿತು ವರ್ಣ ಚಿತ್ರಗಳನ್ನು ಬರೆಯುತ್ತಾರೆ. ಯಾರ ಸಹಾಯವಿಲ್ಲದೆ ಮಕ್ಕಳು ಅದ್ಭುತ ಕಲಾನೈಪುಣ್ಯವನ್ನು ತೋರಬಲ್ಲರು ಎನ್ನುವುದಕ್ಕೆ ಈ ಸ್ಪರ್ಧೆ ಒಂದು ಸಾಕ್ಷಿಯಾಗಿದೆ.

ಈ ಸ್ಪರ್ಧೆಯ ವ್ಯಾಪ್ತಿಯನ್ನು ಬೆಳೆಸುವ ವಿಚಾರ ಶಂಕರರಿಗಿದೆ. ಬಹುಮಾನಿತ ಕೃತಿಗಳ ಪ್ರದರ್ಶನ ಬೇರೆ ಬೇರೆ ದೇಶಗಳಲ್ಲಿಯೂ ನಡೆಯುವಂತೆ ಮಾಡಲು ಅವರು ಹವಣಿಸುತ್ತಿದ್ದಾರೆ. ಅವರಿಗೆ ಮಕ್ಕಳ ಈ ಚಿತ್ರಗಳೆಂದರೆ ಸ್ನೇಹ-ಸದ್ಭಾವಗಳ ಸಂಕೇತಗಳು. "ಮಕ್ಕಳ ಚಿತ್ರಗಳಲ್ಲಿಯ ಸರಳ ಸಹಜ ಸಂದೇಶವು ಪ್ರಬುದ್ಧರಲ್ಲಿ ಹೆಚ್ಚು ವಿವೇಕವನ್ನು ಮೂಡಿಸಲಿ" ಎನ್ನುತ್ತಾರವರು. *



ಆಯಾಸಕ್ಕೂ ಆಲಸಿಕೆಗೂ ಅಂತರವನ್ನು ಗುರುತಿಸುವುದೇ ನನಗೆ ದೊಡ್ಡ ಸಮಸ್ಯೆಯಾಗಿದೆ.

— ಒಬ್ಬ ಡಾಕ್ಟರ್

ಬಂಡಾಯಗಾರನಾದರೂ
ಸಂಪ್ರದಾಯವಾದಿ

# ಚಕ್ರವರ್ತಿ

# ರಾಜಗೋಪಾಲಾಚಾರಿ

ರಾಧಾಕೃಷ್ಣ ರಾವ್

ರಾಜಾಜಿಯ ಜಾತಕ ಕಳೆದು ಹೋಗಿದೆಯಂತೆ. ಅವರಿಗೆ ತಮ್ಮ ವಯಸ್ಸಿನ ಲೆಕ್ಕವೂ ತಪ್ಪಿಹೋಗಿದೆಯಂತೆ. ತಪ್ಪಿಯೆ ಹೋಗಿರಬೇಕು. ಇಲ್ಲದಿದ್ದರೆ ಎಂಭತ್ತನೇ ಹುಟ್ಟುಹಬ್ಬ ದಾಟಿದ ಊರುಗೋಲಿನ ನಲುಗು ತಲೆಯ ಮನುಷ್ಯನೊಬ್ಬ ಹೊಸ ರಾಜಕೀಯ ಪಕ್ಷವನ್ನು ಸ್ಥಾಪಿಸುವುದೆಂದರೇನು? ಅದರ ಪ್ರಚಾರಕ್ಕಾಗಿ ದೇಶವನ್ನೆಲ್ಲ ಸಂಚರಿಸುವುದೆಂದರೇನು? ಎಂಭತ್ತು ದಾಟಿದಾತ ಮದುವೆಯಾಗಿ ಮಕ್ಕಳನ್ನು ಹಡೆಯುವೆನೆಂದಾಗ ಹೇಗೋ ಹಾಗೆ ಜನ ನಗರೆ?

ನಗಲಿ, ರಾಜಾಜಿಗೆ ಅದರಿಂದ ಏನೂ ಕೆಡುಕೆನಿಸುವುದಿಲ್ಲ. ಅವರು ಗೇಲಿ, ಕೂಗಾಟ, ಬೈಗಳು ಎಲ್ಲಕ್ಕೂ ಅನಾಸಕ್ತರಾದ ವ್ಯಕ್ತಿ. ಅವರು ತಮ್ಮ ಕರ್ತವ್ಯವನ್ನಷ್ಟೇ ಮಾಡುತ್ತಿದ್ದಾರೆ. ಅವರು ಯಾವಾಗಲೂ ಕರ್ತವ್ಯವನ್ನೇ ಮಾಡುತ್ತ ಬಂದಿದ್ದಾರೆ- ಅದು ಎಷ್ಟೇ ಕಹಿಯಾಗಿರಲಿ.

೧೯೪೨ ರಲ್ಲಿ ಭಾರತ ಚಲೇಜಾವ್ ಚಳವಳಿಯ ಬಿಸಿಯಲ್ಲಿದ್ದಾಗ ಚಳವಳಿ ಬೇಡ, ಬ್ರಿಟಿಶರೊಡನೆ ಸಹಕರಿಸೋಣ ಎಂಬ ಕಹಿ ಸೂಚನೆಯನ್ನು ರಾಜಾಜಿ ಪ್ರಚುರಪಡಿಸಿದರು. ಇದರ ಫಲವಾಗಿ ಅವರಿಗೆ ಜನರಿಂದ ಕಳಿತ ಟೊಮ್ಯಾಟೋ, ಕೊಳೆತ ತತ್ತಿಗಳ ಉಡುಗರೆ ಸಿಕ್ಕಿತೆಂಬುದರಿಂದ ಅದು ಕಹಿಯಾಗಿರಲಿಲ್ಲ; ಬರೇ ಇಪ್ಪತ್ತು ವರ್ಷ ಹಿಂದೆ ಇದೇ ರಾಜಾಜಿ, ಬ್ರಿಟಿಶರೊಡನೆ ಸಹಕರಿಸೋಣ ಎಂದವರ ವಿರುದ್ಧ ಗಯಾ ಕಾಂಗ್ರೆಸ್ಸಿನಲ್ಲಿ ತಮ್ಮ ಅಜೇಯ ವಾದವೈಖರಿಯನ್ನುಪಯೋಗಿಸಿ ಗಾಂಧೀಜಿಯ ಅಸಹಕಾರ ಚಳವಳಿಗೆ ಕಾಂಗ್ರೆಸ್ಸಿನ ಸಮ್ಮತಿ ಮುದ್ರೆ ದೊರಕಿಸಿಕೊಟ್ಟವರಾಗಿದ್ದರೆಂಬುದರಿಂದ ಅವರಿಗೇ ಅದು ಕಹಿಯಾಗಿರಬೇಕು. ಮದ್ರಾಸಿನಲ್ಲಿ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆ ಸ್ಥಾಪಿಸಲ್ಪಟ್ಟಾಗ ಅವರು ಅದರ ಉಪಾಧ್ಯಕ್ಷರಾದರು; ಹತ್ತು ವರ್ಷದ ನಂತರ ಅವರು ಮದ್ರಾಸಿನ ಪ್ರಧಾನಿಯಾದಾಗ ಹಿಂದಿಯನ್ನು ಕಡ್ಡಾಯವಾಗಿ ಕಲಿಸುವ ಆಜ್ಞೆ ಹೊರಡಿಸಿದರು; ಇಪ್ಪತ್ತು ವರ್ಷಗಳ ನಂತರ "ಹಿಂದಿ ಸಾಮ್ರಾಜ್ಯವಾದ"ವನ್ನು ಖಂಡಿಸುವ ಕಹಿ ಕೆಲಸವನ್ನವರು ಕಲ್ಮನಸಿನಿಂದ ಮಾಡಿದರು. ಇದರಿಂದ ಉತ್ತರ ಭಾರತಕ್ಕೆ ಅವರು ಭೆಟ್ಟಿ ಕೊಟ್ಟಾಗ ಜನಜಂಗುಳಿ ರೇಗಿತು.

ರಾಜಾಜಿ ರೇಗಲಿಲ್ಲ. ಅವರು ಎಂದೂ ರೇಗುವುದಿಲ್ಲ, ಎಂದೂ ಬಿಸಿಯೇರುವುದಿಲ್ಲ. ಅವರೊಡನೆ ಜೇಲಿನಲ್ಲಿದ್ದ ನನ್ನ ಪರಿಚಿತರೊಬ್ಬರು ದಿವಂಗತ ಪಟ್ಟಾಭಿ ಸೀತಾರಾಮಯ್ಯ ಮತ್ತು ರಾಜಾಜಿಯ ತುಲನಾತ್ಮಕ ತಣ್-ತಲೆಯನ್ನು ಕುರಿತು ಹೇಳುತ್ತಿದ್ದರು. ಸೆರೆಮನೆಯಲ್ಲಿ ನಡೆಯುವ ಚರ್ಚೆಗಳಲ್ಲಿ ಕೈದಿಗಳ ಮೂರ್ಖ ವಾದಗಳಿಂದ ಇತರ ಮುಂದಾಳುಗಳು ಸಿಟ್ಟಿಗೇಳುತ್ತಿದ್ದರು. ಆದರೆ ಪಟ್ಟಾಭಿ ಮತ್ತು ರಾಜಾಜಿ ಎಂಥ ಮೂರ್ಖ ವಾದಗಳನ್ನೂ ಕೂಡ ತಣ್ಣಗೆ ಉತ್ತರಿಸುತ್ತಿದ್ದರು. ವಾದ ಮುಂದುವರಿದರೆ ಪಟ್ಟಾಭಿ ಮೂರನೇ ದಿನದ ಕೊನೆಗೆ ಕೋಪಾವಿಷ್ಟರಾಗುತ್ತಿದ್ದರು;

ರಾಜಾಜಿ ಮಾತ್ರ ಏಳನೇ ದಿನದ ಕೊನೆಗೆ ಇನ್ನೂ ತಂಪಾಗಿಯೆ ಇರುತ್ತಿದ್ದರಂತೆ.

ರಾಜಾಜಿಯ ವಿರೋಧಿಗಳನ್ನೂ ವೈರಿಗಳನ್ನೂ ಕೆರಳಿಸುವ ವಿಷಯ ಇದೇ. ರಾಜಾಜಿಯನ್ನು ತಮ್ಮಂತೆ ಉದ್ರೇಕಗೊಳಿಸಲು ಸಾಧ್ಯವಿದ್ದಿದ್ದರೆ ಬಹುಶಃ ಅವರು ಈ ಮನುಷ್ಯನನ್ನು ಸ್ವಲ್ಪವಾದರೂ ಪ್ರೀತಿಸಬಹುದಿತ್ತು. ತಾವು ಬೈದಾಗ ರಾಜಾಜಿ ಪ್ರತಿಯಾಗಿ ಬೈದರೆ ಅವರಿಗೆ ತಮ್ಮ ಶ್ರಮ ಸಾರ್ಥಕವೆನಿಸಿ ಸಮಾಧಾನವಾಗಬಹುದಿತ್ತು. ಆದರೆ ರಾಜಾಜಿ ಅವರಿಗೀ ಅನುಗ್ರಹ ಮಾಡರು. ರಾಜಾಜಿ ಉದ್ರೇಕಗೊಂಡದ್ದನ್ನೇಕೆ, ಭಾವನಾವೇಗವನ್ನು ಪ್ರದರ್ಶಿಸಿದ್ದನ್ನೂ ಬಹುಶಃ ಒಂದೇ ಒಂದು ಸಂದರ್ಭ ಹೊರತು — ಯಾರೂ ಎಂದೂ ನೋಡಿಲ್ಲ; ಆ ಒಂದು ಸಂದರ್ಭ ಮದ್ರಾಸಿನಲ್ಲಿ ಅವರು ಪ್ರಥಮ ಪ್ರಧಾನಿಯಾಗಿದ್ದಾಗ ದ್ರವಿಡ ಕಳಗದವರು ಹೂಡಿದ ಹಿಂದೀ ವಿರೋಧಿ ಚಳವಳಿಯ ಕಾಲದಲ್ಲಿ ಸಂಭವಿಸಿತು. ಚಳವಳಿಗಾರರು ಮದ್ರಾಸಿನ ಬೀದಿಗಳಲ್ಲಿ ರಾಜಾಜಿಯವರನ್ನೂ ಅವರ ಮಕ್ಕಳನ್ನೂ ಅವಾಚ್ಯವಾಗಿ ಬೈಯುತ್ತ ಮೆರವಣಿಗೆ ತೆಗೆದಿದ್ದರು. ಆಗ ಮಾತ್ರ ರಾಜಾಜಿ ಶಾಸನ ಸಭೆಯಲ್ಲಿ ತುಸು ಭಾವಾವೇಗದಿಂದ ಮಾತಾಡಿದರು. "ಈ ಜನ ನನ್ನನ್ನು ಬೇಕಾದ ಹಾಗೆ ತೆಗಳಲಿ, ನನ್ನ ಮನೆಯವರನ್ನೇಕೆ ಇದರಲ್ಲಿ ಎಳೆ ತರುತ್ತಾರೆ?". ಎಂದು.

ವಾಸ್ತವಿಕ ಸಂಗತಿಯೆಂದರೆ ರಾಜಾಜಿ ಸಂಪೂರ್ಣ ಬುದ್ಧಿಜೀವಿ. ಪ್ರತಿಯೊಂದಕ್ಕೂ ಅವರಿಗೆ ವಿಚಾರ, ವಿವೇಕ, ತರ್ಕ ಇವೇ ನಿಕಷ. ಅವರ ತರ್ಕ ಅತ್ಯಂತ ಘೋರವಾದದ್ದು. ಅವರ ಪಾಂಡಿತ್ಯದಿಂದ ಅದಕ್ಕೆ ಇನ್ನಷ್ಟು ಕೂರ್ಪು ಬಂದಿದೆ. ವಿಚಾರಪ್ರಧಾನರಾದುದುರಿಂದ ಅವರು ಯಾವ ಗುಂಪಿನಲ್ಲೂ ಸರಿಯಾಗಿ ಬೆರೆಯಲಾರರು. ಆದ್ದರಿಂದಲೇ ಅವರು ಸನಾತನಿಯೂ ಅಲ್ಲ, ಸುಧಾರಕನೂ ಅಲ್ಲ; ಸಾಂಪ್ರದಾಯಿಕನೂ ಅಲ್ಲ, ಕ್ರಾಂತಿಕಾರಿಯೂ ಅಲ್ಲ; ಬಂಡವಳವಾದಿಯೂ ಅಲ್ಲ, ಸಮಾಜವಾದಿಯೂ ಅಲ್ಲ. ಅವರು ಎಲ್ಲ ಮಾರ್ಗಗಳಲ್ಲೂ ಎಲ್ಲೋ ನಡುವೆ ಇರುತ್ತಾರೆ.

ಹುಟ್ಟುವುದರಲ್ಲಿ ಕೂಡ ರಾಜಾಜಿ "ಎಲ್ಲೋ ನಡುವೆ"ಯೆ. ಅವರು ಸೇಲಂ ಜಿಲ್ಲೆಯ ಹೊಸೂರಿನ ಸಮೀಪ ತೋರಪಲ್ಲಿ ಎಂಬಲ್ಲಿ ಹುಟ್ಟಿದರು. ಇದು ಕನ್ನಡವೂ ಹೌದು, ತಮಿಳೂ ಹೌದು, ತೆಲುಗೂ ಹೌದು ಎಂಬಂಥ ಸಂಧಿಸ್ಥಾನ. (ರಾಜಾಜಿಯನ್ನು ಕೇಳಿದರೆ ಮೂರೂ ಅಲ್ಲ ಎಂದಾರು!) ಸಾಧಾರಣ ಅನುಕೂಲವಂತ ಶ್ರೀವೈಷ್ಣವ ಬ್ರಾಹ್ಮಣ ಮನೆತನ. ಪಾಂಡಿತ್ಯಕ್ಕೆ ಹೆಸರಾಂತ ಈ ಕುಲದಲ್ಲಿ ಚಕ್ರವರ್ತಿ ಅಯ್ಯಂಗಾರರ ಮೂರನೇ ಮಗನಾಗಿ ೧೮೭೯ ರಲ್ಲಿ (ಬಹುಶಃ!) ಹುಟ್ಟಿದ ರಾಜಗೋಪಾಲಾಚಾರಿ ಬಾಲ್ಯದಲ್ಲೆ ಸಂಸ್ಕೃತವನ್ನು ತಂದೆಯಿಂದ ಕಲಿತರು. ಬೆಂಗಳೂರಿನಲ್ಲಿ ಹೈಸ್ಕೂಲು ಕಾಲೇಜು ಅಭ್ಯಾಸ ಪೂರೈಸಿದ ಅವರಿಗೆ ಕನ್ನಡವೂ ಚೆನ್ನಾಗಿ ಗೊತ್ತು. ಸೆಂಟ್ರಲ್ ಕಾಲೇಜಿನಲ್ಲಿ ಅತಿ ಮೇಧಾವಿ ವಿದ್ಯಾರ್ಥಿಯೆಂದು ಅಧ್ಯಾಪಕರಿಗೆ ಪ್ರಿಯರಾಗಿದ್ದರು. ಆದರೆ ಲೋಕಮಾನ್ಯ ತಿಲಕರಿಂದ ಪ್ರಭಾವಿತರಾಗಿ ಇವರಿಗೆ "ತಲೆ ತಿರುಗಿದೆ" ಎಂದು ಅವರು ಹೇಳುತ್ತಿದ್ದರು.

ಮಗನ ಪ್ರಚಂಡ ಬುದ್ಧಿಯನ್ನು ಕಂಡು ಈತ ಐ. ಸಿ. ಎಸ್. ಆಗಿ ಬೆಳಗಬೇಕೆಂದುಕೊಂಡಿದ್ದ ತಂದೆಯ ಮಾತು ಕೇಳದೆ ರಾಜಗೋಪಾಲಾ-ಚಾರಿ ಮದ್ರಾಸಿನಲ್ಲಿ ವಕೀಲಿ ಅಭ್ಯಾಸ ಮಾಡಿ ಬಿ. ಎಲ್. ಆದರು. ಸೇಲಂನಲ್ಲಿ ಅವರು ವಕಾಲತ್ತು ಪ್ರಾರಂಭಿಸಿದ ಕೆಲ ಕಾಲದಲ್ಲೆ ಅಪ್ರತಿಮ ಕ್ರಿಮಿನಲ್ ವಕೀಲರೆಂದು ಪ್ರಸಿದ್ಧರಾದರು. ಮುಂದೆ ಖಾದಿ, ಗ್ರಾಮೋದ್ಯೋಗ, ಸರಳ ಜೀವನಗಳ ಕೈವಾರಿಯಾಗಲಿದ್ದ ರಾಜಗೋಪಾಲಾಚಾರಿ ಸೇಲಮಿನಲ್ಲಿ ಪ್ರಥಮ ಮೋಟಾರ್ ಕಾರನ್ನು ಕೊಂಡುಕೊಂಡರು

ಮಗ ಕೈತುಂಬ ಹಣ ಗಳಿಸುವುದನ್ನು ಕಂಡು ಚಕ್ರವರ್ತಿ ಅಯ್ಯಂಗಾರರು ಮಗನ ಅವಿಧೇಯತೆಯನ್ನು ಕ್ಷಮಿಸಿರಬೇಕು.

ಆದರೆ ಮಗನ ಆಚಾರಭ್ರಷ್ಟತೆಯ ಅನೇಕ ಚರ್ಯೆಗಳನ್ನು ನೋಡುವ ಭಾಗ್ಯ ಅವರ ಹಣೆಯಲ್ಲಿ ಬರೆದಿತ್ತು. ಬಹುಕಾಲದಿಂದ ನಡೆದು ಬಂದಿದ್ದ ಆಚಾರಗಳನ್ನು ಈ ತರುಣ ವಕೀಲ ನಿರಾಕರಿಸುತ್ತಿದ್ದರು. ಮುಂದೆ ಬ್ರಾಹ್ಮಣೇತರರ ದ್ವೇಷಕ್ಕೆ ಪಾತ್ರರಾಗಲಿದ್ದ ರಾಜಾಜಿ ಪ್ರಾರಂಭದಿಂದಲೂ ಜಾತಿಭೇದವನ್ನು ನಿವಾರಿಸಬೇಕೆನ್ನುವವರಾಗಿದ್ದರೆಂಬುದು ಸ್ವಾರಸ್ಯದ ಮಾತಾಗಿದೆ. ಸೇಲಂ ಮುನಸಿಪಾಲಿಟಿಗೆ ನಿಂತು ಆರಿಸಲ್ಪಟ್ಟು ಅದರ ಅಧ್ಯಕ್ಷತೆಗೇರಿದ ಅವರು ನೀರಿನ ನಲ್ಲಿಗಳನ್ನು ತೆರೆಯುವ—ಮುಚ್ಚುವ ಕೆಲಸಮಾಡುತ್ತಿದ್ದ ಇಬ್ಬರು ಹರಿಜನ ಮುನಸಿಪಲ್ ನೌಕರರನ್ನು ಅಗ್ರಹಾರದ ಪ್ರದೇಶಕ್ಕೆ ವರ್ಗಾಯಿಸಿದರು. ಬ್ರಾಹ್ಮಣರು "ಅಬ್ರಹ್ಮಣ್ಯಂ! ಬ್ರಾಹ್ಮಣರಿಗೆ ನೀರು ಬಿಡಲು ಹೊಲೆಯರೇ!" ಎಂದು ಗದ್ದಲ ಎಬ್ಬಿಸಿದರು. ರಾಜಾಜಿ ಕೊನೆಗೂ ಬಗ್ಗಲಿಲ್ಲ. ಅಸ್ಪೃಶ್ಯತಾ ನಿವಾರಣೆಗಾಗಿ ಗಾಂಧೀಜಿ ಆಂದೋಲನ ಪ್ರಾರಂಭಿಸುವ ಇಪ್ಪತ್ತೈದು ವರ್ಷ ಪೂರ್ವದಲ್ಲೆ ರಾಜಾಜಿ ಪ್ರಾರಂಭಿಸಿದ ಹರಿಜನೋದ್ಧಾರ ಕಾರ್ಯ ಅವರು ಮದ್ರಾಸ್ ಪ್ರಧಾನಿಯಾದಾಗ ದೇವಾಲಯ ಪ್ರವೇಶ ಮಸೂದೆ ತರುವವರೆಗೂ ಅವಿಚ್ಛಿನ್ನವಾಗಿಯೇ ಸಾಗಿತು.

೧೯೧೨ ರಲ್ಲಿ ರಾಜಾಜಿ ಮದ್ರಾಸಿಗೆ ಹೋಗಿ ವಕೀಲಿ ಆರಂಭಿಸಿದರು. ಬೇಗನೆ ರಾಜಕಾರಣ ಅವರನ್ನಾಕರ್ಷಿಸಿತು. ಆದರೆ ಅವರು ನೇರವಾಗಿ ಅದರಲ್ಲಿ ಧುಮುಕಿದ್ದು ತಡವಾಗಿಯೇ. ಅವರು ಗಾಂಧೀ ಶಿಷ್ಯರಾಗಿ ಖಿಲಾಫತ್ ಮತ್ತು ಅಸಹಕಾರ ಚಳವಳಿಯಲ್ಲಿ ಅಗ್ರಪಾತ್ರ ವಹಿಸಿದರು. ಮಕ್ಕಳನ್ನು ಶಾಲೆ ಕಾಲೇಜುಗಳಿಂದ ಬಿಡಿಸಿದರು; ಸಮೃದ್ಧ ವಕಾಲತ್ತಿಗೆ ತಿಲಾಂಜಲಿಯಿತ್ತು ಸೆರೆಮನೆಗೆ ಹೋದರು. ಅವರ ಪತ್ನಿ ಐವರು ಮಕ್ಕಳನ್ನು (ಮೂರು ಹೆಣ್ಣು, ಎರಡು ಗಂಡು) ಬಿಟ್ಟು ೧೯೧೭ ರಲ್ಲೇ ದಿವಂಗತರಾದದ್ದು ರಾಜಾಜಿಯ ವೈರಾಗ್ಯಕ್ಕೆ ಮುಕ್ತಮಾರ್ಗವನ್ನಿತ್ತಿತ್ತು.

ನಲುವತ್ತರಲ್ಲಿ ಅವರು ಕಾಂಗ್ರೆಸ್ ಸೇರಿದ್ದರು; ನಲುವತ್ತಮೂರರಲ್ಲಿ ಅವರು ಅಖಿಲ ಭಾರತ ವ್ಯಕ್ತಿಯಾಗಿದ್ದರು. ೧೯೨೨ ರಲ್ಲಿ ಗಾಂಧೀಜಿ ಸೆರೆಮನೆಗೆ ಹೋದಾಗ ಅವರ "ಯಂಗ್ ಇಂಡಿಯ"ನ್ನು ನಡೆಸಿಕೊಂಡು ಹೋದವರು ರಾಜಾಜಿ. ಅದೇ ವರ್ಷ ಅವರು ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಯಾದರು. ಗಯಾ ಕಾಂಗ್ರೆಸ್ಸಿನಲ್ಲಿ, ಅಸಹಕಾರವನ್ನು ತೊರೆದು ಕೌನ್ಸಿಲ್ ಪ್ರವೇಶ ಮಾಡಿ ಬ್ರಿಟಿಶರೊಡನೆ "ಒಳಗಿಂದ" ಹೋರಾಡಬೇಕೆಂಬ ಸೂಚನೆ ಅತಿ ಪ್ರಬಲ ನಾಯಕರಿಂದ ಬಂದಾಗ ಜೇಲಿನಲ್ಲಿದ್ದ ಗಾಂಧೀಜಿಯ ಪರವಾಗಿ ಅಸಹಕಾರವನ್ನು ಪ್ರತಿಪಾದಿಸಿ ತಮ್ಮ ಪ್ರಚಂಡ ತರ್ಕ ಶಕ್ತಿಯಿಂದ ಮೋತೀಲಾಲ, ಚಿತ್ತರಂಜನ ದಾಸರಂಥ ಮಹಾ ವಾಗ್ಮಿಗಳನ್ನು ನಿರುತ್ತರರಾಗಿ ಮಾಡಿದರು. ಆಗ ಅವರ ವಾದಗಳಿಗೆ ಉತ್ತರ ಕಾಣದೆ ದೇಶಬಂಧು ದಾಸರು "ಜಗತ್ತು ವಾದಗಳಿಂದ ನಡೆಯುತ್ತಿಲ್ಲ" ಎಂದು ಉದ್ಗಾರ ತೆಗೆದರಂತೆ!

ಅಂದಿನಿಂದ ರಾಜಾಜಿ ಮಹಾತ್ಮಾ ಗಾಂಧಿಯವರ "ಮನಸ್ಸಾಕ್ಷಿಯ ದ್ವಾರಪಾಲಕ" ಎಂದು ಹೆಸರಾದರು. ಗಾಂಧೀಜಿಯ ವಿಚಾರಗಳಿಗೆ ಅವರು ಅತಿ ಪ್ರವೀಣ ವ್ಯಾಖ್ಯಾನಕರ್ತರಾಗಿದ್ದರು. ಅವರು ಒಳಹೊರಗೆಲ್ಲ ಗಾಂಧೀವಾದಿಯಾದರು. ಅವರು ಖಾದೀಧಾರಿಯಾದರಷ್ಟೇ ಅಲ್ಲ, ಖಾದೀ ನಿರ್ಮಾಣಕ್ಕಾಗಿ ಸೇಲಂ ಜಿಲ್ಲೆಯ ತಿರುಚೆಂಗೋಡಿನಲ್ಲಿ ಆಶ್ರಮವನ್ನೂ ಸ್ಥಾಪಿಸಿದರು. ಅದು ಇಂದಿಗೂ ಇದೆ. ಸರಳ ಜೀವನವ್ರತ ಹಿಡಿದು ತಮ್ಮ ಬಟ್ಟೆಗಳನ್ನು ತಾವೇ ತೊಳೆದುಕೊಳ್ಳತೊಡಗಿದರು. ಮದ್ರಾಸ್ ಮುಖ್ಯ ಮಂತ್ರಿ

ಯಾದಾಗಲೂ ಅವರು ಇದನ್ನು ಬಿಡಲಿಲ್ಲ! ಗಾಂಧೀಜಿ ಹೂಡಿದ ಪ್ರತಿ ಚಳವಳಿಯಲ್ಲೂ ಸೆರೆಮನೆ ಕಂಡರು. ತ್ಯಾಗಜೀವನದ ಸಾಕಾರ ಮೂರ್ತಿಯಾದರು. ವೈಶ್ಯ ಮಹಾತ್ಮಾ ಗಾಂಧಿಯವರ ಮಗ ದೇವದಾಸರು ಬ್ರಾಹ್ಮಣ ರಾಜಾಜಿಯ ಮಗಳ ಲಕ್ಷ್ಮಿಯನ್ನು ಮದುವೆಯಾದಾಗ ಗಾಂಧೀಜಿಯೊಡನೆ ರಾಜಾಜಿಯ ಸಂಬಂಧ ನಿಗಡಿತವಾದಂತಾಯಿತು. ಕಾಂಗ್ರೆಸ್ಸು ೧೯೩೭ ರಲ್ಲಿ ಅಧಿಕಾರ ಸ್ವೀಕರಿಸಿದಾಗ ಮದ್ರಾಸಿನ ಮುಖ್ಯ ಮಂತ್ರಿಪದಕ್ಕೆ ರಾಜಾಜಿ ಹೊರತು ಬೇರಾರೂ ಯೋಗ್ಯರಾಗಿ ಕಾಣಲಿಲ್ಲ. ಅವರು ತಂದ ಕ್ರಾಂತಿಕಾರಕ ಯೋಜನೆಗಳು ಇತರ ಪ್ರಾಂತಗಳಿಗೆ ಮೇಲ್ಪಂತಿಯಾದವು. ಅವರು ಮದ್ಯನಿರೋಧ ಕಾಯದೆ ಮಾಡಿದರು; ರೈತರ ಸಾಲನಿವಾರಣೆ ಕಾಯದೆ ಮಾಡಿದರು; ಮದ್ಯ-ನಿರೋಧದಿಂದ ಸರಕಾರಕ್ಕೊದಗಿದ ಕೊರತೆ ತುಂಬಲು ಮಾರಾಟ ತೆರಿಗೆಯೆಂಬ ಹೊಚ್ಚ ಹೊಸ ಕರವನ್ನು ಹೇರಿದರು. ಅವರ ಬುದ್ಧಿಯ ಶಿಶುವಾದ ಮಾರಾಟಕರ ಇಂದು ಸಕಲ ರಾಜ್ಯಗಳಿಗೂ ಬಂಗಾರದ ಗಣಿಯಾಗಿದೆ. ಮದ್ಯ ನಿರೋಧ ಮಾಡುವಲ್ಲಿ ಹಿಂದೆ ಬಿದ್ದ ರಾಜ್ಯಗಳೂ ಈ ಶಿಶುವನ್ನು ದತ್ತಕ ತೆಗೆದುಕೊಳ್ಳುವಲ್ಲಿ ಹಿಂದೆ ಬಿದ್ದಿಲ್ಲ!

ಅವರು ಅತಿ ಶ್ರೇಷ್ಠ ಕಾಂಗ್ರೆಸ್ ಮುಖ್ಯ ಮಂತ್ರಿಯೆಂದು ಪ್ರಶಂಸಿಸಲ್ಪಟ್ಟರು. ಆದರೆ ಅದರೊಡನೆ ಅವರ ಅಪ್ರಿಯತೆಯೂ ಪ್ರಾರಂಭವಾಯಿತು. ತಾವು ಕಂಡ ಸತ್ಯವನ್ನು ನಿರ್ಧಾರದಿಂದ ಬೆಂಬತ್ತುವ ಅವರ ಸ್ವಭಾವ ಅವರಿಗೆ ಕಾಂಗ್ರೆಸ್ಸಿನಲ್ಲೇ ಶತ್ರುಗಳನ್ನು ಸಂಪಾದಿಸಿತು. ೧೯೩೯ ರಲ್ಲಿ ಕಾಂಗ್ರೆಸ್ಸು ಅಧಿಕಾರ ತ್ಯಾಗ ಮಾಡಲು ನಿರ್ಧರಿಸಿದಾಗ ರಾಜಾಜಿ ಅರೆಮನಸಿನಿಂದಲೇ ಒಪ್ಪಿದ್ದೂ ಮುಂದೆ ಪಾಕಿಸ್ತಾನ ಬೇಡಿಕೆಯನ್ನು ಮನ್ನಿಸಬೇಕು ಮತ್ತು ಬ್ರಿಟಿಶರೊಡನೆ ಸಹಕರಿಸಬೇಕೆಂದು ಬಹಿರಂಗವಾಗಿ ವಾದಿಸಿ ಚಳವಳಿಯಿಂದ ಹೊರನಿಂತದ್ದೂ ಅವರ ಶತ್ರುಗಳಿಗೆ ಅತ್ಯಂತ ಅನುಕೂಲ ಆಯುಧಗಳಾಗಿ ದೊರೆತವು. ಕಾಂಗ್ರೆಸ್ ಕಾರ್ಯಸಮಿತಿಯಿಂದ ಅವರು ಹೊರಬೀಳಬೇಕಾಯಿತು; ದೇಶದ್ರೋಹಿಯೆನಿಸಬೇಕಾಯಿತು. ಸುಮಾರು ಐದು ವರ್ಷ ಕಾಲ ಅವರು ದೇಶದ ಅತಿ ಜನ-ಅಪ್ರಿಯ ರಾಜಕಾರಣಿಯಾಗಿದ್ದರು. ಕೊನೆಗೆ ಕಾಂಗ್ರೆಸ್ ನಾಯಕರು ಎರಡನೇ ಬಾರಿ ಅಧಿಕಾರ ಸ್ವೀಕರಿಸಲು ನಿರ್ಣಯಿಸಿ ರಾಜಾಜಿಯನ್ನು ಪುನಃ ಮದ್ರಾಸಿನ ಮುಖ್ಯಮಂತ್ರಿಯಾಗಿ ಮಾಡಬಯಸಿದಾಗ ಮದ್ರಾಸಿನ ಹಟವಾದಿ ಬೆಂಕಿ ಪೈಲ್ವಾನರು ಅವರನ್ನು ಖೂನಿ ಮಾಡುವುದಾಗಿ ಬೆದರಿಕೆ ಹಾಕುವವರೆಗೂ ಹೋಯಿತು. ರಾಜಾಜಿ ನಿರ್ವಿಕಾರವಾಗಿ ರಾಜಕೀಯದಿಂದ "ನಿವೃತ್ತ" ರಾದರು.

ಅಂದಿನಿಂದ ರಾಜಾಜಿ ನಿವೃತ್ತಿಯಿಂದ ಪ್ರವೃತ್ತಿಗೆ ಪ್ರವೃತ್ತಿಯಿಂದ ನಿವೃತ್ತಿಗೆ ಚಲಿಸುವುದನ್ನು ನಾವು ನೋಡುತ್ತೇವೆ. ಈ ಯಾತಾಯಾತದಲ್ಲಿ ಅವರು ಬಂಗಾಲದ ಗವರ್ನರ್, ಭಾರತದ ಪ್ರಥಮ ಭಾರತೀಯ ಗವರ್ನರ್ ಜನರಲ್, ಸರತಿಯ ಮೇಲೆ ಸ್ವತಂತ್ರ ಭಾರತದ ಉದ್ಯಮ ಮಂತ್ರಿ, ಶಿಕ್ಷಣ ಮತ್ತು ಹಣಕಾಸಿನ ಮಂತ್ರಿ, ಶಾಖಾರಹಿತ ಮಂತ್ರಿ ಮತ್ತು ಗೃಹಮಂತ್ರಿಯಾಗಿ ದುಡಿದರು; ಕೊನೆಗೆ ಮದ್ರಾಸಿನ ಅವರ ಶತ್ರುಗಳು ಮದ್ರಾಸಿನ ರಾಜಕಾರಣವನ್ನು ಸಂಪೂರ್ಣ ಹೊಲಗೆಡಿಸಿ ಸಂಕಟ ಕಾಲದಲ್ಲಿ ವೆಂಕಟರಮಣಾ ಎಂದು ರಾಜಾಜಿಗೆ ಶರಣು ಬಂದು ಮುಖ್ಯಮಂತ್ರಿಪದ ಒಪ್ಪಿಸಿಕೊಡಬೇಕಾಯಿತು ಆದರೆ ರಾಜಾಜಿ ಗೊಂದಲವನ್ನು ಸರಿಪಡಿಸಿದ ಮೇಲೆ ತಮಿಳು ನಾಡು ಕಾಂಗ್ರೆಸ್ಸು ಪುನಃ ಅವರ ವಿರುದ್ಧ ದಂಗೆಯೆದ್ದು ಮತ್ತೆ ಅವರನ್ನು ನಿವೃತ್ತಿಯ ಕಡೆಗೆ ತಳ್ಳಿತು. ಆರು ವರ್ಷ ಕಾಲ ನಿವೃತ್ತಿಯಲ್ಲಿ ಪರಮಾಣು ಬಾಂಬ್ ವಿರೋಧ, ಬಿಸಿಜಿ ವಿರುದ್ಧ ಪ್ರಕಟನೆ

ಗಳು, ಹಿಂದೀ ವಿರುದ್ಧ ಗದಾಪ್ರಹಾರಗಳಲ್ಲಿ ನಿರತರಾಗಿ ಈಗ ಅವರು ಸ್ವತಂತ್ರ ಪಕ್ಷ ಸ್ಥಾಪಿಸಿಕೊಂಡು ಮರಳಿ ಪ್ರವೃತ್ತಿಮಾರ್ಗ ಸೇರಿದ್ದಾರೆ. ಸ್ವತಂತ್ರ ಪಕ್ಷವೂ ಅವರಿಗೆ ಯಾವಾಗ ಹೋಗೆನ್ನುವುದೋ ನೋಡಬೇಕು.

ಏಕೆಂದರೆ ರಾಜಾಜಿ ಯಾವಾಗಲೂ "ಸ್ವತಂತ್ರ" ರು. ಅವರ ಸ್ವತಂತ್ರತ್ವವನ್ನು ಗಾಂಧೀಜಿಯೆ ಪಳಗಿಸಲಾರದಿದ್ದಾಗ ಸ್ವತಂತ್ರ ಪಕ್ಷದ ಅವರ ಸಹಕಾರಿಗಳು ಯಾವ ಗಿಡದ ತೊಪ್ಪಲು? ಬುದ್ಧಿಜೀವಿಗಳೆಷ್ಟೋ ಇರಬಹುದು, ಅವರ ಎತ್ತರಕ್ಕೇರುವವರು. ಆದರೆ ರಾಜಾಜಿಯಂತೆ ತಮ್ಮ ವಿಚಾರಗಳನ್ನು, ವಾದಗಳನ್ನು ತಿಳಿಯಾಗಿ ಹೇಳಬಲ್ಲವರು ಈ ದೇಶದಲ್ಲಿ ಯಾರೂ ಇಲ್ಲ. ಅವರು ಹೇಳುವುದು ತಿಳಿಯುವುದಿಲ್ಲ ಎಂಬವರು ಶತದಡ್ಡರೇ ಇರಬೇಕು. ಅವರ ವಾದಾಸ್ತ್ರಗಳು ಪೂರೈಸಲಾರದ್ದನ್ನು ಅವರ ಕಥೆಗಳೂ ಸಾಮತಿಗಳೂ ಮುಗಿಸುತ್ತವೆ. ಪ್ರತಿಯೊಂದಕ್ಕೂ ಅವರ ಹತ್ತಿರ ಒಂದು ಕಥೆ ಇದೆ ಇಲ್ಲವೆ ಸಾಮತಿ ಇದೆ. ಲೀಗಿನವರು ಪಾಕಿಸ್ತಾನ ಕೇಳಿದರೊ? ಒಂದೇ ದನದ ಕೆಚ್ಚಲನ್ನು ಎರಡು ಪಾಲು ಮಾಡಿದಂತೆ ಇದು ಎಂದರು. ಅಥವಾ ಒಂದೇ ಮನೆಯ ಉಪ್ಪರಿಗೆ ಒಬ್ಬನಿಗೆ ಕೆಳಭಾಗ ಒಬ್ಬನಿಗೆ ಕೊಟ್ಟಂತೆ ಎಂದರು. ಸರದಾರ ಪಟೇಲರ ಚತುರುಪಾಯಗಳೆಲ್ಲವೂ ಸುಭಾಷ ಬೋಸರ ಬಂಡಾಯವನ್ನು ಹತೋಟಿಗೆ ತರಲಾರದೆ ಹೋದಾಗ ರಾಜಾಜಿಯ ಒಂದು ಸಾಮತಿ ಆ ಬಂಗಾಲಿ ಹುಲಿಯನ್ನು ಸೋಲಿಸಿತು. ಸುಭಾಷರ ನಾವೆ ಹೊರಗಷ್ಟೇ ಚಂದ, ತಳವೆಲ್ಲ ತೂತು. ಗಾಂಧೀಜಿಯ ಸುರಕ್ಷಿತ ದೋಣಿಯಲ್ಲಿ ಬರುತ್ತೀರಾ ಸುಭಾಷರ ತೂತು ದೋಣಿ ಏರುತ್ತೀರಾ ನೀವೇ ನೋಡಿ ಎಂದು ರಾಜಾಜಿ ಹೇಳಿದ ಮಾತು ಎ. ಐ. ಸಿ. ಸಿಯಲ್ಲಿ ಬೋಸರಿಗಿದ್ದ ಬೆಂಬಲವನ್ನು ಗಾಳಿಗೆ ಹಾರಿಸಿಬಿಟ್ಟಿತು.

ರಾಜಾಜಿಯನ್ನು ಚಾಣಕ್ಯ, ದಕ್ಷಿಣದ ನರಿ ಇತ್ಯಾದಿಯಾಗಿ ಸಂಬೋಧಿಸುವುದುಂಟು. ಅವರು ಖಂಡಿತವಾಗಿ ಬಲು ಧೂರ್ತ. ಬಲು ಸರಳವೆಂದು ತೋರುವ ಉಪಾಯದಿಂದ ಅವರು ಅದಮ್ಯವೆಂದು ತೋರುವ ಪ್ರವಾಹವನ್ನು ತಿರುಗಿಸಿ ಬಿಡಬಲ್ಲರು. ೧೯೫೧ ರಲ್ಲಿ ಅವರು ಮದ್ರಾಸಿನಲ್ಲಿ ಆಳುವವರ ಪಾತಕಗಳಿಂದುಂಟಾದ ಕಮ್ಯುನಿಸ್ಟ್ ಪ್ರಭಾವವನ್ನು ಮುಖ್ಯಮಂತ್ರಿ ಪದಕ್ಕೆ ಬಂದೊಡನೆ ಒಂದು ಸರಳೋಪಾಯದಿಂದ ಅಳಿಸಿಬಿಟ್ಟರು. ಮಧುರೆಯಲ್ಲಿ ರೈತರ ಮೇಲೆ ಕಮ್ಯುನಿಸ್ಟರು ವರ್ಚಸ್ಸನ್ನು ಸ್ಥಾಪಿಸಿದ್ದರು. ರಾಜಾಜಿ ಜಮೀನ್ದಾರರು ಗೇಣಿ ವಸೂಲಿಯನ್ನು ತಾತ್ಕಾಲಿಕವಾಗಿ ತಡೆಯುವ ಒಂದು ಆಜ್ಞೆ ಹೊರಡಿಸಿದ್ದೇ ತಡ, ಕಮ್ಯುನಿಸ್ಟರ ಆಟ ಸಂಪೂರ್ಣ ನಿಂತು ಹೋಯಿತು. ರೈತರು ಬೇಡಿದ್ದನ್ನು ರಾಜಾಜಿಯೆ ಕೊಟ್ಟಾಗ ಅವರೇಕೆ ಕಮ್ಯುನಿಸ್ಟರಿಗೆ ಶರಣುಹೋದಾರು ?

ರಾಜಾಜಿಯ ಸಾಹಿತ್ಯದಲ್ಲೂ ಈ ಸರಳತೆಯೆ ಪ್ರಧಾನ ಗುಣ. ತಮಿಳಿನಲ್ಲಿ ಅವರು ಅಸಂಖ್ಯ ಕಥೆ, ಲೇಖ, ಗ್ರಂಥಗಳನ್ನು ಬರೆದಿದ್ದಾರೆ. ಅವರು ರಾಮಾಯಣ, ಮಹಾಭಾರತಗಳ ಆಳವಾದ ಅಭ್ಯಾಸ ಮಾಡಿದ್ದಾರೆ. ಆ ಪುರಾಣಗಳನ್ನು ಅವರು ತಮಿಳಿನಲ್ಲಿ ಶ್ಲಾಘ್ಯವಾದ ರೀತಿಯಲ್ಲಿ ಬರೆದಿದ್ದಾರೆ. ಇಂಗ್ಲೀಷಿನಲ್ಲಿಯೂ ಅವರ ಕೆಲ ಕಥೆಗಳು ಪ್ರಕಟವಾಗಿವೆ. ಅವರ ಅಧಿಕಾಂಶ ಸಾಹಿತ್ಯ ಬೋಧಪ್ರದವಾದುದು; ಆದರೆ ಉಪದೇಶ ಸಾಹಿತ್ಯ ಎಷ್ಟು ರಸವತ್ತಾಗಿರುವುದು ಸಾಧ್ಯವೋ ಅಷ್ಟು ರಸವತ್ತಾಗಿವೆ ಅವು.

ಒಂದು ಕಾಲದಲ್ಲಿ ಸುಧಾರಕನಷ್ಟೇ ಅಲ್ಲ, ಕ್ರಾಂತಿಕಾರಿ ಎನಿಸಿದ್ದ ರಾಜಾಜಿ ನಿಜವಾಗಿ ಅಂತರಂಗದಲ್ಲಿ ಸಾಂಪ್ರದಾಯಿಕರೇ. ಯಾವುದರಲ್ಲೇ ಇರುವ ಕೊರತೆಗಳನ್ನು ತತ್‌ಕ್ಷಣ ಕಾಣುವ ಭೇದಕ ದೃಷ್ಟಿ ಅವರ ಆ ಕಪ್ಪು ಕನ್ನಡಕಗಳಾಚೆ ಹುದುಗಿರುವುದರಿಂದ ಹೊಸ

ವಿಚಾರಗಳಲ್ಲಿರುವ ಹುಳುಕುಗಳನ್ನವರು ಬೇಗನೆ ಹುಡುಕುತ್ತಾರೆ. ಸಮಾಜವಾದ ಅವರಿಗೆ ಸೇರುವುದಿಲ್ಲ. ಪ್ರಗತಿಗಾಗಿ ಹುಚ್ಚು ಹಾರಾಟಮಾಡಿ ಜನರ ಮಾನಸಿಕ ಶಾಂತಿಯನ್ನು ಕದಡಬಾರದೆಂದು ಅವರೆಣಿಸುತ್ತಾರೆ. ಔದ್ಯಮೀಕರಣವನ್ನವರು ವಿರೋಧಿಸುತ್ತಾರೆ. ಸಂತತಿ ನಿಯಮನಕ್ಕೆ ಅವರ ವಿರೋಧವಿದೆ. ಪರಮಾಣು ಬಾಂಬು ಜಲಜನಕ ಬಾಂಬುಗಳು ಸಾರ್ವತ್ರಿಕ ವಿನಾಶ ಮಾಡಲು ಅಣಿಯಾಗಿರುವಾಗ ಆದಷ್ಟು ಹೆಚ್ಚು ಜನ ಹುಟ್ಟಿದರೇನೇ ಈ ಅನಾಹುತದ ನಂತರ ಕೆಲವರಾದರೂ ಉಳಿದು ಮಾನವ ಕುಲದೀಪ ಮತ್ತೆ ಬೆಳಗೀತು ಎನ್ನುತ್ತಾರವರು. ಬುದ್ಧಿಶಾಲಿಗಳಾದ ಅವರು ಸಾಮಾನ್ಯ ಜನರ ಸಾಮರ್ಥ್ಯವನ್ನೂ ನಿರಾಶಾದೃಷ್ಟಿಯಿಂದಲೇ ನೋಡುತ್ತಾರೆ. ಜನ ತಮ್ಮನ್ನು ತಾವು ಆಳಿಕೊಳ್ಳಲಾರರೆಂದು ಅವರು ಭಾವಿಸಿದಂತಿದೆ. ಪ್ರಜಾತಂತ್ರದ ಬಗ್ಗೆ ಅವರಿಗೆ ವಿಶೇಷ ವಿಶ್ವಾಸವಿಲ್ಲ. ಅವರು ಚುನಾವಣೆಗಳಲ್ಲೂ ನಂಬಿಕೆ ಇಟ್ಟಿಲ್ಲ. ನಿದ್ರಿಸುವ ನಾಯಿಯನ್ನು ಎಬ್ಬಿಸುವುದು ಅಪಾಯ ಎಂದು ಅವರ ವಿಚಾರ. ಹಳ್ಳಿಗಳಲ್ಲಿ ಜನ ತಂತಮ್ಮ ಕುಲಕಸಬುಗಳನ್ನು ಮಾಡಿಕೊಂಡಿರುವುದೇ ಅವರಿಗೂ ಸುಖ, ಲೋಕಕ್ಕೂ ಹಿತ ಎಂದೆಣಿಸಿ ಅವರು ತಮ್ಮ ಎರಡನೇ ಮುಖ್ಯ ಮಂತ್ರಿತ್ವಕಾಲದಲ್ಲಿ ಮದ್ರಾಸಿನಲ್ಲಿ ರೂಪಿಸಿದ ಶಿಕ್ಷಣ ಯೋಜನೆ ಅವರ ಅಧಿಕಾರಚ್ಯುತಿಗೆ ಕಾರಣವಾಯಿತು. ರಾಜಾಜಿಗೆ ಬೇಕಾದ್ದು ರಾಮರಾಜ್ಯ. ಆಳುವವರು ನಿಃಸ್ವಾರ್ಥಿಗಳಾಗಿ, ಪ್ರಜಾಹಿತಕ್ಕಾಗಿ ಆಳಬೇಕು. ಆಳಿಸಿಕೊಳ್ಳುವವರು ಸುಖವಾಗಿ ಬಾಳಬೇಕು, ಅಧಿಕಾರಕ್ಕಾಗಿ ಹಂಬಲಿಸಬಾರದು. ಸ್ವತಃ ನಿಃಸ್ವಾರ್ಥರಾದ ರಾಜಾಜಿ ರಾಮರಾಜ್ಯದ ಆಡಳಿತಗಾರ ಹೇಗಿರಬೇಕೆಂಬುದಕ್ಕೆ ಮಾದರಿಯೂ ಆಗಿದ್ದಾರೆ.

ರಾಜಾಜಿಯು ಎಂಭತ್ತು ವರ್ಷದ ಜೀವನವನ್ನು ಸಿಂಹಾವಲೋಕನ ಮಾಡಿದರೆ ಅವರು ಜಾಣರೆಂಬುದು— ಆ ಶಬ್ದದ ಅತ್ಯಂತ ಸದರ್ಥದಲ್ಲಿ— ನಿರ್ವಿವಾದವಾದದ್ದು; ಆದರೆ ಅವರು ಮಹಾಪುರುಷರೆ? ಇದು ಸಂಶಯ. ಪ್ರಪಂಚದ ಮಹಾಪುರುಷರ ಲಕ್ಷಣ ಯಾವುದು ಜಾಣರಿಗೆ ಅಸಾಧ್ಯವೆಂದು ಕಾಣುವುದೋ ಅದನ್ನು ಸಾಧಿಸಲು ಮತ್ತಾವುದನ್ನೂ ಬಗೆಯದೆ ಹೆಣಗಿ ಗೆಲ್ಲುವುದು ಇಲ್ಲವೆ ಸೋಲುವುದು. ರಾಜಾಜಿ ಆ ಮಟ್ಟ ಮುಟ್ಟುವುದಿಲ್ಲ. ಅವರು ತೀರ ಜಾಣರು; ಹತ್ತು ವರ್ಷದಾಚೆ ಬರುವ ಅನಾಹುತವನ್ನು ಈಗಲೇ ಕಾಣುತ್ತಾರೆ ಮತ್ತು ಅದನ್ನು ಎದುರಿಸುವುದು ವ್ಯರ್ಥವೆಂದೆನಿಸಿದರೆ ಅದರಿಂದಾಗಬಹುದಾದ ಹಾನಿಯನ್ನು ಆದಷ್ಟು ತಪ್ಪಿಸೋಣ ಎನ್ನುತ್ತಾರೆ. ಪಾಕಿಸ್ತಾನದ ಬರವನ್ನವರು ಇತರರಿಗಿಂತ ಏಳು ವರ್ಷ ಮುಂಚೆಯೆ ಕಂಡರು. ಅದು ಅನಿವಾರ್ಯವೆನಿಸಿದೊಡನೆ ಒಪ್ಪಿಕೊಂಡುಬಿಡೋಣ ಎಂದರು. ಹಿಂದಿಯ ವಿಚಾರವೂ ಅಷ್ಟೇ. ಇದು ದೂರದೃಷ್ಟಿ ಇರಬಹುದು, ಜಾಣ್ಮೆಯಾಗಿರಬಹುದು; ಮಹಿಮೆಯಾದೀತೆ? ಮಹಿಮೆ ಕೊನೆವರೆಗೂ ಹೋರಾಡುತ್ತದೆ.

ಆದರೆ ರಾಜಾಜಿ ರಾಜಕಾರಣದಲ್ಲಿ ಅತಿ ಮಹತ್ವದ ಪಾತ್ರವೊಂದನ್ನು ಪೂರೈಸುತ್ತಿದ್ದಾರೆ. ಎಲ್ಲ ಕಡೆ "ಪ್ರಗತಿ"ಯ ಹುಚ್ಚು ಕುದುರೆಗಳ ಶರ್ಯತ್ತು ನಡೆದಿರುವಾಗ ಅವರು ಪರಿಣಾಮಕರ ಕಡಿವಾಣವಾಗಿದ್ದಾರೆ. *

---

ವೈದ್ಯರು : ಅವರಿಗೆ ಜ್ವರವಿಲ್ಲ; ನೀ ಏಕೆ ಸುಮ್ಮನೆ ಥರ್ಮಾಮೀಟರ್ ಇಟ್ಟು ಟೆಂಪರೇಚರ್ ನೋಡ್ತಿರ್ತಿ?

ನರ್ಸ್ : ಅವರ ಬಾಯಿಯಲ್ಲಿ ಥರ್ಮಾಮೀಟರ್ ಇಡದೇ ಇದ್ದರೆ ತಿನ್ನೋಕೆ ಏನಾದರೂ ಕೊಡು ಅಂತ ಪೀಡಿಸ್ತಾ ಇರ್ತಾರೆ; ಅದಕ್ಕೆ. — ಬಿ. ಆರ್. ಶಂಕರ್

ನಿಮಗೆಂದಾದರೂ
ಇಂಥ ಅನುಭವ
ಬಂದಿದೆಯೆ?

# ಆ ರೂಪಾಯಿ

ಮಂಜುನಾಥ ಕಿಣಿ

ಇದು ಸುರುವಾದದ್ದು ಹೀಗೆ. ಶ್ರೀ ನಾಯಕರೂ ನಾನೂ ಒಂದೇ ಆಫೀಸಿನಲ್ಲಿ ಕೆಲಸ ಮಾಡುತ್ತೇವೆ. ನಮಗೆ ಸಂಬಳ ಮನಿಯಾರ್ಡರ್ ಮೂಲಕ ಬರುತ್ತಿರುತ್ತದೆ. ಆ ಸಪ್ಟೆಂಬರ ೨ ರಂದು ನಮ್ಮ ಸಂಬಳ ಬಂತು. ನಾಯಕರು ಮೊದಲು ತೆಗೆದುಕೊಂಡರು. ಅವರು ಪೋಸ್ಟ್‌ಮನ್ನನಿಗೆ ಒಂದು ರೂಪಾಯಿ ತಿರುಗಿ ಕೊಡಬೇಕಾದುದರಿಂದ ತಮ್ಮಲ್ಲಿದ್ದ ಒಂದು ಗಟ್ಟಿ ರೂಪಾಯಿಯನ್ನು ಕೊಟ್ಟರು.

ನಾನು ಸಂಬಳ ತೆಗೆದುಕೊಂಡಾಗ ಪೋಸ್ಟ್‌ಮನ್ ನನಗೆ ಆ ಗಟ್ಟಿ ರೂಪಾಯಿಯನ್ನು ಕೊಟ್ಟ. ರೂಪಾಯಿ ಖೊಟ್ಟಿಯಾಗಿರಲಿಲ್ಲ. ನಾನು ಸ್ವೀಕರಿಸಿದೆ. “ಅಗಸ್ಟ ೧೫ ರ ಸಮಾರಂಭದ ಖರ್ಚಿನ ಬಗ್ಗೆ ನನ್ನ ಪಾಲಿನ ವಂತಿಗೆಯನ್ನು ನಾನು ನಾಯಕರಿಗೆ ಕೊಡಬೇಕಾಗಿತ್ತು. ಅದೇ ಗಟ್ಟಿ ರೂಪಾಯಿಯನ್ನು ೭೫ ನಯೆ ಪೈಸೆ ಸೇರಿಸಿ ಕೊಟ್ಟೆ. ಬೇಕೆಂದೇ ಅಲ್ಲ ಮತ್ತೆ. ಹಣ ಕೊಡಲೆಂದು ಕೈ ಹಾಕಿದಾಗ ಎಲ್ಲ ರೂಪಾಯಿಗಳ ಪೈಕಿ ಅದೇ ಬಂದಿತ್ತು.

ಇಬ್ಬರಿಗೂ ಅಂದು ಡ್ಯೂಟಿ ಇರಲಿಲ್ಲ. ಒಟ್ಟಿಗೆ ಆಫೀಸು ಬಿಟ್ಟು ಹೊರಟೆವು. ದಾರಿಯಲ್ಲಿ ಯೂನಿಯನ್ ಫೀ ಬಗ್ಗೆ ನಾಯಕರು ನನಗೆ ಒಂದು ರೂಪಾಯಿ ಕೊಡಬೇಕಾಗಿದ್ದುದು ನೆನಪಾಗಿ ಅವರನ್ನು ಕೇಳಿದೆ. ಅವರ ಜೇಬಿನಲ್ಲಿದ್ದ ಬಿಡಿ ರೂಪಾಯಿ ಅದೊಂದೇ ಇದ್ದುದರಿಂದ ಅದನ್ನೇ ನನಗೆ ಕೊಟ್ಟರು.

ಇಬ್ಬರೂ ಬ್ರ್ಯಾಂಚ್ ಪೋಸಾಫೀಸಿಗೆ ಹೋದೆವು. ಅಲ್ಲಿ ಊರಿಗೆ ಮನಿಯಾರ್ಡರು ಮಾಡುವುದಕ್ಕೆ ಮತ್ತು ಅಂಚೆಚೀಟಿ ಕೊಳ್ಳಲಿಕ್ಕೆ ನಾನು ಬ್ರ್ಯಾಂಚ್ ಪೋಸ್ಟ್ ಮಾಸ್ಟರಿಗೆ ಹಣ ಕೊಟ್ಟೆ. ಅದರಲ್ಲಿ ಆ ರೂಪಾಯಿಯೂ ಇತ್ತು. ನಾಯಕರಿಗೆ ಒಂದು ರೂಪಾಯಿಯ ಚೀಟಿ ಬೇಕಿತ್ತು. ಅವರು ಅದಕ್ಕಾಗಿ ಐದು ರೂಪಾಯಿಯ ನೋಟು ಕೊಟ್ಟರು. ಪೋಸ್ಟ್‌ಮಾಸ್ಟರರು ಅವರಿಗೆ ನಾಲ್ಕು ರೂಪಾಯಿ ತಿರುಗಿ ಕೊಟ್ಟಾಗ ಆ ಗಟ್ಟಿ ರೂಪಾಯಿ ಮತ್ತೆ ನಾಯಕರ ಕಡೆಗೇ ಹೋಯಿತು. ಇಬ್ಬರಿಗೂ ಏಕಕಾಲಕ್ಕೆ ನಗೆ ಬಂತು. ನನ್ನ ಭಾವನೇ ಆದ ಪೋಸ್ಟ್‌ಮಾಸ್ಟರರು ನಗೆಯ ಕಾರಣ ವಿಚಾರಿಸಿದಾಗ ಟೆನಿಸ್ ಚೆಂಡಿನ ಹಾಗೆ ಬೆಳಗಿನಿಂದ ನಮ್ಮಿಬ್ಬರ ನಡುವೆಯೆ ಪುಟಿದಾಡುವ ರೂಪಾಯಿಯ ಕಥೆ ಹೇಳಿದೆವು. ಅವರೂ ನಕ್ಕರು.

ಸಾಯಂಕಾಲ ನಮ್ಮ ಮಿತ್ರ ಶ್ರೀ ಕಾನಡೆಯವರೊಂದಿಗೆ ನಾಯಕರು ಪುನಃ ಭೆಟ್ಟಿಯಾದರು. ನನಗೊಂದು ಅಡ್ಡ ಮುಂಡು (ಲುಂಗಿ) ಬೇಕಾಗಿತ್ತು. ಮೂವರೂ ಕಾನಡೆಯವರ ಮಿತ್ರರ ಅಂಗಡಿಗೆ ನುಗ್ಗಿದೆವು. ನಾಯಕರು ಒಂದು ಬನಿಯನ್ ಆರಿಸಿಕೊಂಡು ಅದೇ ಗಟ್ಟಿ ರೂಪಾಯಿ ಮತ್ತು ಚಿಲ್ಲರೆ ಸೇರಿಸಿ ಬಿಲ್ ತೀರಿಸಿದರು. ನನ್ನ ಅಡ್ಡ ಮುಂಡಿನ ಬಗ್ಗೆ ಕೊಡಬೇಕಾಗಿದ್ದ ರೂ. ೨.೨೫ ಕ್ಕಾಗಿ ನಾನು ರೂ. ೫ ರ ನೋಟನ್ನು ಕೊಟ್ಟೆ. ಅದರ ಚಿಲ್ಲರೆ ಮರಳಿ ಬಂದಾಗ ಆ ರೂಪಾಯಿಯೂ ಅದರಲ್ಲಿದ್ದುದನ್ನು ನೋಡಿ ನಾನು ನಕ್ಕೆ. ಕಾನಡೆಯವರೂ ವಿಷಯ ತಿಳಿದು ಸೋಜಿಗಪಟ್ಟರು.

ಅನಂತರ ನಾನು ಮೂಡಗೇರಿಯವರ ಅಂಗಡಿಯಲ್ಲಿ ಒಂದು ಪೌಂಡ್ ಕಾನನ್ ದೇವನ್ ಚಹಾ ಕೊಂಡು ಅದೇ ರೂಪಾಯಿ ಸೇರಿಸಿ ರೂ. ೨.೭೫

ತೆತ್ತೆ. ಅದು ಅಂಗಡಿಯ ಪೆಟ್ಟಿಗೆ ಸೇರುವುದನ್ನು ನೋಡಿ ಖಾತ್ರಿ ಮಾಡಿಕೊಂಡು ನಾಯಕರು ಅರ್ಧ ಪೌಂಡು ಚಹಾ ತೆಗೆದುಕೊಂಡು ಐದು ರೂಪಾಯಿ ನೋಟು ಕೊಟ್ಟರು. ಆದರೆ ಅವರ ಚಿಲ್ಲರೆ ತಿರುಗಿ ಸಿಕ್ಕಿದಾಗ ಅದೇ ಆ ರೂಪಾಯಿ ಅದರಲ್ಲಿತ್ತು.

ನಾಯಕರು ಸಿಡಿದೆದ್ದರು. "ಈ ದರಿದ್ರ ರೂಪಾಯಿ ನನಗೇ ಏಕೆ ಅಂಟಿಕೊಳ್ಳುತ್ತಿದೆ ಬ್ರಹ್ಮಕಪಾಲದಂತೆ!"

"ಇನ್ನೂ ಅವಕಾಶವಿದೆ ನೋಡೋಣ" ಎಂದೆ ನಾನು.

ಮೂವರೂ ಸಕ್ಕರೆ ರೇಶನ್ ಅಂಗಡಿಗೆ ಸಾಗಿದೆವು. ನಾಯಕರು ಜಿದ್ದಿನಿಂದ ತಮ್ಮ ೫೫ ನ. ಪೈ. ತೀರಿಸಲು ಅದೇ ರೂಪಾಯಿ ಕೊಟ್ಟು ಮುಖ ಗಂಟಿಕ್ಕಿ ನಿಂತಿದ್ದರು. ಆ ಮೇಲೆ ನನ್ನ ಬಿಲ್ (ರೂ. ೧-೬೫) ಬಂತು. ಚಿಲ್ಲರೆ ಇಲ್ಲದ್ದರಿಂದ ರೂ. ೫ ರ ನೋಟು ಕೊಟ್ಟೆ. ಚಿಲ್ಲರೆ ವಾಪಾಸು ಬಂದಾಗ ತಕೋ! ಅದೇ ರೂಪಾಯಿ! ನಮ್ಮ ರಕ್ತ ಕುದಿಯಿತು. ಇಬ್ಬರೂ ಏಕಕಂಠದಿಂದ "ಯಾಕಯ್ಯಾ, ಅದೇ ರೂಪಾಯಿ ವಾಪಸು ಮಾಡಲಿಕ್ಕೆ ಅದಕ್ಕೇನಾಗಿದೆ?" ಎಂದು ಕೂಗಿದೆವು. ಆದರೆ ಅವನಿಗೇನು ಗೊತ್ತು ಆ ರೂಪಾಯಿಯ ರಹಸ್ಯ? ಕ್ಷಣದಲ್ಲಿ ನಮ್ಮ ವರ್ತನೆಗೆ ನಾವೇ ನಾಚಿ ಹಣ ತೆಗೆದುಕೊಂಡು ಹೊರಟೆವು. ಕಾನಡೆ ಮಾತ್ರ ನಕ್ಕರು.

ಮೂವರೂ ಭಾರತ ಭವನದಲ್ಲಿ ಚಹಾ ಸೇವಿಸಿ ಇದೇ ಸಂದರ್ಭವೆಂದು ಆ ರೂಪಾಯಿ ಕೊಡುವಷ್ಟರಲ್ಲಿ ಕಾನಡೆಯವರು ಚಿಲ್ಲರೆ ತೆತ್ತುದರಿಂದ ಹೋಟೆಲಿನವ ನನ್ನ ರೂಪಾಯಿಯನ್ನು ಪರೀಕ್ಷಿಸಲೇ ಇಲ್ಲ.

ಹಾಗೆಯೇ ನಾವು ತರಕಾರಿ ಪೇಟೆಗೆ ಹೋದೆವು. ತರಕಾರಿ ನಾನೊಬ್ಬನೇ ಕೊಳ್ಳುವವನಾದ್ದರಿಂದ ಇದು ಆ ರೂಪಾಯಿ ದಾಟಿಸಲು ಒಳ್ಳೇ ಖಂಡಿತ ಸಂದರ್ಭವಾಗಿತ್ತು. ನನಗೆ ಈ ಹಟಮಾರಿ ರೂಪಾಯಿ ಬೇಸರ ಬಂದಿತ್ತು. ನಾನು ಸ್ವಲ್ಪ ಕ್ಯಾಬೇಜ್, ಕಾಲಿಫ್ಲವರ್ ಕೊಂಡುಕೊಂಡು ಆ ರೂಪಾಯಿ ಕೊಟ್ಟೆ. ಆದರೆ ತರಕಾರಿಯವಳು ಚಿಲ್ಲರೆಯಿಲ್ಲವೆಂದು ಅದನ್ನು ತಿರುಗಿ ಕೊಡಬೇಕೆ? "ಹತ್ತಿರ ಬೇರಾವ ತರಕಾರಿಯವರೂ ಇಲ್ಲ, ನೀವೇ ಎಲ್ಲಿಂದಾದರೂ ಚಿಲ್ಲರೆ ತಂದು ಕೊಡಿ ಒಡೆಯಾ!" ಎಂದಳವಳು. ಇನ್ನೆಲ್ಲಿ ಚಿಲ್ಲರೆ ಬೇಡೋಣವೆಂದು ನಾಯಕರನ್ನೇ ಕೇಳಿದೆ. ಅವರ ಹತ್ತಿರ ಎಲ್ಲ ವ್ಯಾಪಾರದಲ್ಲಿ ಉಳಿದ ಚಿಲ್ಲರೆ ಒಟ್ಟು ಒಂದೇ ರೂಪಾಯಿಯಷ್ಟಿತ್ತು.

ಅರ್ಥಪೂರ್ಣವಾಗಿ ನಾನು ನಾಯಕರ ಮುಖ ನೋಡಿದಾಗ ಅವರು ನನ್ನನ್ನೇ ದುರುಗುಟ್ಟಿ ನೋಡುತ್ತಿದ್ದರು. ನಾನು ಉಪಾಯವಾಗಿ ಸಮಾಧಾನಪಡಿಸುವ ದನಿಯಲ್ಲಿ ಹೇಳಿದೆ: "ನೋಡಿ, ಈ ರೂಪಾಯಿ ನಮಗೇ ಗಂಟು ಬಿದ್ದಿದೆ. ಆದರೆ ನಿಜವಾಗಿ ಇದು ನಿಮ್ಮದು. ನಾನಿಟ್ಟುಕೊಳ್ಳುವುದು ಸರಿಯಾಗದು. ಯಾರ ಕೈಗೆ ಹೋದರೂ ಜಾಣ ರೂಪಾಯಿ ಲಕ್ಷಣವಾಗಿ ನಿಮ್ಮನ್ನೇ ಸೇರುತ್ತಿದೆ. ಇದರಲ್ಲೇನೋ ಮಹತ್ವವಿರಬೇಕು. ಒಂದಲ್ಲ ಒಂದು ದಿನ ನಿಮಗೆ ಅದರ ದೆಸೆಯಿಂದ ಶುಭವಾಗುತ್ತದೆ ನೋಡಿ. ಇಗೊಳ್ಳಿ. ಇದನ್ನು ಖರ್ಚು ಮಾಡಬೇಡಿ. ಆ ಚಿಲ್ಲರೆ ಇತ್ತ ಕೊಡಿ." ಕಾನಡೆಯೂ ಸಮ್ಮತಿಯ ನಗು ಬೀರಿದರು.

ನಾಯಕರು ಯಾಂತ್ರಿಕವಾಗಿ ಚಿಲ್ಲರೆ ತೆಗೆದು ಕೊಟ್ಟು ರೂಪಾಯಿಯನ್ನು ಜೇಬಿಗಿಳಿಸಿದರು.

ಇನ್ನೂ ಆ ರೂಪಾಯಿ ನಾಯಕರೊಡನೆ ಭದ್ರವಾಗಿದೆ. *





ಹಾರಾಡುವ ತಟ್ಟೆಗಳ ರಹಸ್ಯವೇನು?

# ಲೋಕಾಂತರಗಳಿಂದ ಜನ ಬರುತ್ತಿದ್ದಾರೆಯೆ?

ಹಾರಾಡುವ ತಟ್ಟೆ"ಗಳ ಸಮಾಚಾರ ಪತ್ರಿಕೆಗಳಲ್ಲಿ ಪ್ರಕಟವಾಗದೆ ಯಾವ ವರ್ಷವೂ ಕಳೆಯುವುದಿಲ್ಲ ಎನ್ನಬಹುದು. "ನಾನು ನಿನ್ನೆ ರಾತ್ರಿ ಆಕಾಶದಲ್ಲಿ ಅದ್ಭುತ ವೇಗದಿಂದ ಹಾರುವ ತಟ್ಟೆಯಂಥ ಪ್ರಕಾಶಮಾನವಾದ ಪದಾರ್ಥವನ್ನು ಕಂಡೆ" ಎಂದು ಒಬ್ಬಲ್ಲ ಒಬ್ಬ ವರದಿ ಮಾಡುತ್ತಾನೆ; ಅನಂತರ ಅದನ್ನೇ ಅಥವಾ ಅಂಥದನ್ನೇ ಅದೇ ದಿನ ಅಥವಾ ಬೇರೆ ದಿನ ತಾವೂ ಕಂಡೆವು ಎಂದು ಪ್ರಮಾಣಪೂರ್ವಕವಾಗಿ ಹೇಳುವ ನೂರಾರು, ಸಾವಿರಾರು ಜನ ದೊರೆಯುತ್ತಾರೆ.

ಇಂಥ ವರದಿಗಳಲ್ಲಿ ಹೆಚ್ಚಾಗಿ ಕೆಲ ಸಾಮಾನ್ಯ ಲಕ್ಷಣಗಳಿರುತ್ತವೆ. ಈ ಪದಾರ್ಥದ ಆಕಾರ ತಟ್ಟೆಯಂತೆ ಚಪ್ಪಟೆ, ಆದರೆ ದುಂಡಗಿದ್ದು ನಡುವೆ ಗಾಲಿಯಂತೆ ರಂಧ್ರವಿದೆ (ಕೆಲವು ವರದಿಗಳು ಸಿಗಾರಿನ ಅಥವಾ ತತ್ತಿಯ ಆಕಾರದ ಪದಾರ್ಥಗಳನ್ನೂ ವರದಿ ಮಾಡಿವೆ); ಅವು ಅತ್ಯಂತ ವೇಗವಾಗಿ ಸಾಗುತ್ತವೆ; ಮತ್ತು ಅವು ಅತ್ಯಂತ ಪ್ರಕಾಶಮಾನವಾಗಿದ್ದು ಅವುಗಳ ಬೆಳಕು (ಸಾಮಾನ್ಯವಾಗಿ) ಹಸಿರು ಬಣ್ಣಕ್ಕೆ ಹತ್ತಿರವಾದದ್ದಿದೆ.

ಈ ವಿಲಕ್ಷಣ ಪದಾರ್ಥಗಳು ಏನಾಗಿರಬಹುದು? ಕೆಲ ವಿಜ್ಞಾನಿಗಳು ಇವುಗಳನ್ನು ಕೇವಲ ನೀಲಿಕೆಟ್ಟ ಸುದ್ದಿಗಳೆಂದು ತಳ್ಳಿಹಾಕಿಬಿಡುತ್ತಾರೆ. ಬೇರೆ ಕೆಲವರು ವಾತಾವರಣದಲ್ಲಿ

ವಿವಿಧ ಮೂಲಗಳಿಂದ

ಒತ್ತಡದ ಏರು ಪೇರುಗಳಿಂದ ಬಿಸಿಲುಗುದುರೆ ಕಾಣಿಸುವಂತೆ ದೂರದಲ್ಲಿರುವ ಯಾವುದೋ ದೀಪಗಳು ಆಕಾಶದಲ್ಲಿ ಪ್ರತಿಫಲಿತವಾಗಿ ಅತಿ ವೇಗದಿಂದ ಓಡುವಂತೆ ಕಾಣಿಸುವುದೇ ಈ ವರದಿಗಳಿಗೆ ಮೂಲ ಎನ್ನುತ್ತಾರೆ. ಬಹುಶಃ ಸೇಕಡಾ ೯೫ ವರದಿಗಳು ಈ ಎರಡು ವರ್ಗಗಳಿಗೆ ಸೇರುತ್ತವೆಂಬುದು ನಿಜವೆಂದು ತಜ್ಞರು ಒಪ್ಪಿದ್ದಾರೆ.

ಆದರೆ ಉಳಿದ ಐದಂಶದ ವಿಚಾರವೇನು? ೧೯೫೯ ರಲ್ಲಿ ಬ್ರಿಟಿಶ್ ಹವಾಮಾನ ವಿಜ್ಞಾನಿಗಳು ಒಂದು ತಥ್ಯವನ್ನು ಪ್ರಕಟಿಸಿ "ಹಾರಾಡುವ ತಟ್ಟೆ"ಗಳ ಉತ್ಸಾಹಿಗಳ ಮೇಲೆ ತಣ್ಣೀರು ಹೊಯ್ದರು; "೧೯೪೭ ರಿಂದೀಚೆಗೆ ನಾವು ಹವಾಮಾನ ಸಂಶೋಧನೆಗಾಗಿ ಸಾವಿರಾರು ಬೆಲೂನುಗಳನ್ನು ಹಾರಿಸಿದ್ದೆವು. ಆಕಾಶದಲ್ಲಿ ಗಾಳಿಯ ಪ್ರವಾಹದ ಗುಂಟ ಸಾಗುತ್ತಿದ್ದ ಅವುಗಳನ್ನೇ ಜನ ಹಾರಾಡುವ ತಟ್ಟೆಗಳೆಂದು ಭ್ರಮಿಸಿದ್ದಾರೆ." ಈ ವಿವರಣೆ ವಸ್ತುಸ್ಥಿತಿಗೆ ತೀರ ಹೊಂದಿಕೆಯಾಗುತ್ತಿತ್ತು. ಹಾರಾಡುವ ತಟ್ಟೆಗಳನ್ನು ಕಂಡೆವೆಂಬವರು ಹೆಚ್ಚಾಗಿ ಹೇಳುವ ವೇಳೆ ಸೂರ್ಯಾಸ್ತವಾಗಿ ಕೆಲ ಹೊತ್ತಿನ ನಂತರದ್ದು. ನೆಲದ ಮೇಲೆ ಅಸ್ತವಾಗಿದ್ದರೂ ಎತ್ತರದಲ್ಲಿ ಹಾರುವ ಬೆಲೂನುಗಳ ಮೇಲೆ ಇನ್ನೂ ಸೂರ್ಯಪ್ರಕಾಶ ಬೀಳುವುದರಿಂದ ಅವು ಉಜ್ವಲವಾಗಿ ಪ್ರಕಾಶಿಸುವುದು ಸ್ವಾಭಾವಿಕವಾಗಿತ್ತು.

ಕೆಲ ಕಾಲದ ವರೆಗೆ ಈ ಹೇಳಿಕೆ ಹಾರಾಡುವ ತಟ್ಟೆಗಳ ಸಮಸ್ಯೆಗೆ ಸದುತ್ತರವಾಗಿಯೆ ತೋರಿತು. ಆದರೆ ಕೆಲ ಕಾಲ ಮಾತ್ರ. ಹಾರಾಡುವ ತಟ್ಟೆಗಳ ವರದಿಗಳು ೧೯೪೭ ರ ನಂತರ ಮಾತ್ರ ಕೇಳಿ ಬರುತ್ತಿದ್ದರೆ ಸರಿ. ಹಾಗಿಲ್ಲ. ಅವು ಶತಮಾನಗಳ, ಏಕೆ ಸಹಸ್ರಮಾನಗಳ ಹಿಂದಿನಿಂದ ಕೇಳಿ ಬರುತ್ತಿವೆ.

ಉದಾಹರಣೆಗೆ ಬೈಬಲ್ಲಿನ ಹಳೇ, ಹೊಸ ಒಡಂಬಡಿಕೆಗಳೆರಡರಲ್ಲೂ ಅದರ ಉಲ್ಲೇಖ ಏದೆ. ಹಳೇ ಒಡಂಬಡಿಕೆಯಲ್ಲಿ ಪ್ರವಾದಿ ಎಜ಼ಕೇಲ್ ಎರಡು ಕಡೆ ಆಕಾಶದಲ್ಲಿ ಗೋಚ ವಾದ ನೀಲರತ್ನದಂಥ ಬಣ್ಣವುಳ್ಳ, "ಚಕ್ರದೊಳಗೆ ಚಕ್ರವಿಟ್ಟಂತೆ" ಕಾಣುವ ಪದಾರ್ಥಗಳನ್ನು ಹೆಸರಿಸುತ್ತಾನೆ. ಹೊಸ ಒಡಂಬಡಿಕೆಯ 'ದರ್ಶನ (Revelations) ನಲ್ಲಿ ಮತ್ತೆ "ಮಹಾ ಬಲಿಷ್ ನಾದ ದೇವದೂತನು ಭಾರೀ ಬೀಸುವ ಕಲ್ಲ ನಂಥ ಕಲ್ಲನ್ನು ತೆಗೆದುಕೊಂಡು ಅದನ್ನು ಸಮುದ್ರಕ್ಕೆ ಒಗೆದನು" ಎಂತಲೂ ಅದರಿಂದ ಬೆಬ ಲೋನ್ ನಗರ ನಾಶವಾಯಿತೆಂದೂ ಹೇಳಲಾಗಿದೆ. ಹಿಂದೂ ಪುರಾಣಗಳಲ್ಲಿ ಬರುವ ವಿಷ್ಣು ಚಕ್ರದ ಕಲ್ಪನೆಯ ಮೂಲವೂ ಇದೇ ಇ ಬಹುದೆ?

೧೯ ನೇ ಶತಮಾನದಲ್ಲಿ ಈ ಚಕ್ರಗಳ ಬಗ್ ಹೆಚ್ಚು ಹೆಚ್ಚು ವಿವರವಾದ ವರದಿಗಳು ಹೆಚ್ಚು ಹೆಚ್ಚು ವಿಶ್ವಸನೀಯ ವರ್ಗಗಳಿಂದ ಬರತೊಡಗಿದವು. ವಿಯನ್ನಾದ ಮಾಧ್ಯಮಿಕ ಶಾಲೆಯ ಉಪಾಧ್ಯಾಯನಾದ ಕಾರ್ಲ್ ಶ್ನೀದರ್ ೧೮೩ ರಲ್ಲಿ ತಾನು ಕಂಡದ್ದನ್ನು ಕೂಲಂಕಷವಾಗಿ ವರ್ಣಿಸಿದ್ದಾನೆ. ಜೂನ್ ತಿಂಗಳ ಒಂದು ಸಾಯಂಕಾಲ ಶ್ನೀದರ್ ತನ್ನ ಗುಡಿಸಲ ಹೊರಗೆ ಕುಳಿತಿದ್ದ. ಒಮ್ಮೆಲೆ ಆಕಾ ದಿಂದ ಮಂದ್ರ ಧ್ವನಿಯೊಂದು ಕೇಳಿಸಿತು ಮೇಲೆ ನೋಡಿದರೆ ಕುಂಬಾರನ ಚಕ್ರದಾಕಾರದ, ಬೆಳ್ಳಿ ಬಣ್ಣದ ಪ್ರಚಂಡ ಪದಾರ್ಥವೊಂದು "ನಂಬಲಾರದ ವೇಗ"ದಿಂದ ಚಲಿಸತ್ತಿತ್ತು. ಅದು ಕಣ್ಣು ಕೋರೈಸುವಷ್ಟು ಉಜ್ವ ವಾಗಿತ್ತು. ಒಂದು ಸುತ್ತು ಹಾಕಿ "ಮಿಂಚ ನಂತೆ" ಮೇಲೇರಿದ ಈ ಪದಾರ್ಥ ದುಂಡಾ ದ್ದರೂ ಒಂದು ಕಡೆ ತುಸು ಚೂಪಾದ ಮೂ ಅದಕ್ಕಿದ್ದು ಅದರಿಂದ "ನೀಲಿ-ಕೆಂಪು ಜ್ವಾಲೆ ಹೊರಹೊಮ್ಮುತ್ತಿತ್ತು. ಅದರ ವ್ಯಾಸ ಸುಮಾ ೧೦೦ ಮೀಟರ್ (೧೧೪ ಗಜ) ಇದ್ದಿತೆಂದ ಹೇಳಿ ಆತ ವರದಿಯನ್ನು ಹೀಗೆ ಮುಗಿಸಿದ್ದಾನ

# ದಂತಕ್ಷಯವನ್ನು ಕಾಲ್ಗೇಟಿನಿಂದ ಇದಿರಿಸಿರಿ

## ದಿನವಿಡೀ ಇರುವ **ಬಾಯಿಯ ದುರ್ಗಂಧವನ್ನು ತೊಲಗಿಸಿರಿ!**



ಏಕೆಂದರೆ: ಕಾಲ್ಗೇಟ್ ಡೆಂಟಲ್ ಕ್ರೀಮಿನಿಂದ ಒಮ್ಮೆ ಹಲ್ಲುಜ್ಜುವುದರಿಂದ ಬಾಯಿ ವಾಸನೆಯನ್ನೀಯುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85 ರಷ್ಟು ಕ್ರಿಮಿಗಳು ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜಿದರೆ ದಂತ ಚೂರ್ಣಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟುವುದು ಮತ್ತು ಕಾಲ್ಗೇಟ್‌ನಿಂದ ಬಾಯಿಯ ದುರ್ಗಂಧವು 10ರಲ್ಲಿ 7 ಸಂದರ್ಭಗಳಲ್ಲಿ ತಕ್ಷಣವೇ ನಿವಾರಣೆಯಾಗುವುದು ಎಂದು ವೈಜ್ಞಾನಿಕ ಪರೀಕ್ಷೆಗಳು ಪ್ರಮಾಣ ಪಡಿಸಿವೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಇದರ ಪ್ರಬಲವಾದ, ಒಳನುಗ್ಗುವ ನೊರೆಯು ಹಲ್ಲುಗಳ ನಡುವಣ ಅಗೋಚರ ಸಂದುಗಳನ್ನು ಪ್ರವೇಶಿಸಿ, ಬಹಳ ದಂತಕ್ಷಯ ಮತ್ತು ಬಾಯಿಯ ದುರ್ಗಂಧಕ್ಕೆ ಕಾರಣವಾಗುವ ಕೊಳೆಯುತ್ತಿರುವ ಆಹಾರ ಕಣಗಳನ್ನು ತೊಲಗಿಸುವುದು.

ಹೆಚ್ಚು ಕಾಲ ಬಾಳುವ ಕಾಲ್ಗೇಟಿನ ಪರಿಮಳದ ರುಚಿಯು ಮಕ್ಕಳಿಗೆ ಪ್ರಿಯವಾಗಿರುವುದರಿಂದ ಅವರ ಹಲ್ಲುಜ್ಜಲು ಕಾಲ್ಗೇಟನ್ನೇ ಬಯಸುವರು.




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದ ಪಡೆಯಿರಿ... ಒಂದು ಡಬ್ಬಿ ಹಲವು ತಿಂಗಳವರೆಗೆ ಉಳಿಯುವುದು!

ಕಾಲ್ಗೇಟಿನಿಂದ ನಿಯಮಿತವಾಗಿ ಉಜ್ಜುವಿಕೆಯು

- ✓ ದಂತಕ್ಷಯವನ್ನಿದಿರಿಸುವುದು
- ✓ ಬಾಯಿಯ ದುರ್ಗಂಧವನ್ನು ತೊಲಗಿಸುವುದು
- ✓ ಹಲ್ಲುಗಳನ್ನು ಪರಿಶುಭ್ರವಾಗಿಡುವುದು




ಶುಭ್ರ ಹಲ್ಲುಗಳಿಗೆ ಮತ್ತು ನಿರ್ಮಲ ಶ್ವಾಸಕ್ಕೆ... ಹೆಚ್ಚಿನ ಜನರು ಪ್ರಪಂಚದ ಇತರ ಯಾವ ಡೆಂಟಲ್ ಕ್ರೀಂಗಿಂತಲೂ ಅಧಿಕವಾಗಿ ಕಾಲ್ಗೇಟನ್ನೇ ಕೊಳ್ಳುವರು.

"ಈ ವಿಕಾರ ಪದಾರ್ಥ ಆಕಾಶದಲ್ಲಿ ಹೇಗೆ ನಿಂತಿತ್ತೊ ನಾನರಿಯೆ . . . . . ಅದು ಚಕ್ರಗತಿಯಲ್ಲಿ ಅಲೌಕಿಕವಾದ ಪರೀಕ್ಷಾ ಸಂಚಾರವೊಂದನ್ನು ಮಾಡಿ ಆ ಮೇಲೆ ಮೇಲಕ್ಕೆ ಹಾರಿ ಆಕಾಶದಲ್ಲಿ ಮಾಯವಾಯಿತು."

ಇಂದು ಕೇಳಿ ಬರುವ ವರದಿಗಳಿಗೂ ಈ ವರ್ಣನೆಗೂ ಎಷ್ಟು ಸಾದೃಶ್ಯ !

೧೮೮೨ ನವೆಂಬರ ೧೭ ರ ರಾತ್ರಿ, ಸಾವಿರಾರು ಜನರು ಇಂಗ್ಲಂಡಿನಲ್ಲಿ ಕಂಡ "ಲೋಕಾಂತರದ ಆಗಂತುಕ"ನನ್ನು ಖಗೋಲ ವಿಜ್ಞಾನಿ ವಾಲ್ಟರ್ ಮಾಂಡರರು ವರದಿ ಮಾಡಿದ್ದಾರೆ. ಗ್ರೀನ್‌ವಿಚ್ ವೇಧಶಾಲೆಯ ದೂರದರ್ಶಕದಲ್ಲಿ ಅವರು ಉತ್ತರ ದಿಕ್ಕನ್ನು ಪರಿಶೀಲಿಸುತ್ತಿದ್ದಾಗ "ಈಶಾನ್ಯಕ್ಕೂ ಪೂರ್ವಕ್ಕೂ ನಡುವೆ ಹಸಿರು ಪ್ರಕಾಶದ ಮಹಾವೃತ್ತಾಕಾರ"ದ ತಟ್ಟೆಯೊಂದು ಕಾಣಿಸಿಕೊಂಡಿತು. ಅದು ಸರಾಗವಾಗಿ ದಿಗಂತದಿಂದ ದಿಗಂತಕ್ಕೆ ಕೇವಲ ಎರಡೇ ನಿಮಿಷಗಳಲ್ಲಿ ಸಾಗಿತು. ಅದು ಭೂಮಿಯಿಂದ ಸುಮಾರು ೧೩೩ ಮೈಲು ಎತ್ತರದಲ್ಲಿತ್ತೆಂದೂ ಸೆಕೆಂದಿಗೆ ೧೦ ಮೈಲು ವೇಗದಿಂದ ಸಾಗುತ್ತಿರಬೇಕೆಂದೂ ಮಾಂಡರರು ಬರೆದಿದ್ದಾರೆ.

ಅದರ ಮರುವರ್ಷ ಬಸ್ರಾದಿಂದ ಮುಂಬಯಿಗೆ ಹೊರಟಿದ್ದ "ಎಸ್. ಎಸ್. ಪಾಟ್ನಾ" ಎಂಬ ಹಡಗಿನ ಕಪ್ತಾನನು ಪರ್ಶಿಯನ್ ಆಖಾತದಲ್ಲಿ ಭಾರಿ ಪ್ರಕಾಶಮಾನ ಚಕ್ರವೊಂದು ಸಮುದ್ರದ ನೀರೊಳಗೆ ತಿರುಗುತ್ತಿದ್ದುದನ್ನು ಗುರುತು ಹಾಕಿಟ್ಟಿದ್ದಾನೆ. ಬಹುಶಃ ಅಲ್ಲಿ ಯಾವುದೊ ಹಾರಾಡುವ ತಟ್ಟೆಗೆ ಅಪಘಾತ ಸಂಭವಿಸಿರಬೇಕು.

ಅಂದಿನಿಂದ ೫೦ ವರ್ಷ ಕಾಲದಲ್ಲಿ ಅಸಂಖ್ಯ ವರದಿಗಳು ಬಂದವು. ಸಾಮಾನ್ಯರಿಂದ, ನಾವಿಕರಿಂದ, ಪತ್ರಿಕಾಕರ್ತರಿಂದ, ವೈಮಾನಿಕರಿಂದ, ವಿಜ್ಞಾನಿಗಳಿಂದ ದೃಢಪಡಿಸಲ್ಪಟ್ಟ ಅನೇಕ ವರದಿಗಳೂ ಅವುಗಳಲ್ಲಿದ್ದವು. ೧೯೩೨ ರಲ್ಲಿ ತೀರಿಕೊಂಡ ಚಾರ್ಲಸ್ ಫೋರ್ಟನೆಂಬ ಅಮೇರಿಕನ್ನನು ಜೀವಮಾನವೆಲ್ಲ ಇಂಥ ಸುದ್ದಿಗಳನ್ನು ಸಂಗ್ರಹಿಸಿ ಪರಿಶೀಲಿಸಿದ ಮೇಲೆ "ಬೇರಾವ ಲೋಕದಿಂದಲೋ ಅತಿಮಾನುಷ ಜೀವಿಗಳು ಅನೇಕ ಶತಮಾನಗಳಿಂದ ನಮ್ಮ ಭೂಮಿಗೆ ಬಂದು ಹೋಗುತ್ತಿವೆ" ಎಂಬ ತೀರ್ಮಾನಕ್ಕೆ ಬಂದನು.

ಆದರೆ ಸಾರ್ವಜನಿಕರ ಕುತೂಹಲವನ್ನು ಕೆರಳಿಸುವ ಈ ಅಲೌಕಿಕ ಸಂಗತಿಗಳು ಎರಡನೇ ಮಹಾಯುದ್ಧದ ನಂತರ ವಿಜ್ಞಾನಿಗಳನ್ನೂ ಸರಕಾರಗಳನ್ನೂ ಆಕರ್ಷಿಸಿವೆ. ೧೯೪೭ ರಲ್ಲಿ "ಹಾರಾಡುವ ತಟ್ಟೆ"ಗಳ ಅಸಂಖ್ಯ ವರದಿಗಳು ಪ್ರಕಟವಾಗಿ ಅವುಗಳ ಎರಡು ಫೋಟೋಗಳು ಕೂಡ ಬೆಳಕು ಕಂಡ ಬಳಿಕ ಅಮೇರಿಕನ್ ಸರಕಾರ ಅದರಲ್ಲಿ ಆಸಕ್ತಿ ತಾಳಿ ಆಕಾಶಬಾಣ, ಆಕಾಶಯಾನ, ಖ-ಭೌತಶಾಸ್ತ್ರ, ಭೌತಶಾಸ್ತ್ರ ಮೊದಲಾದವುಗಳ ತಜ್ಞರಿಂದೊಡಗೂಡಿದ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿ ಮೂರು ಸಾವಿರಕ್ಕೂ ಮೇಲ್ಪಟ್ಟ ವರದಿಗಳನ್ನು ಪೃಥಕ್ಕರಿಸಿ ೧೯೫೦ ರಲ್ಲಿ ವರದಿ ಮಾಡಿತು. ರೆಕ್ಕೆ ಅಥವಾ ಪಕ್ಕಗಳಿಲ್ಲದ, ೧೦೦ ರಿಂದ ೨೫೦ ಅಡಿ ವ್ಯಾಸದ, ವೃತ್ತಾಕಾರದ, ಪ್ರಕಾಶಮಾನವಾದ ಅಜ್ಞಾತ ಪದಾರ್ಥಗಳನ್ನು ಅನೇಕರು ಕಂಡದ್ದು ನಿಜವಾಗಿತ್ತು.

"ಒಂದು ವೇಳೆ ಅಮೇರಿಕ ಸರಕಾರಕ್ಕೆ ಈ ವರದಿಗಳಲ್ಲಿ ತಥ್ಯವಿಲ್ಲೆನಿಸಿದ್ದರೆ ಅದು ಹಾಗೆ ಪ್ರಕಟಿಸಿ ಜನರ ಭ್ರಮನಿರಸನ ಮಾಡಬಹುದಿತ್ತು. ಆದರೆ ಅದು ಹಾಗೆ ಮಾಡಲಿಲ್ಲ. ಅದು ತನ್ನ ಪ್ರತಿಯೊಂದು ಸಂಸ್ಥಾನದಲ್ಲಿ ಈ ಪದಾರ್ಥಗಳನ್ನು ಅಡ್ಡಗಟ್ಟಲು ವಿಶೇಷ ಕೆಮರಾಗಳಿಂದೊಡಗೂಡಿದ ಜೆಟ್ ವಿಮಾನಗಳನ್ನು ನಿಯೋಜಿಸಿದೆ" ಎಂದು ಜಾನ್ ಕ್ರಾಸ್ಲಿಯವರು ಹಾರಾಡುವ ತಟ್ಟೆಗಳನ್ನು ಕುರಿತು "ಅಮೃತ ಬಜಾರ್ ಪತ್ರಿಕೆ"ಯಲ್ಲಿ ಬರೆದಿದ್ದಾರೆ

ಯಾವ ದೃಷ್ಟಿಯಿಂದಲೂ ವಿಶ್ವಸನೀಯವ-

ಲ್ಲೆಂದು ಹೇಳಲಸದಳವಾದ ಕೆಲ ವರದಿಗಳನ್ನು ಇಲ್ಲಿ ವಿವರಿಸಲಾಗುವುದು : ಅಮೇರಿಕದ ವಿಮಾನಪಡೆಯ ವಿಲಿಯಂ ಬ್ರೆಂಟನ್ ಒಂದು ನಿರಭ್ರ ರಾತ್ರಿಯಲ್ಲಿ ಚೆಸಾಪೆಕ್ ಉಪಸಾಗರದ ಮೇಲ್ಗಡೆ ೮,೦೦೦ ಅಡಿ ಎತ್ತರದಲ್ಲಿ ಹಾರುತ್ತಿದ್ದಾಗ ಹಠಾತ್ತಾಗಿ ಕೆಂಪು ಬೆಳಕಿನಿಂದ ಚಕಿತನಾದ. ನೋಡಿದಾಗ ಆರು ಭಾರಿ ಪ್ರಕಾಶಮಾನ ಚಕ್ರಗಳು ತನ್ನ ಕಡೆ ಬರುವುದು ಕಂಡಿತು. ಅವು ನೇರವಾಗಿ ವಿಮಾನದಿಂದ ೬,೦೦೦ ಅಡಿ ಕೆಳಗೆ ಧಾವಿಸಿಬಂದವು. ಪ್ರತಿಯೊಂದೂ ನೂರಡಿ ವ್ಯಾಸವುಳ್ಳದ್ದಾಗಿತ್ತು. ಅವು ಅಷ್ಟೇ ಅಕಸ್ಮಾತ್ತಾಗಿ ಮುಖ ತಿರುಗಿಸಿ ಬಂದ ದಿಕ್ಕಿಗೇ ಚಿಮ್ಮಿದವು. ಅನಂತರ ಮತ್ತೆರಡು ತಟ್ಟೆಗಳು ಬಂದು ಅವುಗಳನ್ನು ಕೂಡಿಕೊಂಡ ಮೇಲೆ ಎಲ್ಲವೂ ನೇರವಾಗಿ ಮೇಲಕ್ಕೆ ಹಾರಿ ಕಣ್ಮರೆಯಾದವು. "ಇದನ್ನು ನೋಡಿದ ನಮಗೆ ಪ್ರಜ್ಞೆ ಮರಳಿ ಬರಲು ಪೂರ್ತಿ ಎರಡು ನಿಮಿಷ ಹಿಡಿಯಿತು" ಎಂದಾತ ಹೇಳುತ್ತಾನೆ. ಪ್ರಜ್ಞೆ ಹೋಗುವ ವಿಚಾರವೇ ! ಅವು ಏನಿಲ್ಲೆಂದರೂ ತಾಸಿಗೆ ೧೨,೦೦೦ ಮೈಲು ವೇಗದಿಂದ ಸಾಗುತ್ತಿದ್ದವು. ಅಷ್ಟು ಕೆಳಗೆ, ಅಷ್ಟು ವೇಗದಿಂದ ಹಾರಿದರೂ ವಾತಘರ್ಷಣೆಯಿಂದ ನಾಶವಾಗದ ಆಕಾಶ ಯಾನವನ್ನು ಇಂದಿಗೂ ಯಾರೂ ನಿರ್ಮಿಸಿಲ್ಲ— ಈ ಭೂಮಿಯಲ್ಲಿ.

ಪ್ಲೂಟೋ ಗ್ರಹವನ್ನು ಕಂಡುಹಿಡಿದ ಕ್ಲೈಡ್ ಟಾಂಬಾಚರು ೧೯೪೮ ರಲ್ಲಿ ಲಾ ಕ್ರೂಸಸ್‌ನಲ್ಲಿರುವ ತಮ್ಮ ಮನೆಯ ಮುಂದೆ ಹೆಂಡತಿ ಮತ್ತು ಅತ್ತೆಯೊಡನೆ ಕುಳಿತಿದ್ದಾಗ ಆಕಾಶದಲ್ಲಿ ಅವರ ತಲೆಯ ಮೇಲ್ಗಡೆ ನಿಶ್ಶಬ್ದವಾಗಿ ಒಂದು ಪದಾರ್ಥ ದಕ್ಷಿಣದಿಂದ ಉತ್ತರಕ್ಕೆ ಹಾರಿ ಹೋಯಿತು. ಅದು ಅವರು ಹಿಂದೆಂದೂ ಕಂಡಿರದ ಮಾದರಿಯ ಆಕಾಶಯಾನವಾಗಿತ್ತು. ದೀರ್ಘವರ್ತುಲಾಕಾರದ ಆ ಪದಾರ್ಥದ ಹಿಂಭಾಗದಲ್ಲಿ ರೂಪರಹಿತವಾದ ಪ್ರಕಾಶ ಕಾಣಿಸುತ್ತಿತ್ತು. ಇಡೀ ವಸ್ತು ನೀಲಿ-ಹಸುರು ಕಾಂತಿಯಿಂದ ಮಿಂಚುತ್ತಿತ್ತು. ವಿಮಾನಕ್ಕಿಂತ ವೇಗವಾಗಿ ಉಲ್ಕೆಗಿಂತ ಸಾವಕಾಶವಾಗಿ ಸರಿಯುತ್ತಿದ್ದ ಈ "ಹಡಗಿನ" ಮುಂಭಾಗದಲ್ಲಿ ಕನಿಷ್ಠ ಪಕ್ಷ ಆರು "ಕಿಡಕಿ" ಗಳಾದರೂ ಇದ್ದವು. ಎರಡು ಸಾಲು ಕಿಡಕಿಗಳುಳ್ಳ ಇಂಥದೇ ಒಂದು "ಗಾಳಿ ಹಡಗ"ನ್ನು ಕಂಡ ವರದಿಯನ್ನು ಅದೇ ವರ್ಷ ಬೇರೆ ಇಬ್ಬರು ವೈಮಾನಿಕರೂ ಕೊಟ್ಟಿದ್ದರು. ಅವು ಗೊತ್ತಿದ್ದ ಯಾವ ವಿಮಾನವನ್ನೂ ಹೋಲುತ್ತಿರಲಿಲ್ಲ.

ಈ ಹಾರಾಡುವ ತಟ್ಟೆಗಳ ಬೆಂಬತ್ತುವ ಹವ್ಯಾಸದಲ್ಲಿ ಪ್ರಾಣ ಕೊಟ್ಟವರೂ ಇದ್ದಾರೆ. ೧೯೪೮ ಜನವರಿಯಲ್ಲಿ ಅಮೇರಿಕದ ಕೆಂಟಕಿಯ ಮಡಿಸನ್ ವಿಲೆ ನಗರದ ಮೇಲ್ಭಾಗದಲ್ಲಿ ಕಾಣಿಸಿಕೊಂಡ ಒಂದು ತಟ್ಟೆಯನ್ನು ಬೆನ್ನಟ್ಟಲು ಮೂವರು ವೈಮಾನಿಕರಿಗೆ ಆಜ್ಞೆಯಾಯಿತು. ವಿಪರೀತ ವೇಗದಿಂದ ಸಾಗುತ್ತಿದ್ದ ಅದನ್ನು ಅವರು ೨೫ ನಿಮಿಷ ಬೆಂಬತ್ತಿದರೂ ಅದರಿಂದ ಮೂರುವರೆ ಮೈಲು ದೂರವೇ ಉಳಿದರು. ಇಬ್ಬರು ನಿರಾಶರಾಗಿ ಹಿಂದಿರುಗಿದರು; ಮತ್ತೂ ಬೆನ್ನಟ್ಟಿದ ಒಬ್ಬನ ವಿಮಾನದ ಭಗ್ನಾವಶೇಷವೂ ಮೃತದೇಹವೂ ಆ ಮೇಲೆ ಸಿಕ್ಕಿತು.

೧೯೫೧ ರಲ್ಲಿ ಅಯೋವದ ಸಿಯೋಕ್ಸ್ ನಗರದ ಬಳಿ ಕಾಣಿಸಿಕೊಂಡ ಒಂದು ಬೆಳಕನ್ನು ಬೆನ್ನಟ್ಟಿದ ಡಾಕೋಟಾ ವಿಮಾನದ ಮೇಲೆ ಆ ಪ್ರಕಾಶ ದಾಳಿ ಮಾಡುವವರಂತೆ ಎರಿ ಬಂತು. ಆದರೆ ಅವರಿಂದ ಕೇವಲ ೨೦೦ ಅಡಿ ದೂರದಲ್ಲಿ ಅದು ಗತಿಯನ್ನು ತಿರುವುಮುರುವು ಮಾಡಿ ಪಕ್ಕದಲ್ಲೇ ಸಾಗಿತು. ಇದು ಬಲು ದೊಡ್ಡ ರೆಕ್ಕೆಯುಳ್ಳ ಯಾನವಾಗಿದ್ದು ಅದರ ಕೆಳಭಾಗ ಪ್ರಕಾಶಮಾನವಾಗಿತ್ತು. ಅನಂತರ ಅದು ಕೆಳಗಿಳಿದು ಅದೃಶ್ಯವಾಗಿ ಹೋಯಿತು.

ತಂಡತಂಡವಾಗಿ ಅರ್ಧ ವೃತ್ತಾಕಾರದಲ್ಲಿ ಸಾಗುವ ಹಾರಾಡುವ ತಟ್ಟೆಗಳ ಗುಂಪುಗಳಿ

ದ್ದಾಗ ಒಂದು ದೊಡ್ಡ ತಟ್ಟೆ ಅವುಗಳ ನಾಯಕತ್ವ ವಹಿಸಿದ ಹಾಗೆ ಇತ್ತು. ಕಿಡಿಕಿಗಳುಳ್ಳ ದೊಡ್ಡ ಯಾನಗಳೂ ಇವೆ. ಇದಲ್ಲದೆ ಅಜ್ಞಾತ ಅಗ್ನಿಗೋಲಗಳೂ ಕಾಣಿಸಿಕೊಂಡಿವೆ. ನಿಶ್ಶಬ್ದವಾಗಿ ಉರಿಯುವ ಇಂಥ ಗೋಲಗಳು ಅಮೇರಿಕದ ನ್ಯೂ ಮೆಕ್ಸಿಕೋ ಭಾಗದಲ್ಲಿ ಪರಿಶೀಲಿಸಲ್ಪಟ್ಟಾಗ ಅವು ಉಲ್ಕೆಗಳಾಗಿರಲು ಸಾಧ್ಯವಿಲ್ಲೆಂದು ಸಿದ್ಧವಾಯಿತು. ಏಕೆಂದರೆ ಉಲ್ಕೆಗಳಲ್ಲಿ ತಾಮ್ರವಿರುವುದಿಲ್ಲ. ಇದು ತಾಮ್ರ ಉರಿಯುವಾಗಿನ ಬೆಳಕಿನಂತಿತ್ತು. ಅನಂತರ ವಾಯು ಪರೀಕ್ಷೆ ಮಾಡಿದಾಗ ನಿಜವಾಗಿ ಆ ಪ್ರದೇಶದ ಗಾಳಿಯಲ್ಲಿ ತಾಮ್ರದ ಅಂಶ ಸಿಕ್ಕಿತು. ಆ ಮುಂಚೆ ಅದು ಇರಲಿಲ್ಲ.

ಇನ್ನೂ ಹೆಚ್ಚು ಭಯಪ್ರದವಾದದ್ದು "ವಿಚಿತ್ರ" ಜನರು ಈ ವಾಹನಗಳಿಂದ ಇಳಿದು ಏರುವುದನ್ನು ಕಂಡವರ ಹೇಳಿಕೆಗಳು. ಕೆಲಿಫೋರ್ನಿಯದ ವೇಧ ಶಾಲೆಗಳ ದೂರ ದರ್ಶಕಗಳನ್ನು ಕೆಲಿಫೋರ್ನಿಯದ ಮರಳು ಕಾಡಿನ ಮೇಲೆ ತಿರುಗಿಸಿದಾಗ ವೃತ್ತಾಕಾರದ ಪದಾರ್ಥಗಳನ್ನು ಕುಳ್ಳರಂತೆ ಕಾಣಿಸುವ ಜನರು ಏರಿದ ಹಾಗೆಯೂ ಅನಂತರ ಅವು ಭೀಮ ವೇಗದಿಂದ ಹಾರಿಹೋದ ಹಾಗೆಯೂ ತೋರಿದ್ದುಂಟು.

ಜಾನ್ ಕ್ವಾಸ್ಲಿಯವರು ಉದಾಹರಿಸಿದ ಇನ್ನೊಂದು ಘಟನೆ ಇನ್ನೂ ಆಶ್ಚರ್ಯಕರವಾಗಿದೆ. ಜಾನ್ ಬ್ಲಾಕ್ ಮತ್ತು ಜಾನ್ ವಾನ್ ಅಲೆನ್ ಎಂಬಿಬ್ಬರು ಲೋಹ ಸಂಶೋಧಕರು ೧೯೫೩ ಜೂನ್ ೨೦ ರಂದು ರಾತ್ರಿ ಬ್ರಶ್ ಕ್ರೀಕ್ ಎಂಬಲ್ಲಿ ಎರಡು ಪರ್ವತ ನದಿಗಳು ಕೂಡುವಲ್ಲಿ ಬರುತ್ತಿದ್ದಾಗ್ಗ ಒಂದು ಬಂಡೆಗಲ್ಲ ಮೇಲೆ ನಾಯಿಕೊಡೆಯಂಥ ತಳತಳಿಸುವ ಲೋಹಮಯ ಪದಾರ್ಥವೊಂದಿತ್ತು. ಹತ್ತಿರವೇ ಹಸಿರು ಬಟ್ಟೆ ಧರಿಸಿದ ಮನುಷ್ಯಾಕೃತಿಯ ನಾಲ್ಕೂವರೆ ಅಡಿ ಎತ್ತರದ ಜೀವಿ ತಳತಳಿಸುವ ಪಾತ್ರದಲ್ಲಿ ನೀರು ತುಂಬಲು ಬಗ್ಗಿತ್ತು. ಇವರು ಬಂದ ಸುಳಿವು ಹತ್ತಿದೊಡನೆ ಆ ಜೀವಿ ಓಡಿಬಂದು ಆ ನಾಯಿ ಕೊಡೆಯೊಳಗೆನುಗ್ಗಿದೊಡನೆ ಬುಸುಗುಟ್ಟುತ್ತ ಆ ಯಂತ್ರ ಪ್ರಚಂಡ ವೇಗದಿಂದ ಹಾರಿಹೋಯ್ತು.

ಇದೆಲ್ಲದರ ಅರ್ಥವೇನು ? ಇಷ್ಟು ವಿಶ್ವಸನೀಯವಾದ ಸಾಕ್ಷಿಗಳೆಲ್ಲ ನೂರುಗಟ್ಟಳೆಯಲ್ಲಿರುವಾಗ "ಹಾರಾಡುವ ತಟ್ಟೆ"ಗಳೆಂಬ ಅಪೂರ್ವ ಪದಾರ್ಥಗಳು ಭೂಮಿಯ ಬಳಿ ಸುಳಿದಾಡುತ್ತಿವೆ ಎಂಬ ಸಂಗತಿಯನ್ನು ನಿರಾಕರಿಸುವ ಧೈರ್ಯ ಯಾರಿಗೂ ಆಗಲಿಕ್ಕಿಲ್ಲ. ಭೂಮಿಯಲ್ಲಿ ಯಾವುದಾದರೂ ಸರಕಾರ ಅಥವಾ ವಿಜ್ಞಾನಿಗಳು ಈ "ವಾಹನ"ಗಳನ್ನು ಹಾರಿಸುತ್ತಿರಬಾರದೇಕೆ ? ಎಲ್ಲ ಸರಕಾರಗಳು ಈ ಬಗ್ಗೆ ತಮಗೇನೂ ಗೊತ್ತಿಲ್ಲವೆಂದು ಸಾರಿವೆ. ಅಲ್ಲದೆ ಈ ವಾಹನಗಳು ಯಾವುದೇ ಗೊತ್ತಿದ್ದ ಯಾನಗಳ ಹಾಗಿಲ್ಲ.

ಹಾಗಾದರೆ ಬೇರಾವುದಾದರೂ ಗ್ರಹ ನಕ್ಷತ್ರಗಳಿಂದ ಭೂಮಿಯನ್ನು ಪರೀಕ್ಷಿಸಲು ಜೀವಿಗಳು ಬರುತ್ತಿರಬಹುದೆ ? ಈ ಪ್ರಶ್ನೆಯನ್ನು ೨೫ ವರ್ಷಗಳ ಹಿಂದೆ ಯಾರಾದರೂ ಗಂಭೀರವಾಗಿ ಕೇಳಿದ್ದರೆ ಆತ ವಿಜ್ಞಾನಿಗಳ ನಗೆಗೀಡಾಗಬಹುದಿತ್ತು. ಇಂದು ಹಾಗಿಲ್ಲ.

೨೫ ವರ್ಷಗಳ ಹಿಂದೆ ಇಡೀ ವಿಶ್ವದಲ್ಲಿ ನಮ್ಮ ಭೂಮಿಯೊಂದರ ಮೇಲೆ ಮಾತ್ರ ಜೀವಕೋಟಿ ಇದೆ ಎಂಬ ಭಾವನೆ ಸಾಮಾನ್ಯವಾಗಿತ್ತು. ಆದರೆ ಈಚೆಗೆ ನಕ್ಷತ್ರ ಮತ್ತು ಗ್ರಹಗಳ ಮತ್ತು ಜೀವ ಜಾತದ ಹುಟ್ಟಿನ ಬಗ್ಗೆ ಜಗತ್ತಿನಲ್ಲೆಲ್ಲ ನಡೆದ ಸಂಶೋಧನೆಗಳು ಗ್ರಹಗಳ ಮತ್ತು ಜೀವಿಗಳ ಉದಯ ಒಂದು ಕಡೆ ಮಾತ್ರ ಒಮ್ಮೆ ಮಾತ್ರ ಘಟಿಸಿದ ಆಕಸ್ಮಿಕಗಳಲ್ಲವೆಂದು ತೋರಿಸಿಕೊಟ್ಟಿವೆ. ನಮ್ಮ ಆಕಾಶ ಗಂಗೆಯೆಂಬ ನಕ್ಷತ್ರ ಪುಂಜವೊಂದರಲ್ಲೇ ಏನಿಲ್ಲೆಂದರೂ ಲಕ್ಷಾಂತರ ನಕ್ಷತ್ರಗಳಿಗೆ ನಮ್ಮ ಸೂರ್ಯನಿಗಿರುವಂತೆ ಗ್ರಹಗಳು ಇರಬೇಕೆಂದೂ ಇವುಗಳಲ್ಲಿ ನಮ್ಮ ಭೂಮಿಯಂತೆ ಜೀವ ವಿಕಾಸಕ್ಕೆ ಹಿತವಾಗಿರುವ ಗ್ರಹ

ಗಳು ಸಾವಿರಾರಾದರೂ ಇರಬೇಕೆಂದೂ ಬಹು ಜನ ವಿಜ್ಞಾನಿಗಳು ಒಪ್ಪುತ್ತಾರೆ. ಇವುಗಳಲ್ಲಿ ಕೆಲವಾದರೂ ಭೂಮಿಗಿಂತ ಹಳೆಯವಿರಬೇಕು. ಮತ್ತು ಅವುಗಳಲ್ಲಿ ಜೀವ ವಿಕಾಸ ಇನ್ನೂ ಮುಂದೆ ಹೋಗಿ ಮಾನವರಿಗಿಂತ ಬುದ್ಧಿಶಾಲಿಗಳಾದ ಜೀವಿಗಳು ಇರಬಹುದು.

ಅಷ್ಟೇ ಏಕೆ, ಸೋವಿಯತ್ ಭೌತ ವಿಜ್ಞಾನಿ ಷ್ಕ್ಲೋವಸ್ಕಿಯವರು ಕೆಲ ಕೋಟಿ ವರ್ಷಗಳ ಹಿಂದೆ ನಮ್ಮ ಮಂಗಳ ಗ್ರಹದಲ್ಲೇ ಬುದ್ಧಿಶಾಲಿಗಳಾದ ಮಾನವರಿದ್ದಿರಬೇಕೆಂದು ತರ್ಕಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಮಂಗಳನ ಸುತ್ತ ಇರುವ ಎರಡು "ಚಂದ್ರ"ರು (ಫೋಬೋಸ್ ಮತ್ತು ದೀಮೋಸ್) ನಿಸರ್ಗ ನಿರ್ಮಿತವಾಗಿರದೆ ಕೋಟ್ಯಂತರ ವರ್ಷ ಪೂರ್ವದಲ್ಲಿ ನಮಗಿಂತಲೂ ಬುದ್ಧಿಶಾಲಿಗಳಾದ "ಮಾನವ"ರು ಹಾರಿಸಿದ ಪ್ರಚಂಡ ಸ್ಪುಟ್ನಿಕ್ಕುಗಳಾಗಿರಬೇಕು. ಬೇರಾವ ಗ್ರಹದ ಸುತ್ತಲೂ ಇಷ್ಟು ಚಿಕ್ಕ ಚಂದ್ರರು (ಫೋಬೋಸ್ ೧೦ ಮೈಲು ವ್ಯಾಸ, ದೀಮೋಸ್ ೫ ಮೈಲು ವ್ಯಾಸ), ಗ್ರಹಕ್ಕೆ ಇಷ್ಟು ಹತ್ತಿರವಾಗಿ ಹಾರುತ್ತಿಲ್ಲ. ಈ ಎರಡೂ ಚಂದ್ರರು ನೀರಿಗಿಂತಲೂ ಹಗುರವಾಗಿದ್ದುದರಿಂದ ಅವು ಟೊಳ್ಳಾಗಿರಬೇಕೆಂದೂ ಆದ್ದರಿಂದ "ಮಾನವ" ನಿರ್ಮಿತವಾಗಿರಬೇಕೆಂದೂ ಅವರು ತರ್ಕಿಸಿದ್ದಾರೆ.

ಲೋಕಾಂತರಗಳಿಂದ ನಮಗಿಂತ ಬುದ್ಧಿಶಾಲಿ ಮಾನವರು ಬರುತ್ತಿರುವುದೇ ನಿಜವಾದಲ್ಲಿ ಅವರೆಲ್ಲಿಂದ ಬರುತ್ತಿರಬಹುದು? ನಮ್ಮ ಸೂರ್ಯನ ಗ್ರಹಗಳಾವವುಗಳಿಂದಲೂ ಇರಲಿಕ್ಕಿಲ್ಲ. ಅವು ಹತ್ತಿರದ ಬೇರಾವುದೋ ನಕ್ಷತ್ರದ ಯಾವುದೋ ಗ್ರಹದಿಂದ ಬರುತ್ತಿರುವ ಸಂಭವವಿದೆ.

ಇಲ್ಲಿ ಇನ್ನೊಂದು ಸಂಗತಿ ಉಲ್ಲೇಖಾರ್ಹವಾಗಿದೆ. ವಿಜ್ಞಾನಿಗಳು ನಮ್ಮ ಭೂಮಿಯ ಸುತ್ತ ಭ್ರಮಿಸುತ್ತಿರುವ ಎರಡು ನಿಗೂಢವಾದ ಆಕಾಶ ಕಾಯುಗಳನ್ನು ಕಂಡುಹಿಡಿದಿದ್ದಾರೆ. ಅವುಗಳಲ್ಲೊಂದನ್ನು ಚಿಕಾಗೋವಿನ ಕೃತಕ ಗ್ರಹ ಪ್ರದರ್ಶನಾಲಯದ ಡೈರೆಕ್ಟರರಾದ ರಾಬರ್ಟ್ ಜಾನ್ಸನ್ ಮತ್ತು ಅವರ ಸಹಕಾರಿ ಫ್ರೆಡ್ರಿಕ್ ಹೆಮಿಂಗರು ಕಳೆದ ಅಗಸ್ಟಿನಲ್ಲಿ ಗೊತ್ತು ಹಚ್ಚಿದರು. ಅದರ ಲಕ್ಷಣಗಳ ಮೇಲಿಂದ ಅದು ದಾರಿತಪ್ಪಿದ ಉಲ್ಕೆಯಾಗಲಿ ಇತರ ನೈಸರ್ಗಿಕ ಪದಾರ್ಥವಾಗಲಿ ಅಲ್ಲವೆಂದು ವಿಜ್ಞಾನಿಗಳು ಭಾವಿಸಿದ್ದಾರೆ.

ಅದು ಭೂಮಿಯ ಮಾನವನಿರ್ಮಿತ ಉಪಗ್ರಹವೇ? ವಿಚಿತ್ರವೆಂದರೆ ಎಲ್ಲ ಮಾನವ ನಿರ್ಮಿತ (ರಶಿಯನ್ ಮತ್ತು ಅಮೇರಿಕನ್) ಉಪಗ್ರಹಗಳು ಪಶ್ಚಿಮದಿಂದ ಪೂರ್ವಕ್ಕೆ ತಿರುಗುತ್ತಿದ್ದರೆ ಇದು ಪೂರ್ವದಿಂದ ಪಶ್ಚಿಮಕ್ಕೆ ತಿರುಗುತ್ತದೆ. ಅಮೇರಿಕವಾಗಲಿ ರಶಿಯವಾಗಲಿ ಇದನ್ನು ಹಾರಿಸಿರಲಾರದು

ಇದು ಕೇವಲ ತಮಾಷೆಯಲ್ಲ. ಅಮೇರಿಕನ್ ಸರಕಾರವು ಈ ರಹಸ್ಯಮಯ "ಉಪಗ್ರಹ" ಗಳ ಮೇಲೆ ಕಣ್ಣಿಡಲು ಪ್ಲೂಟೋಗ್ರಹವನ್ನು ಕಂಡುಹಿಡಿದ ಡಾ. ಕ್ಲೈಡ್ ಟಾಂಬಾಚ್ ಮತ್ತು ಪ್ರಸಿದ್ಧ ಉಲ್ಕಾ ತಜ್ಞರಾದ ಡಾ. ಲಿಂಕನ್ ಲಾ ಪಾಜರಂಥ ಪ್ರಥಮ ವರ್ಗದ ವಿಜ್ಞಾನಿಗಳನ್ನು ನೇಮಿಸಿದೆ.

ಈ ನಿಗೂಢ ಉಪಗ್ರಹಗಳನ್ನು ಲೋಕಾಂತರದಿಂದ ಬಂದ "ಜನ"ರು ನಿರ್ಮಿಸಿದ್ದಾರೆಯೆ? ಅವುಗಳ ಮೇಲೆ ನಿಂತು ಅವರು ನಮ್ಮ ಭೂಮಿಯನ್ನು ಅವಲೋಕಿಸುತ್ತಿದ್ದಾರೆಯೆ? ಇದು ಅವರ ಅಂತರಿಕ್ಷದ ತಂಗುಮನೆಯೆ? ಇಲ್ಲಿಂದಲೇ ಅವರು ಹಾರಾಡುವ ತಟ್ಟೆಗಳನ್ನು ಕಳಿಸುತ್ತಿದ್ದಾರೆಯೆ? ಈ ಪ್ರಶ್ನೆಗಳನ್ನು ಕೆಲ ವಿಜ್ಞಾನಿಗಳು ಕೂಡ ಕೇಳಲಾರಂಭಿಸಿದ್ದಾರೆ.

ಲೋಕಾಂತರದಿಂದ ಭೂಮಿಗೆ ಎಷ್ಟೋ ಹಿಂದಿನಿಂದ "ಜನ"ರು ಬರುತ್ತಿರಬೇಕೆಂಬ ಸಂದೇಹಕ್ಕೆ ಪುಷ್ಟಿಕೊಡುವ ಒಂದು ಘಟನೆ

ಯನ್ನು ಹೇಳಬಹುದು. ೧೯೦೮ ಜೂನ್ ೩೦ ರಂದು ನಸುಕಿಗೆ ಸೈಬೀರಿಯದ ಅರಣ್ಯದಲ್ಲಿ ದಲ್ಲಿ ಒಂದು ಪ್ರಚಂಡ ಸ್ಫೋಟ ಸಂಭವಿಸಿ ೧,೦೦೦ ಚದರ ಮೈಲು ವಿಸ್ತಾರವಾದ ಪ್ರದೇಶ ನಿರ್ನಾಮ ಹೊಂದಿತು. ಈಚೆಗಿನ ವರೆಗೆ ಇದೊಂದು ಭಾರಿ ಉಲ್ಕಾಪಾತವೆಂದೇ ಭಾವಿಸ ಲಾಗಿತ್ತು. ಆದರೆ ಸೋವಿಯತ್ ತಜ್ಞರ ತಂಡವು ನಡಸಿದ ಪರಿಶೀಲನೆಯಿಂದ ಅಲ್ಲಿ ಉರು ಳಿದ ಉಲ್ಕೆಯ ಯಾವ ಲಕ್ಷಣವೂ ಸಿಗಲಿಲ್ಲ. ಬದಲಿಗೆ ಅಲ್ಲಿ ವಿಶಾಲ ಪ್ರದೇಶದಲ್ಲಿ ಪರಮಾಣು ವಿದ್ಯುತ್ ವಿಕಿರಣ ಕ್ರಿಯೆ ವಿಶೇಷವಾಗಿದ್ದುದು ಕಂಡು ಬಂತು. ಅಲ್ಲದೆ ಆ ಕಾಲದಲ್ಲಿ ಅದರ ಸಮೀಪದಲ್ಲಿದ್ದ ಜನರು ಹಿರೋಶಿಮಾದ ಪರ ಮಾಣು ಬಾಂಬು ಸ್ಫೋಟದ ನಂತರ ಅಲ್ಲಿನ ಜನರಿಗಾದ ತರಹದ ರೋಗದಿಂದಲೆ ಬಳಲಿ ದರು. "ಸೋವಿಯತ್‌ಸ್ಕಾಯಾ ರಶಿಯಾ" ಪತ್ರಿಕೆಯಲ್ಲಿ ಈ ಬಗ್ಗೆ ಬಂದ ಲೇಖದಲ್ಲಿ ಲೋ. ಕಾಂತರದಿಂದ ಬಂದ ಪರಮಾಣು ಚಾಲಿತವಾಹ ನಕ್ಕೆ ಅಪಘಾತವೊದಗಿ ಈ ಸ್ಫೋಟ ಸಂಭವಿಸಿರ ಬಹುದೆಂದು ಅಭಿಪ್ರಾಯಪಡಲಾಗಿದೆ. *

## ಉಪಕಾರದ ಉಪದ್ರವ

ಜರ್ಮನ್ನರು ತುಂಬ ಸೌಜನ್ಯವುಳ್ಳವರು. ಮಾತುಮಾತಿಗೆ "ಉಪಕಾರವಾ ಯಿತು", "ಕೃತಜ್ಞನಾಗಿದ್ದೇನೆ" ಎಂದು ಅವರು ಹೇಳದೆ ಬಿಡರು.

ಒಂದು ಸಲ ವಿದೇಶಿ ಪ್ರವಾಸಿಕನೊಬ್ಬ ಬರ್ಲಿನ್ನಿಗೆ ಬಂದ. ಅವನು ಒಂದು ಹೋಟೆಲಿನಲ್ಲಿ ಇಳಿದುಕೊಂಡ. ರಾತ್ರಿ ಕಳೆದು ಬೆಳಗಾದ ಮೇಲೆ ಹೋಟೆಲ್ ಮ್ಯಾನೇಜರ ಪ್ರವಾಸಿಯನ್ನು "ನಿದ್ದೆ ಚೆನ್ನಾಗಿ ಆಯಿತೆ?" ಎಂದು ಕೇಳಿದ. "ಎಲ್ಲಿಯ ನಿದ್ದೆ! ರಾತ್ರಿಯೆಲ್ಲ ಹಿಂಗಡೆ ಇರುವ ರೈಲ್ವೆ ಸ್ಟೇಶನ್ನಿನಲ್ಲಿ ಶಂಟಿಂಗ್ ನಡೆಯುವ ಗದ್ದಲದಲ್ಲಿ ಕಣ್ಣಿಗೆ ಕಣ್ಣೇ ಹತ್ತಲಿಲ್ಲ" ಎಂದುತ್ತರ ಬಂತು.

ಮ್ಯಾನೇಜರನಿಗೆ ಆಶ್ಚರ್ಯವಾಯಿತು. ಏಕೆಂದರೆ ಅಲ್ಲಿ ಹತ್ತಿರದಲ್ಲಿ ರೇಲ್ವೆ ಸ್ಟೇಶನ್ ಇರಲಿಲ್ಲ. ಇದೇನು ಕೌತುಕ ಎಂದು ಪರೀಕ್ಷಿಸಲು ಆತ ಮರುದಿನ ರಾತ್ರಿ ಆ ಕೋಣೆಯಲ್ಲಿ ಹೋಗಿ ಕುಳಿತ. ಬೇಗನೆ ಅವನಿಗೆ ಅರ್ಥವಾಯಿತು.

ಹೋಟೇಲಿನ ಹಿಂದೆ ಒಂದು ಹೊಸ ಕಟ್ಟಡದ ಕೆಲಸ ಹಗಲಿರುಳು ನಡೆದಿತ್ತು. ಇಟ್ಟಿಗೆ ಕಟ್ಟುವಾತನಿಗೆ ಇನ್ನೊಬ್ಬಾತ ಇಟ್ಟಿಗೆಗಳನ್ನು ಒಂದೊಂದಾಗಿ ಕೊಡುತ್ತಿದ್ದ. ಪ್ರತಿ ಇಟ್ಟಿಗೆ ಕೈಗೆ ಬಂದೊಡನೆ ಇಟ್ಟಿಗೆ ಕಟ್ಟುವಾತ ತನ್ನ ಸೌಜನ್ಯ ಪ್ರದರ್ಶನ ಕ್ಕಾಗಿ "ಥಾಂಕ್ ಶ್ಯೋಂ" ('ಥ್ಯಾಂಕ್ ಯು' ಎಂಬುದಕ್ಕೆ ಜರ್ಮನ್) ಎನ್ನು ತ್ತಿದ್ದ. "ಥಾಂಕ್ ಶ್ಯೋಂ" ಎಂದವರಿಗೆ ಪ್ರತಿಯಾಗಿ ಜರ್ಮನ್ನರು ಯಾವಾ ಗಲೂ "ಬಿಟ್ ಶ್ಯೋಂ" ಎಂದು ಉಪಕಾರ ಸ್ಮರಿಸಬೇಕು. ಇಟ್ಟಿಗೆ ಕೊಟ್ಟವ ಪ್ರತಿ "ಥಾಂಕ್ ಶ್ಯೋಂ"ಗೆ "ಬಿಟ್ ಶ್ಯೋಂ" ಎನ್ನುತ್ತಿದ್ದ. ಹೀಗೆ ಒಂದೊಂದು ಇಟ್ಟಿಗೆಗೂ ಉಪಕಾರಸ್ಮರಣೆ ನಡೆಯುತ್ತಿದ್ದುದರಿಂದ "ಥಾಂಕ್ ಶ್ಯೋಂ- ಬಿಟ್ ಶ್ಯೋಂ- ಥಾಂಕ್ ಶ್ಯೋಂ- ಬಿಟ್ ಶ್ಯೋಂ" ಎಂದು ಇಡೀ ರಾತ್ರಿ ಕೇಳಿಸುತ್ತಿದ್ದು ದನ್ನೇ ಪ್ರವಾಸಿ ಶಂಟಿಂಗ್ ಎಂದು ತಿಳಿದಿದ್ದ!

— ಸಿ. ಆರ್. ಮ್ಯಾಂಡಿ

# ಮಗು ಏಕೆ ಅಳುತ್ತದೆ?

**ಹುಟ್ಟಿದೊಡನೆ ಮಗು ಅಳುವುದರ ಮೇಲೆ ಅದರ ಜೀವನವೇ ಅವಲಂಬಿಸಿದೆ**

ಹೆರಿಗೆಯ ಕಾಲದಲ್ಲಿ ಅಸಾಧ್ಯ ವೇದನೆಯಿಂದ ಬಳಲುವ ತಾಯಿ ಮಗು ಜನಿಸಿ ಅದರ ಮೊಟ್ಟ ಮೊದಲನೆಯ ಅಳುವಿನ ಧ್ವನಿಯನ್ನು ಕೇಳಿದೊಡನೆಯೆ ತಾನು ಅದುವರೆಗೆ ಅನುಭವಿಸಿದ ಯಾತನೆಯನ್ನೆಲ್ಲ ಮರೆತು ಜನ್ಮ ಸಾಫಲ್ಯವನ್ನು ಪಡೆದವಳಂತೆ ಹರ್ಷಚಿತ್ತಳಾಗುತ್ತಾಳೆ. ಅವಳಲ್ಲಿ ಆಗ ಉಕ್ಕಿ ಹೊರಸೂಸುವ ಮಾತೃಪ್ರೇಮವೇ ಈ ಅಮಿತಾನಂದಕ್ಕೆ ಕಾರಣವಾಗುತ್ತದೆ.

ಕೂಸು ಜನಿಸಿದೊಡನೆ ಯಾಕೆ ಅಳುತ್ತದೆ? "ಜನಿಸಿದ ಕೂಡಲೆ ಮಗು ಮುಂದೆ ತಾನು ಅನುಭವಿಸಬೇಕಾಗುವ ದುಃಖಗಳ ಕಲ್ಪನೆಯಿಂದ ಅಳುತ್ತದೆ" ಎಂದೆನ್ನುವವರು ಇದ್ದಾರೆ. ತಾಯಿಯ ಗರ್ಭದಲ್ಲಿರುವಾಗ ಭ್ರೂಣ (ರಕ್ತಪಿಂಡ)ವು ಬಹು ಸುಖದಲ್ಲಿ ಕಾಲ ಕಳೆಯುವುದಾದ್ದರಿಂದ ಆ ಸ್ಥಾನಚ್ಯುತಿಯಾದೊಡನೆ ಅದು ಅಳುವುದು ಸ್ವಾಭಾವಿಕ ಎಂಬ ಕಲ್ಪನೆಯೂ ಇದೆ. ಆದರೆ ನಿಜವಾಗಿ ಮಗು ಅಳುವುದರ ಕಾರಣ ಬೇರೆಯೆ ಇದೆ. ವಿಜ್ಞಾನವು ಆ ಕಾರಣವನ್ನು ಸರಿಯಾಗಿ ವಿವರಿಸುತ್ತದೆ.

---

ಮೂಲ : ರಾಧಾಕೃಷ್ಣ ಗೋವರ್

ರೂಪಾಂತರ : ಸಿ. ಆರ್. ಹಿರೇಮಠ

---

ಭ್ರೂಣವು ಗರ್ಭಾಶಯದಲ್ಲಿ ಅದರ ತ್ವಚೆಯ ಛಿದ್ರದಿಂದ ಜೋತಾಡುತ್ತಿರುತ್ತದೆ. ಗರ್ಭಾಶಯದಲ್ಲಿ ದ್ರಾವಕ ಪದಾರ್ಥವು ತುಂಬಿಕೊಂಡಿರುವುದು. ಅದರಲ್ಲಿಯೆ ಭ್ರೂಣವು ಇರುತ್ತದೆ. ಗರ್ಭಾಶಯಕ್ಕೆ ಆಘಾತವಾದರೂ ನೀರಲ್ಲಿರುವ ಭ್ರೂಣಕ್ಕೆ ಯಾವ ಅಪಾಯವೂ ತಟ್ಟದೆ ಅದು ಸುರಕ್ಷಿತವಾಗಿರುತ್ತದೆ. ಗರ್ಭಾಶಯದ ನೀರು ಭ್ರೂಣವನ್ನು ಉಷ್ಣ-ಶೀತಗಳಿಂದಲೂ ಕಾಪಾಡುವುದು. ಸಮುದ್ರ ತೀರದಲ್ಲಿಯ ನೀರಿನಂತೆ ಗರ್ಭಾಶಯದಲ್ಲಿರುವ ನೀರು ಸಮಶೀತೋಷ್ಣ



ವಾಗಿದೆ. ಭ್ರೂಣಕ್ಕೆ ಅದು ಮೆತ್ತನ್ನ ಹಾಸಿಗೆಯೂ ಆಗಿರುತ್ತದೆ. ಸದಾ ನೀರಿನಲ್ಲಿರುವುದರಿಂದ ಮಗುವಿನ ಚರ್ಮ ಸೆಲೆತು ಹೋಗದಂತೆ ಅದಕ್ಕೆ ತಿಳುವಾದ ಹೊದಿಕೆಯೊಂದಿರುತ್ತದೆ.

ಸದಾ ನೀರಿನಲ್ಲಿರುವ ಭ್ರೂಣವು ಉಸಿರಾಡಿಸುವುದಾದರೂ ಹೇಗೆ? ನಾವು ನೀರಿನಲ್ಲಿ ಮುಳುಗಿದಾಗ ಉಸಿರಾಡಿಸಿದರೆ ನೀರು ನಮ್ಮ ಪುಪ್ಫುಸದಲ್ಲಿ ಸೇರಿಕೊಳ್ಳುವುದು. ಗರ್ಭಾಶಯದಲ್ಲಿ ಬರೇ ನೀರು ಮಾತ್ರ ಇದ್ದು, ಗಾಳಿ ಇರುವುದಿಲ್ಲ. ಅಲ್ಲಿ ಉಸಿರಾಡಿಸುವಂತೆಯೆ ಇಲ್ಲ. ಅಕಸ್ಮಾತ್ತೇನಾದರೂ ನೀರು ಪುಪ್ಫುಸವನ್ನು ಸೇರಿದರೂ ಭ್ರೂಣ ಸಾಯಬಾರದೆಂದು ನಿಸರ್ಗವು ಒಂದು ಯೋಜನೆಯನ್ನು ಮಾಡಿದೆ. ಭ್ರೂಣವು ಗರ್ಭದಲ್ಲಿರುವಾಗ ಅದರ ಪುಪ್ಫುಸವು ಮುದುಡಿಕೊಂಡಿರುತ್ತದೆ.

ಮಗುವಿನ ಶ್ವಾಸೋಚ್ಛ್ವಾಸ ನಮ್ಮಂತೆ ಪುಪ್ಫುಸದ ಮುಖಾಂತರ ನಡೆಯುವುದಿಲ್ಲ. ಜಲಚರಗಳಂತೆ ನಡೆಯುತ್ತದೆ. ಮೀನು ಮೊದಲಾದ ಜಲಚರ ಪ್ರಾಣಿಗಳು ಉಸಿರಾಡಿಸುವುದಕ್ಕಾಗಿ ಅವುಗಳ ಕುತ್ತಿಗೆಯ ಎರಡೂ ಕಡೆಗೆ ಅನೇಕ ಸೂಕ್ಷ್ಮ ರಕ್ತವಾಹಿನಿಗಳುಳ್ಳ ಎರಡು ಪದರುಗಳಿರುತ್ತವೆ. ಈ ರಕ್ತವಾಹಿನಿಗಳ ಮೂಲಕ ನೀರಿನಲ್ಲಿರುವ ಪ್ರಾಣವಾಯುವು ಮೀನಿನ ರಕ್ತವನ್ನು ಸೇರುತ್ತದೆ. ಈ ರಕ್ತವಾಹಿನಿಗಳ ತ್ವಚೆಯ ಮುಖಾಂತರ ಅಂಗಾರಾಮ್ಲ ವಾಯು ಹೊರಗೆ ಬರುತ್ತದೆ. ಮೀನಿನ ರಕ್ತವು ಹೊರಬಿಡುವ ಅಂಗಾರಾಮ್ಲ ವಾಯು ನೀರಿನಲ್ಲಿ ಬೆರೆತುಹೋಗುತ್ತದೆ.

ಗರ್ಭದಲ್ಲಿರುವಾಗ ಶಿಶುವಿನ ಶ್ವಾಸೋಚ್ಛ್ವಾಸ ಕ್ರಿಯೆ ನಡೆಯುವ ರೀತಿಯೂ ಸುಮಾರು ಇದೇ. ಗರ್ಭಾಶಯದಲ್ಲಿ ಒಂದು ವಿಶಿಷ್ಟ ಪರೆ ಇರುತ್ತದೆ. ಇದರಿಂದ ಜನನಿಯ ರಕ್ತದಲ್ಲಿ ಭ್ರೂಣದ ಸೂಕ್ಷ್ಮ ರಕ್ತವಾಹಿನಿಗಳ ಗೊಂಚಲುಗಳು ಸೇರಿಕೊಂಡಿದ್ದರೂ ತಾಯಿಯ ರಕ್ತದಲ್ಲಿ ಮಗುವಿನ ರಕ್ತವಾಗಲಿ, ಮಗುವಿನ ರಕ್ತದಲ್ಲಿ ತಾಯಿಯ ರಕ್ತವಾಗಲಿ ಸೇರಿಕೊಳ್ಳುವುದಿಲ್ಲ. ಆದರೆ ಜನನಿಯ ರಕ್ತದಿಂದ ಪ್ರಾಣವಾಯುವು ಭ್ರೂಣದ ರಕ್ತದಲ್ಲಿಯೂ ಭ್ರೂಣದ ರಕ್ತದಲ್ಲಿಯ ಅಂಗಾರಾಮ್ಲ ವಾಯುವು ತಾಯಿಯ ರಕ್ತದಲ್ಲಿಯೂ ಸೇರಿಕೊಳ್ಳಬಲ್ಲದು.

ತಾಯಿಯ ರಕ್ತದಿಂದ ಪೋಷಕ ಪದಾರ್ಥ ಭ್ರೂಣವನ್ನು ತಲುಪುತ್ತದೆ. ಭ್ರೂಣ ಹೊರಹಾಕುವ ಹೊಲಸು ತಾಯಿಯ ಶರೀರವನ್ನು ಸೇರಿ ಅಲ್ಲಿಂದ ಉಚ್ಚಾಟನೆಗೊಳ್ಳುತ್ತದೆ. ಈ ರೀತಿ ಭ್ರೂಣದ ಪುಪ್ಫುಸ ಮುದ್ದೆಯಾಗಿದ್ದರೂ ಶ್ವಾಸೋಚ್ಛ್ವಾಸ ಕ್ರಿಯೆ ನಡೆದೇ ಇರುತ್ತದೆ. ಆಗ ಈ ಕ್ರಿಯೆಗೆ ಏನೂ ಸಂಬಂಧವಿರದ ಪುಪ್ಫುಸ ಸುಮ್ಮನೆ ಬಿದ್ದುಕೊಂಡಿರುತ್ತದೆ.

ಮಗು ಜನಿಸಿದೊಡನೆ ಪರಿಸ್ಥಿತಿ ಬದಲಾಗುತ್ತದೆ. ಏಕೆಂದರೆ ಆಗ ತಾಯಿಗೂ ಭ್ರೂಣಕ್ಕೂ ಇರುವ ಸಂಬಂಧ ಕಡಿದುಹೋಗುವುದು. ಇನ್ನು ಅದು ಸ್ವತಂತ್ರವಾಗಿಯೆ ಪ್ರಾಣವಾಯುವನ್ನು ಪಡೆಯಬೇಕು. ಕೂಸು ಹೊರಗೆ ಬಂದೊಡನೆ ಅದರ ಪುಪ್ಫುಸಗಳು ವಾಯುವಿನಿಂದ ತುಂಬಿಕೊಳ್ಳುತ್ತವೆ. ಹೀಗಾಗುವುದಕ್ಕಾಗಿಯೆ ಪುಪ್ಫುಸಗಳು ಆಗ ಆಕುಂಚನಗೊಳ್ಳುತ್ತವೆ.

ತಣ್ಣನ್ನ ನೀರನ್ನು ಮೈಮೇಲೆ ಸುರಿದುಕೊಂಡರೆ ನಮ್ಮ ಪುಪ್ಫುಸವೂ ಆಕುಂಚನ ಹೊಂದುವುದು. ಆಗ ಗಾಳಿಯು ನಮ್ಮ ಬಾಯಿಯ ಮೂಲಕ ಅದರಲ್ಲಿ ಪ್ರವೇಶಿಸುವುದಕ್ಕಾಗಿ ನಮ್ಮ ಬಾಯಿಂದ ಹಾ! ಎಂಬ ಶಬ್ದ ಸಹಜವಾಗಿ ಬಂದು ಬಾಯಿ ತೆರೆಯುತ್ತದೆ. ತಾಯಿಯ ಗರ್ಭದ ಉಷ್ಣತೆಯಿಂದ ಮಗು ಹೊರ ಬಂದೊಡನೆ ಅದರ ಪುಪ್ಫುಸವೂ ಆಕುಂಚನ ಹೊಂದಿ ಹೊರಗಿನ ತಣ್ಣನ್ನ ಗಾಳಿ ಶ್ವಾಸ ನಲಿಕೆಗಳ ಮೂಲಕ ರಭಸದಿಂದ ಪುಪ್ಫುಸಗಳಲ್ಲಿ ನುಗ್ಗುವುದರಿಂದ ಒಂದು ವಿಧವಾದ ಶಬ್ದ ಹೊರಡುತ್ತದೆ. ಈ ಶಬ್ದಕ್ಕೇ

ಕೂಸಿನ ಅಳು ಎನ್ನುತ್ತಾರೆ. ಪುಪ್ಪುಸದ ಆಕುಂಚನಗೊಳ್ಳುವಿಕೆಯೆ ಈ ಶಬ್ದಕ್ಕೆ ಕಾರಣ ವಾಗಿರುತ್ತದೆ.

ಮಗು ಜನಿಸಿದಾಗ ಹೊರಡಿಸಿದ ಸ್ವರ ಮಂದವಾಗಿದ್ದರೆ ಅದರ ಪುಪ್ಪುಸವು ಪೂರ್ಣ ವಾಗಿ ಪ್ರಸರಣೆ ಹೊಂದಿಲ್ಲವೆಂದೇ ತಿಳಿಯ ಬೇಕು. ಅದೇ ಸ್ವರ ಸ್ಪಷ್ಟವಾಗಿದ್ದರೆ ಪುಪ್ಪುಸ ಪೂರ್ಣವಾಗಿ ಪ್ರಸರಣೆ ಹೊಂದಿದೆಯೆಂದರ್ಥ. ಕೂಸಿನ ಪ್ರಥಮ ರೋದನ ಬಹು ಮಹತ್ವದ್ದು. ಅದರ ಪರಿಣಾಮ ಅದರ ಜೀವಮಾನವಿಡೀ ಕಂಡುಬರುವುದಾಗಿದೆ. ಕೂಸಿನ ಅಳು ಕ್ಷೀಣ ವಾಗಿದ್ದರೆ ಅದು ರೋಗಗ್ರಸ್ತವಾದುದೆಂದು ತಿಳಿಯಬೇಕು. ಇಂಥ ಕೂಸಿನ ಮುಖದಲ್ಲಿ ಗುಲಾಬಿ ಬಣ್ಣವಿರುವುದಿಲ್ಲ. ಉಗುರುಗಳೂ ರಕ್ತವರ್ಣದವಿರದೆ ಬೆಳ್ಳಗಾಗಿದ್ದು ಕಣ್ಣುಗಳು ಕಾಂತಿಹೀನವಾಗಿರುತ್ತವೆ. ಕೂಸಿನ ಅಳು ಕ್ಷೀಣವಾಗಿದ್ದರೆ ಆಗಿಂದಾಗ ಅದರ ಬೆನ್ನು ತಟ್ಟುತ್ತಾರೆ, ಇಲ್ಲವೆ ಅದರ ಮೈಮೇಲೆ ತಣ್ಣೀರು ಸಿಂಪಡಿಸುತ್ತಾರೆ. ಆಗಲೂ ಮಗುವಿನ ಅಳು ಸುಧಾರಿಸದಿದ್ದರೆ ವೈದ್ಯರಿಗೆ ತೋರಿಸಿ ಚಿಕಿತ್ಸೆ ಮಾಡಿಸಬೇಕಾದ್ದು ಅಗತ್ಯ.

ಕೂಸಿನ ಅಳು ಸ್ಪಷ್ಟವಾಗಿದ್ದರೆ ಅದರ ಮುಖ ಉಗುರುಗಳು ಗುಲಾಬಿ ವರ್ಣಯುಕ್ತವಾಗಿ ಕಣ್ಣುಗಳು ಕಾಂತಿಯುತವಾಗಿರುತ್ತವೆ. ಮಗು ವಿನ ಪುಪ್ಪುಸ ಪೂರ್ಣವಾಗಿ ಪ್ರಸರಣ ಹೊಂದು ವುದರ ಲಕ್ಷಣವೇ ಇದು.

ಮಗುವಿನ ಪುಪ್ಪುಸವು ಪೂರ್ಣವಾಗಿ ಪ್ರಸ ರಣ ಹೊಂದದೆ ಇರುವಾಗ ತಕ್ಕ ಚಿಕಿತ್ಸೆ ಮಾಡ ದಿದ್ದರೆ ಮುಂದೆ ಜೀವಮಾನವಿಡೀ ಆ ಕೂಸು ರೋಗಗ್ರಸ್ತವಾಗಿ ಬಾಳುವುದು ಇಲ್ಲವೆ ಬೇಗನೆ ಸಾಯುವುದು.

ಕೂಸಿನ ಪ್ರಥಮ ರೋದನವು ಅದರ ಆರೋಗ್ಯ ಅನಾರೋಗ್ಯಗಳನ್ನು ಸಾರುವುದಾದ್ದ ರಿಂದ ಆ ವಿಚಾರದಲ್ಲಿ ಎಚ್ಚರಿಕೆ ವಹಿಸ ಬೇಕು. *



## ಸವಿ–ಜೇನು

ಹಣವು ಆರೋಗ್ಯ, ಶಕ್ತಿ, ಗೌರವ, ಧಾರಾಳತೆ ಮತ್ತು ಸೌಂದರ್ಯಗಳನ್ನು ಪ್ರತಿನಿಧಿಸಿದರೆ ಹಣದ ಕೊರತೆ, ಅನಾರೋಗ್ಯ, ಅಶಕ್ತತೆ, ಅವಮಾನ, ಜಿಪುಣತೆ ಮತ್ತು ಕುರೂಪಿತ್ವಗಳನ್ನು ಪ್ರತಿನಿಧಿಸುತ್ತದೆ. — ಬರ್ನಾರ್ಡ್ ಷಾ

ಜಗತ್ತಿನ ಹಿಂಸಾಮಯ ಅನಂತ ಅತ್ಯಾಚಾರದ ಅಪರಂಪಾರವಾದ ಭಾವ- ನೆಯು ಸ್ತ್ರೀಯರಿಗೆ ತಿಳಿದು ಬಂದರೆ ಜಗತ್ತಿನ ಮೇಲೆ ಶಾಂತಿಪರ್ವವು ಪ್ರಾರಂಭ ವಾಗಲು ಕ್ಷಣ ಮಾತ್ರ ವಿಲಂಬ ಹತ್ತಲಿಕ್ಕಿಲ್ಲ. — ಗಾಂಧೀಜಿ

ದಾಯಾದಿಗಳಿಗೆ ಜಗಳ ಬರುತ್ತದೆ; ಹೋಗುತ್ತದೆ ನಂಟು ಹೋಗು- ತ್ತದೆಯೆ?

— ಮಹಾಭಾರತ

ಸಂಗ್ರಹ: ರವೀಂದ್ರನಾಥ ಎಸ್. ಬಿ.

# ಗಾಳಿಪಟ

ರಾ. ಕು.

ಒಂದು ತೆಳ್ಳನ್ನ ಕಾಗದದ ಪಟದ ಬಗ್ಗೆ
ಎಂಥ ಅಪೂರ್ವ ಹೃದ್ಯ ವಿಚಾರಲಹರಿ!

ಥಳಥಳಿಸುವ ನೀಲನಭ; ಬಿಳಿಯ ಬಿಂಕದಲ್ಲಿ ಮಂದ ಮಂದವಾಗಿ ಮೆರವಣಿಗೆಯ ಮದುಮಗನಂತೆ ವಿಜೃಂಭಿಸುವ ಮೋಡ; ರೆಕ್ಕೆ ಹೊಯ್ಯದೆ ಅಂತರಿಕ್ಷದಲ್ಲಿ ನಿರಾತಂಕವಾಗಿ ಈಸು ಬಿದ್ದ ಗರುಡಪಕ್ಷಿ; ತುಟಿ ಮಿಸುಕಿ ನಡುನಡುವೆ ತಲೆದೂಗುತ್ತಿರುವ ಮರದ ತುದಿಗೊಂಚಲು; ಬಾಚಿದ ಕೂದಲಲ್ಲಿ ಬೆರಳಾಡಿಸಿ ಉಟ್ಟ ವಸ್ತ್ರವನ್ನು ಸೆಳೆದಲುಗುವ ಸಲುಗೆಯ ಗಾಳಿ— ಅಹಾಹಾ! ಹೃದಯ ಹುಚ್ಚೆದ್ದು ಕುಣಿಯುವ ಇಂತಹ ಸಮಯದಲ್ಲಿ ಹೀಗೆ ಸುಮ್ಮನೆ ನಾನು ನಿಲ್ಲಲಾರೆ. ಓಡಿ ಹೋಗಿ ಒಂದು ಪಟವನ್ನು ಕೊಂಡು ಬಾ. ಸೂತ್ರ ಬಿಚ್ಚಿ ಏರಿಸು. ದಾರ ಬಿಡು, ಬಿಡು, ಇನ್ನೂ ಬಿಡು. ತೋಟದಾಚೆ, ಮೋಡದಾಚೆ, ಹಕ್ಕಿ ಚುಕ್ಕಿಯಾಗಿ ನಿಂತ ಅಂತರಿಕ್ಷ ಮಂಟಪಕ್ಕೆ ನಿನ್ನ ಹೃದಯ ಕಾವ್ಯಚಿತ್ರವನ್ನು ಪಟದೊಡನೆ ಹಾರಬಿಡು. ಅನಂತವಾದ ಆಕಾಶದಲ್ಲಿ ನಿನ್ನ ಅಂತರಂಗವನ್ನು ಈಸಬಿಡು. ಪಟ ಹಾರಿಸಲು ಇದು ಯೋಗ್ಯವಾದ ಸಮಯ.

ಹೃದಯ ಹೀಗೆ ಹೇಳುತ್ತಿದ್ದರೂ ಇಂತಹ ಎಷ್ಟೋ ಸಮಯಗಳನ್ನು ನಾನು ಸುಮ್ಮನೆ ಕಳೆದುಕೊಂಡಿದ್ದೇನೆ. ಚಿಕ್ಕಂದಿನಲ್ಲಿ ಹೀಗಿರಲಿಲ್ಲ. ಆಗ ಪಟ ಹಾರಿಸುವುದು ಒಂದು ಜನ್ಮಸಿದ್ಧ ಹಕ್ಕು, ಹುಡುಗನಾದವನ ಹೆಮ್ಮೆ. ನಾನು ಅತ್ಯಂತ ಆಸಕ್ತಿಯಿಂದ ಕೈಕೊಂಡು ದಕ್ಷತೆಯಿಂದ ನೆರವೇರಿಸಿದ ಕಾರ್ಯವೇನಾದರೂ ಇದ್ದರೆ ಅದು ಇದೊಂದೆ. ಏಕೆಂದರೆ

ಧಾರವಾಡದ ಮನೋಹರ ಗ್ರಂಥಮಾಲೆಯುವರು ಪ್ರಕಟಿಸಿದ ರಾ. ಕು. ಅವರ
"ಗಾಳಿಪಟ" ಎಂಬ ಹರಟೆ ಸಂಗ್ರಹದಿಂದ

ಸೋಲು ಜಗಳಗಳ ಜಂಜಾಟವಿಲ್ಲದೆ ಕೇವಲ ಜಯ ತೃಪ್ತಿಗಳನ್ನು ತಂದುಕೊಡತಕ್ಕ ಗುಣ ಇದರಲ್ಲಿ ಹೇರಳವಾಗಿತ್ತು. ಈ ಆಟದ ಗೆಳೆತನವನ್ನೂ ಕೌಶಲ್ಯವನ್ನೂ ಕಾಲೇಜಿನ ಕಟ್ಟೆ ಹತ್ತುವ ವರೆಗೆ ನಾನು ಕಾಪಾಡಿಕೊಂಡು ಬಂದೆ. ಕಾಲೇಜು ಮುಗಿಸಿ ಹೊರಬೀಳುವ ಹೊತ್ತಿಗೆ ಬಾಲ್ಯ ನನ್ನನ್ನು ಬಿಟ್ಟುಹೋಗಿತ್ತು. ಆಟ ಕೈವಾಡಿ ಕರೆಯುತ್ತಿದ್ದರೂ ಆಡುವ ಹುಡುಗನಾಗಿ ನಾನು ಉಳಿದಿದ್ದಿಲ್ಲ. ನನ್ನ ಡಿಗ್ರಿಯೂ ನೌಕರಿಯೂ ನನ್ನನ್ನು ಅಡ್ಡಗಟ್ಟಿ ನಿಂತು ಬಾಲ್ಯದ ಸವಿಯನ್ನು ಬಲುದೂರ ಕಳಿಸಿಬಿಟ್ಟವು. ನನ್ನ ಮನಸ್ಸು ಮತ್ತೆ ಮತ್ತೆ ನನ್ನ ಚಿಕ್ಕಂದಿನ ಆಟವನ್ನು ನೆನೆದು ಕೊರಗುತ್ತಿತ್ತು. ಆದರೆ ಪಟ ಹಾರಿಸುವ ಧೈರ್ಯ ನನಗಾಗಲಿಲ್ಲ. ಮೀಸೆ ಬಂದು ಹೋದಮೇಲೆ ನಾನೇಕೆ ಪಟ ಹಾರಿಸಬಾರದು?

ಈ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ. ಏಕೆಂದರೆ ನಾನು ಯಾರನ್ನೂ ಕೇಳಲಿಲ್ಲ. ಮುದುಡಿಕೊಂಡು ಮರೆಯಲ್ಲಿಯೆ ಕೊರಗುವ ಹೊಸ ಪ್ರವೃತ್ತಿಯೊಂದು ನನ್ನನ್ನು ಆವರಿಸತೊಡಗಿತ್ತು. ರಾತ್ರಿಯೆಲ್ಲ ಸ್ವಪ್ನಲೋಕದ ಸೀಮೆಯಲ್ಲಿ ಅನಿರುದ್ಧ ಮುಗ್ಧ ಬಾಲಕನಾಗಿ ಕೇಕೆ ಹೊಡೆದು ಕುಣಿದಾಡಿದರೆ ಬೆಳಕು ಹರಿಯುತ್ತಲೆ ಗಂಭೀರ ಪದವೀಧರನಾಗಿ ನೌಕರಿಯ ಸೀಮೆಯಲ್ಲಿ ಬಿಮ್ಮನೆ ಬಿಗಿದುಕೊಳ್ಳುತ್ತಿದ್ದೆ. ಬರಬರುತ್ತ ಈ ಕನಸಿಗೆ ರಾತ್ರಿ ಸಾಲದಾಯಿತು. ಆಕಾಶವನ್ನು ಕಂಡ ಕ್ಷಣಕ್ಕೊಮ್ಮೆ ತುಂಬಿದ ತೆನೆಯಂತೆ ಹೆಡೆಯಾಡುವ ಸುಕುಮಾರ ಪಟವೊಂದು ನನ್ನ ಕಣ್ಣೆದುರು ಕುಣಿದು "ಹೋಗೋಣ ಬಾ ಇನ್ನು ಸೀಮೆಯನು ದಾಟಿ" ಎಂದು ಸೆರಗು ಹಿಡಿದು ಸೆಳೆಯುತ್ತಿತ್ತು. ಆದರೆ ನಾನು ಸೀಮೆ ದಾಟಲಿಲ್ಲ. ಸುತ್ತಿದ ದಾರ ಬಿಚ್ಚಿ ಬಿಡಲಿಲ್ಲ. ನಾನೇಕೆ ಎದ್ದು ಹೊರಡಲಿಲ್ಲವೊ ಕಾಣೆ. ಒಂದು ವೇಳೆ ಪಟ ಹಾರಿಸಲು ನಾನು ಹೊರಟಿದ್ದರೆ ನೆರೆಹೊರೆಯ ಮಕ್ಕಳು ನನ್ನನ್ನು ನೋಡುವುದಕ್ಕೆ ಬರಬಹುದಾಗಿತ್ತು. ಉತಾವಳಿಯ ಒಬ್ಬಿಬ್ಬರು ನನಗೆ ಉತ್ಸಾಹವನ್ನೂ ಉಪದೇಶವನ್ನೂ ಕೊಡಬಹುದಾಗಿತ್ತು. ಕಿರಿಯರು ನನ್ನೊಡನೆ ಸ್ಪರ್ಧೆಗೆ ನಿಂತು ನನಗಿಂತ ನಾಲ್ಕು ಮಡಿ ಮುಂದೆ ಹೋಗಿ ನನ್ನ ಕರ್ತೃತ್ವ ಶಕ್ತಿಯನ್ನೂ ಕದನ-ಕುತೂಹಲವನ್ನೂ ಕೆರಳಿಸಬಹುದಾಗಿತ್ತು. ಎಲ್ಲಕ್ಕೂ ಹೆಚ್ಚಾಗಿ ಒಳಗೊಳಗೆ ಕೊರಗುವ ನನ್ನದೇ ದುರವಸ್ಥೆ ತಪ್ಪಿ ಹೋಗಿ, ನಾನು ತುಸು ದಪ್ಪನಾಗಬಹುದಿತ್ತು. ನಾನು ಇಷ್ಟು ಸೊರಗಿ ಹೋಗಿರುವುದಕ್ಕೆ ಇರುವ ಅನೇಕ ಕಾರಣಗಳಲ್ಲಿ ಪಟ ಹಾರಿಸದೆ ಉಳಿದುದು ಬಹು ಮುಖ್ಯವೆಂಬುದನ್ನು ಈಗ ನಾನು ತಿಳಿದುಕೊಂಡಿದ್ದೇನೆ. ಒಳ್ಳೆಯ ಬಯಕೆಯನ್ನು ಹತ್ತಿಕ್ಕಿ ಹಿಡಿಯುವುದಕ್ಕಿಂತ ಘೋರವಾದ ಅಪಾಯ ಇನ್ನೊಂದಿಲ್ಲವೆಂಬುದಕ್ಕೆ ನಾನು ಸಾಕ್ಷಿ, ನನ್ನ ಪಟ ಸಾಕ್ಷಿ.

ದೀರ್ಘ ಕಾಲಾವಧಿಯ ನಂತರ ಆ ಅನ್ಯಾಯವನ್ನು ಸಂಪೂರ್ಣ ನಿರ್ಮೂಲನ ಮಾಡಿ, ನನ್ನ ಅಂತರಂಗದ ಆರೋಗ್ಯವನ್ನು ಮರಳಿ ಸಂಪಾದಿಸಿದ್ದೇನೆ. ಯಾವ ಸಂಕೋಚವೂ ಇಲ್ಲದೆ ಪಟ ಹಾರಿಸುವ ಸಂದರ್ಭ ನನಗೀಗ ದೊರೆತಿದೆ. ನನ್ನ ಮುದ್ದು ಮಗ ತನ್ನ ಪಟ ಏರಿಸುವುದಕ್ಕಾಗಿ ಇಳಿಬಿಸಿಲಲ್ಲಿ ಹೊರಬೀಳುತ್ತಾನೆ. ಅವನಿಗೆ ಸಲಹೆ-ಸಹಾಯಗಳನ್ನು ನೀಡಲು ಅವನೊಡನೆ ಹೋಗುವುದು ತಂದೆಯಾದವನ ಕರ್ತವ್ಯ. ನಿಜ ಹೇಳುವುದಾದರೆ ಈ ಕರ್ತವ್ಯಬುದ್ಧಿ ಬರಿ ನೆವ. ನಾನು ಹೋಗುತ್ತಿರುವುದು ನನ್ನ ಪಟ ಹಾರಿಸುವ ಪ್ರೀತಿಗಾಗಿ. ನಾವೇನು ಮಾಡೋಣ ? ಮಕ್ಕಳು ನಮಗೆ ಮತ್ತೊಂದು ಬಾಲ್ಯವನ್ನು ತಂದುಕೊಡುತ್ತವೆ. ಅವರ ಒಡನಾಟದ ಎರಕದಲ್ಲಿ ನಮ್ಮ ಹಿರಿತನದ ಹೆಮ್ಮೆ ಹೇಗೊ ಕರಗಿ ಹೋಗುತ್ತದೆ. ನಾವು ಅವರಿಗಿಂತಲೂ ಚಿಕ್ಕವರಾಗುತ್ತೇವೆ. ನನ್ನ ಚಿರಂಜೀವನು ನನಗೆ ಆಗಾಗ ಕೈಗಡವಾಗಿ ಕೊಡುತ್ತಿರುವ ಈ ತಾತ್ಕಾಲಿಕ

ಬಾಲ್ಯದಲ್ಲಿ ನಾನು ಅವನೊಡನೆ ಎಳೆಯು ಆಟವಾಡಬಲ್ಲೆ. ಇಬ್ಬರೂ ನಿಂತು, ಆಕಾಶವನ್ನು ದಾರಕಟ್ಟಿ ಎಳೆಯುತ್ತೇವೆ; ಅಂತರಿಕ್ಷವನ್ನು ಮುಷ್ಟಿಯಲ್ಲಿ ಹಿಡಿದು ಅದರ ಹೃದಯ-ರಹಸ್ಯವನ್ನು ಅಳೆಯುತ್ತೇವೆ.

ಪಟ ಹಾರಿಸುವ ಸಮಯದಲ್ಲಿಯೆ ರೈಟ್ ಬಂಧುಗಳೊ (ಅಥವಾ ಇನ್ನಿಬ್ಬರು ಯಾರೊ) ವಿದ್ಯುತ್ತಿನ ಶೋಧ ಮಾಡಿದರೆಂದು ಕೇಳಿದ್ದೇನೆ. ನಾನಾಗಲಿ, ನನ್ನ ಮಗನಾಗಲಿ ಹಾಗೆ ಹಾದಿ ಬಿಟ್ಟು ಹೋಗುವವರಲ್ಲ. ಇನ್ನೊಂದೇನನ್ನೊ ತಲೆಯಲ್ಲಿ ಹಾಕಿಕೊಂಡು, ಇರತಕ್ಕ ಆನಂದವನ್ನು ಹಾಳು ಮಾಡಿಕೊಳ್ಳುವುದು ಏನು ಜಾಣತನ? ಆಟದ ಶೀಲವೆ ಅಲ್ಲವದು. ಒಂದು ಹೊತ್ತಿಗೆ ಒಂದೆ ಕೆಲಸ ಮಾಡಿದರೆ ತಲೆ ಸಮನಾಗಿ ಉಳಿದೀತು. ಕೈಗಡಿಯಾರವನ್ನು ಕುದಿಯಲಿಕ್ಕೆ ಇಟ್ಟು ಆಲೂಗಡ್ಡೆಯನ್ನು ನಿರೀಕ್ಷಿಸಿದವನು ನ್ಯೂಟನ್ನನೊ ಎಡಿಸನ್ನನೊ ನನಗೆ ನೆನಪಿಲ್ಲ. ಯಾರಾದರೇನು, ಶೋಧ ಮಾಡುವವರ ಗತಿಯೆ ಹೀಗೆ. ದಾರದ ಉಂಡೆಯನ್ನು ಮೇಲಕ್ಕೆ ಎಸೆದು, ಪಟವನ್ನು ಹಿಡಿದುಕೊಂಡು ನಾನು ಓಡತೊಡಗಿದರೆ, ನನ್ನ ಮಗನೊಬ್ಬನೆ ಅಲ್ಲದೆ ಬೇರೆ ಜನರೂ ಬೆರಗಾಗಿ ನನ್ನನ್ನು ಬೆನ್ನಟ್ಟಿ ಹಿಡಿದಾರು. ಅಹೋ ಸಂವಿಧಾನಕಂ! ಒಲ್ಲೆ ಸ್ವಾಮಿ. ಈ ನಾಟಕದ ನಾಯಕನಾಗುವುದು ನನಗೆಷ್ಟೂ ಇಷ್ಟವಿಲ್ಲ. ನನ್ನ ತಲ್ಲೀನತೆಯನ್ನು ತಪ್ಪಿಸುವ ಯಾವ ವಿಚಾರಕ್ಕೂ ನಾನು ಆಸ್ಪದ ಕೊಡಲಾರೆ. ಹುಟ್ಟಿದ ಮನೆಯನ್ನೆ ಹಾಳು ಮಾಡುವ ಕೃತಘ್ನತೆ ಶೋಧಗಳ ಸ್ವಭಾವ. ವಿದ್ಯುತ್ತಿನ ವ್ಯಾಮೋಹ ಹಿಡಿದ ಆ ದುರ್ದೈವಿ ರೈಟ್ ಬಂಧುಗಳಿಗೆ ಆ ಮೇಲೆ ಪಟ ಹಾರಿಸುವುದು ಒಂದು ವಿನೋದವಾಗಿ ಉಳಿದಿರಲಾರದು. ಆಟ ಕೇವಲ ಆನಂದವಾಗಿರಬೇಕು. ಇನ್ನೊಂದಕ್ಕೆ ಅದು ಸಾಧನವಾದರೆ ಆನಂದವಾಗಿ ಉಳಿಯದು ವಿಜ್ಞಾನ ಲೋಕದಲ್ಲಿ ಕೋಲಾಹಲವನ್ನು ಉಂಟುಮಾಡುವ ದುರ್ಬುದ್ಧಿ ನಮ್ಮಿಬ್ಬರಿಗೂ ಇಲ್ಲ. ಸುಮ್ಮನೆ ಪಟ ಹಾರಿಸಿ ಸಂತೋಷಪಡಬಾರದೆ? ಶೋಧವೆ ಒಂದು ಆಟವಾದವರು ಕೆಲವರಿರಬಹುದು. ಪಟದ ವಿಷಯದಲ್ಲಿ ಶೋಧ ಮಾಡುವ ಕುರಿಕುರಿಯಿದ್ದರೆ ಅವರಿಗೆ ಈ ಕೆಲವು ಸಮಸ್ಯೆಗಳನ್ನು ನಾನು ಸೂಚಿಸಬಯಸುತ್ತೇನೆ: ಗಾಳಿಯನ್ನು ಹೇಗೆ ಕೈವಶ ಮಾಡಿಕೊಳ್ಳಬಹುದು? ಕಳೆದು ಹೋದ ಪಟವನ್ನು ಹೇಗೆ ಪಡೆಯಬಹುದು? ದಾರ ಡೊಳ್ಳು ಹೊಡೆಯುವುದನ್ನು ಹೇಗೆ ತಪ್ಪಿಸಬೇಕು? ಬೇರೆ ಬೇರೆ ದೇಶಗಳ ಪಟಗಳನ್ನೆಲ್ಲ ಪರೀಕ್ಷಿಸಿ ಆ ವಿಷಯವಾಗಿ ಒಂದು ಸಂಶೋಧನಾತ್ಮಕ ಗ್ರಂಥವನ್ನು ನಮ್ಮಲ್ಲೊಬ್ಬರು ಬರೆಯಬಾರದೆ! ವಿಶ್ವವಿದ್ಯಾಲಯ ಅವರಿಗೊಂದು ಪೀಎಚ್ ಡಿ ಕೊಟ್ಟೀತು.

ಹೊಸ ಬಗೆಯ ಆಟಗಳೂ ನೂತನ ವಿನೋದಗಳೂ ಮಕ್ಕಳ ಮನಸ್ಸನ್ನು ಗೆದ್ದಿವೆ. ಆದರೆ ಪಟ ಹಾರಿಸುವ ಮೂಲ ಪ್ರವೃತ್ತಿ ಮಾತ್ರ ಮನುಷ್ಯನ ಮನಸ್ಸನ್ನು ಬಿಡಲಾರದು. ನೆಲಕ್ಕೆ ಯಾವಾಗಲೂ ನಭದ ಸ್ವಪ್ನ. ನಮಗೆ ಎಂದೆಂದಿಗೂ ಅನಂತದ ಕನಸು. ಆಕಾಶ ಅದರ ಸಂಕೇತವಾಗಿ ನಮ್ಮನ್ನು ಅಹೋರಾತ್ರ ಎಳೆಯುತ್ತದೆ. ಹಾರುವ ಹಕ್ಕಿ, ತೇಲುವ ಮೋಡ, ಕತ್ತಲೆಯನ್ನು ಕಟ್ಟಿ ಹಿಡಿದ ಲಕ್ಷೋಪಲಕ್ಷ ನಕ್ಷತ್ರ—ಇವು ನಮ್ಮ ಕಣ್ಣಿಗೆ ಅಂದವಾಗಿ ಕಾಣುವುದೇಕೆ? ನಮ್ಮ ಸ್ವರ್ಗಗಳನ್ನೆಲ್ಲ ಆಕಾಶದ ಆಚೆಗೆ ನಿರ್ಮಿಸಿ, ಗಂಧರ್ವ ಯಕ್ಷರನ್ನೂ ಅಚ್ಯುತ ಸೌಂದರ್ಯದ ಅನಿಮಿಷರನ್ನೂ ಎತ್ತರ - ಎತ್ತರವಾದ ಲೋಕಗಳಲ್ಲಿ ನಾವು ನಿಲ್ಲಿಸಿರುವುದು ಏಕೆ? ಮುಪ್ಪು-ಸಾವುಗಳನ್ನು ತಪ್ಪಿಸಬಲ್ಲ ಅಗಮ್ಯ ಶಕ್ತಿಗೂ ಈ ಎಲ್ಲದರ ಆಚೆ-ಅತೀತದ ಅಂತರಾಳದಲ್ಲಿ ಅನಂತಶಯನನಾಗಿರಲು ನಾವು ಎಡೆ ಮಾಡಿಕೊಟ್ಟಿವಲ್ಲ- ಏಕೆ? ಆಕಾಶದ ಅರ್ಥ ಅಷ್ಟು ಆಳವಾಗಿ ನಿಂತಿದೆ. ನವ್ಯ, ಭವ್ಯ, ರುದ್ರ, ರಮಣೀಯ, ಅನಂತ, ಅಗಾಧ—ಈ ಎಲ್ಲಕ್ಕೂ

ಒಂದು ಪ್ರತ್ಯಕ್ಷರೂಪಕವಾಗಿ, ಜೀವಂತ ನಿದರ್ಶನವಾಗಿ ಅದು ನಮ್ಮನ್ನು ಆವರಿಸಿದೆ. ಆಕಾಶದ ಆಕರ್ಷಣೆ ನಮ್ಮನ್ನು ಇಲ್ಲಿ ಹೀಗೆಯೆ ಉಳಿಯಗೊಡದು. ಮನವನ್ನು ಸೆಳೆದು ಸಾಲದಾಗಿ ಈಗ ಅದು ನಮ್ಮ ಮೈಯನ್ನು ಎಳೆಯುತ್ತಲಿದೆ. ಒಂದಲ್ಲ ಒಂದು ದಿನ ಈ ಭೂಮಿಯ ಬಂಧನವನ್ನು ಬಿಡಿಸಿಕೊಂಡು, ಜೀವಂತವಾಗಿ ಅನಂತಕ್ಕೆ ಏರುವ ಕನಸು ಮನುಷ್ಯನನ್ನು ಮುತ್ತಿ ಹಿಡಿದಿದೆ. ಅಭಿವ್ಯಕ್ತಿಯನ್ನು ಅರಿಯದ ಕೂಸು ತನ್ನ ಬಯಕೆಯನ್ನು ಬಿಂಬಿಸಿದಂತೆ, ನಮ್ಮ ಯುಗ-ಯುಗಾಂತರದ ಅಭೀಪ್ಸೆಯನ್ನು ಪಟ ಹಾರಿಸಿ ಪ್ರಕಟಿಸುತ್ತಿದ್ದೇವೆ.

ಭೂಮಿಯಿಂದ ವ್ಯೋಮದ ನೆಲೆಗೆ ನಿಲುಕುವ ಪ್ರಯತ್ನ ವಿಜ್ಞಾನಿಗಳನ್ನು ಹಿಡಿದು ವಿಮಾನಗಳನ್ನು ನಿರ್ಮಿಸಿತು. ಆದರೆ ನಮಗೆ ತೃಪ್ತಿಯಿಲ್ಲ. ಅಂಗಳದಲ್ಲಿ ಆಡಿದಂತೆ ವಿಯತ್ತಳದಲ್ಲಿ ವಿಹಾರ ಮಾಡುವ ಆಕಾಶಯಾನಗಳು ನಮ್ಮ ಸ್ವಪ್ನದ ಒಂದು ಪಾರ್ಶ್ವವನ್ನೂ ಪೂರ್ಣಗೊಳಿಸಿಲ್ಲ. ಆಚೆ, ಆಚೆ, ಇನ್ನೂ ಆಚೆ—ಭೂಮಿಯ ಆವರಣ—ಪ್ರಾವರಣ— ಪರ್ಯಾವರಣಗಳನ್ನು ದಾಟಿ ನಿಷ್ಪ್ರಭ ನಿರಾಲಂಬವಾದ ಕಾಸ್ಮಿಕ್ ಕಿರಣದ ಸೀಮೆಯಲ್ಲಿ ಸುತ್ತಬಲ್ಲ ಕೃತ್ರಿಮ ಚಂದ್ರರನ್ನು ನಾವು ತೂರಿ ಬಿಡುತ್ತಿದ್ದೇವೆ. ಪಟದ ಕನಸಿಗೊಂದು ಪ್ರಕಟ ರೂಪ ಬರುತ್ತಲಿದೆ. ಹಿಂದೊಮ್ಮೆ ನಾನು ಪಟದ ಮೇಲೆ ಸವಾರಿ ಮಾಡುವ ಕನಸು ಕಂಡಂತೆ ಇಂದಿನ ವಿಜ್ಞಾನಿಗಳು ಉಪಗ್ರಹಗಳನ್ನು ಏರಿ ನಿಲ್ಲುವ ಹವಣಿಕೆಯಲ್ಲಿದ್ದಾರೆ ಇಂದೊ ನಾಳೆಯೊ ಚಂದ್ರಲೋಕ ನಮ್ಮ ಅಂಗಳವಾದೀತು. ಮುಗಿಲಿಗೆ ನಿಚ್ಚಣಿಕೆ ಇಟ್ಟ ಮನುಷ್ಯನಿಗೆ ಚಂದ್ರ-ಸೂರ್ಯ ಸಾಲವು. ಅಲ್ಲಿ ಹೋಗಿ ನಿಂತ ಮೇಲೆ ಅದರ ಆಚೆಗೆ ಅವನ ಪಟ ಹಾರಬೇಕು. ಒಮ್ಮೆ ಹಾಗೆ ಗ್ರಹಾಂತರಕ್ಕೆ ಹೋಗಿ ಬಂದವನು ಈ ಲೋಕದಲ್ಲಿ ಇನ್ನೊಬ್ಬ ರಿಪ್ ವ್ಯಾನ್ ವಿಂಕಲ್ ಆದಾನೆ? ಅಥವಾ ಯಾರು ಬಲ್ಲರು.—ಅಂತರ್ಗ್ರಹ ಸಂಚಾರಕ್ಕೆ ಪೃಥ್ವಿ ಒಂದು ಸಣ್ಣ ನಿಲ್ದಾಣವಾದೀತು. ಹೀಗಾದ ಪಕ್ಷದಲ್ಲಿ ನಮ್ಮ ಜನಸಂಖ್ಯೆ ಒಂದು ಸಮಸ್ಯೆಯಾಗಿ ಉಳಿಯಲಾರದು. ಹೆರುವ ತಾಯಂದಿರೇ, ಹೆದರಬೇಡಿರಿ. ಸಂತತಿಯನ್ನು ಸಂಯಮಿಸಬೇಕಾಗಿಲ್ಲ. ಅನ್ನಕ್ಕೆ ಅಂಜಿಕೆಯಿಲ್ಲ. ಮಂಗಳಲೋಕದಲ್ಲಿ ಮುಂಗಾರಿ ಜೋಳವನ್ನೂ ಬೃಹಸ್ಪತಿಯಲ್ಲಿ ಬತ್ತವನ್ನೂ ಬಿತ್ತಿ ಬೇಕಾದಷ್ಟು ಬೆಳೆದುಕೊಳ್ಳೋಣ.

ಮುಂದಿನ ಗತಿ ಏನೊ ಅಗಮ್ಯ. ಆದರೆ ಆಕರ್ಷಣೆ ದುರ್ದಮ್ಯವಾಗಿ ನಾವು ಅಭೂತಪೂರ್ವ ವೇಗದಿಂದ ಆಕಾಶದತ್ತ ಏಳುತ್ತಲಿದ್ದೇವೆ. ಮನುಷ್ಯನ ಹೃದಯಾಂತರಾಳದಲ್ಲಿ ಗುಪ್ತಸುಪ್ತವಾಗಿದ್ದ ಆದಿಮ ಕಾಲದ ಆಕಾಂಕ್ಷೆ ಇದೀಗ ಮೈಮುರಿದು ಏಳತೊಡಗಿದೆ. ನಾಡಾಡಿ ಪಟ ನಮಗಿನ್ನು ಸಾಲವು. ಚಂದ್ರೋಪಚಂದ್ರರನ್ನು ಅಂಗೈಯಲ್ಲಿತ್ತಿಕೊಳ್ಳುವುದಾದರೆ ನಕ್ಷತ್ರಗಳೇಕೆ ನಮಗೆ ಗಾಳಿಪಟಗಳಾಗಬಾರದು? ವಿಜ್ಞಾನ ಅಂತಹ ಸೂತ್ರಗಳನ್ನು ಒದಗಿಸಿಕೊಡಲು ಅಣಿಯಾಗಿದೆ.

ಈ ಸ್ವಪ್ನ ಸತ್ಯವಾಗಿ ಎಂದು ಬಂದೀತೋ ಹೇಳಲಾಗದು. ಅದು ಬಂದಾಗ ಬಹುಶಃ ನಾವು ಈಗಿನ ಸುಖಗಳನ್ನು ಉಳಿಸಿಕೊಳ್ಳಲಾರೆವು. ಇದಕ್ಕಿಂತ ಬೇರೆಯಾದ— ಯಾರಿಗೆ ಗೊತ್ತು?— ಇದಕ್ಕಿಂತ ರಮ್ಯವಾದ ವಿನೋದ ಸಾಮಗ್ರಿ, ನಮ್ಮ ಚಿತ್ತವನ್ನು ಗೆದ್ದುಕೊಂಡೀತು. ಪಟ ಹಾರಿಸುವುದು ಆಗ ಕೂಡ ಒಂದು ವಿಶಿಷ್ಟ ವಿನೋದವಾಗಿ ಉಳಿದೀತೆ? ನನಗೆ ಸಂಶಯ. ಅದೇನೆ ಆಗಲಿ, ನಾಳಿನ ಚಿಂತೆಗೆ ಇಂದಿನ ಆನಂದವನ್ನು ಒತ್ತೆ ಹಾಕಲು ನಾನು ಸಿದ್ಧನಿಲ್ಲ. ತಳತಳಿಸುವ ಈ ಆಕಾಶ, ಸಮುಲ್ಲಾಸದ ಈ ಪಾಳಿ, ಸುತ್ತಿ ಸುತ್ತಿ ನನ್ನ ಚಿತ್ತವನ್ನು ಎಳೆಯುತ್ತಿರುವ ಈ ನಿರಾಳದ ಪಕ್ಷಿ ನನ್ನನ್ನಿಲ್ಲಿ ನಿಲ್ಲಗೊಡಲಾರವು.

ಓಡಿಹೋಗಿ ನನ್ನ ಪ್ರಿಯವಾದ ಪಟವನ್ನು ಮುಗಿಲಿಗೆ ಈಸಬಿಡುತ್ತೇನೆ. ಅದು ಏರಿ ಏರಿದಂತೆ ನಾನು ನೆಲವನ್ನು ಮರೆತು ಆಕಾಶದ ಆ ಅರಸು-ಹಕ್ಕಿಯಂತೆ ತನ್ಮಯನಾಗಿ, ತರಂಗವಾಗಿ ಅಂತರಿಕ್ಷದ ಎದೆಯನ್ನು ಅಪ್ಪಿಕೊಂಡು ಅನಿರ್ವಚನೀಯವಾದ ಅನುಭವದಲ್ಲಿ ಕರಗಿ, ಬೆರೆತು ಹೋಗುತ್ತೇನೆ. ಅಕೋ! ಅಲ್ಲಿ ವಿಜ್ಞಾನವನ್ನೂ ವೇದಾಂತವನ್ನೂ ವಿವಾದದಲ್ಲಿ ಮಡಚಿ ಇಟ್ಟಿದ್ದೇನೆ. ಬೇಕಾದವರು ಬಂದು ಒಯ್ಯಬಹುದು. ನನ್ನ ಪಟದೊಂದಿಗೆ ನಾನೊಬ್ಬ ಸಾಕು. *



## ನ್ಯಾಯ ನಿಷ್ಠುರರು

ದಿಲ್ಲಿಯ ಬಾದಶಹ ಗಿಯಾಸುದ್ದೀನನು ಗುರಿ ಹೊಡೆಯಲು ಪ್ರಯತ್ನ ಮಾಡುತ್ತಿರುವಾಗ ತನ್ನ ತಾಯಿಯ ಕೈ ಹಿಡಿದುಕೊಂಡು ರಸ್ತೆಯ ಮೇಲೆ ಹೋಗುತ್ತಿರುವ ಒಬ್ಬ ಬಾಲಕನಿಗೆ ಒಂದು ಬಾಣ ನಟ್ಟುಕೂಡಲೆ ಮೃತಪಟ್ಟನು. ಆ ಬಾಲಕನ ತಾಯಿಯು ನ್ಯಾಯಾಧೀಶನಾದ ಸಿರಾಜುದ್ದೀನನ ಕಡೆಗೆ ಅಳುತ್ತ ಹೋಗಿ ಫಿರ್ಯಾದಿ ಕೊಟ್ಟಳು. ಸಿರಾಜುದ್ದೀನನು ಅವಳನ್ನು ಮರುದಿನ ನ್ಯಾಯಾಲಯಕ್ಕೆ ಬರಲು ಹೇಳಿ, ಅದರಂತೆ ಬಾದಶಹನಿಗೂ ಕೋರ್ಟಿನಲ್ಲಿ ಹಾಜರ ಇರಲು ಆಜ್ಞೆ ಹೊರಡಿಸಿದನು. ಮರುದಿನ ಬಾದಶಹ ಗಿಯಾಸುದ್ದೀನನು ಸಾದಾ ವೇಷದಲ್ಲಿ ನ್ಯಾಯಾಲಯದಲ್ಲಿ ಹಾಜರ ಆದನು ಮತ್ತು ತನ್ನ ಅಪರಾಧವನ್ನು ಒಪ್ಪಿ ಆ ಬಾಲಕನ ತಾಯಿಯ ಕ್ಷಮೆ ಕೋರಿ ಅವಳಿಗೆ ದಂಡವೆಂದು ಅವಳು ಬೇಡಿದಷ್ಟು ಹಣ ಕೊಟ್ಟನು.

ನ್ಯಾಯಾಲಯದ ಕೆಲಸ ಕಾರ್ಯಗಳು ಮುಗಿದ ಮೇಲೆ ನ್ಯಾಯಾಧೀಶ ಸಿರಾಜುದ್ದೀನನು ಬಾದಶಹನಿಗೆ ನಮಸ್ಕರಿಸಿದನು. ಬಾದಶಹನು ಸಿರಾಜುದ್ದೀನನ್ನು ಕುರಿತು "ಕಾಜಿ ಸಾಹೇಬರೇ, ನೀವು ನ್ಯಾಯದಾನದ ಪಾವಿತ್ರ್ಯವನ್ನು ಕಾಯ್ದಿರಿ. ಬಹಳೇ ಒಳ್ಳೇದಾಯಿತು." ಎಂದು ಅಂಗವಸ್ತ್ರದಲ್ಲಿಟ್ಟಿದ್ದ ಸಣ್ಣ ಚೂರಿ ತೆಗೆದು ತೋರಿಸಿ, "ಬಾದಶಹನೆಂದು ನೀವು ನ್ಯಾಯವನ್ನು ಬದಗಿರಿಸಿ ನನ್ನನ್ನು ಕ್ಷಮಿಸಿದ್ದರೆ, ಈ ಚೂರಿಯಿಂದ ನಿಮ್ಮ ಶಿರಶ್ಛೇದವನ್ನು ಮಾಡುತ್ತಿದ್ದೆ" ಎಂದು ಅಂದನು.

ಅದಕ್ಕೆ ಸಿರಾಜುದ್ದೀನನು ನಕ್ಕು ಬಳಿಯಲ್ಲಿಯೇ ಇದ್ದ ಬೆತ್ತವನ್ನು ತೋರಿಸಿ, "ನೀವು ಒಳ್ಳೇ ಮಾತಿನಿಂದ ನಿಮ್ಮ ಅಪರಾಧವನ್ನು ಒಪ್ಪದೇ ಇದ್ದಲ್ಲಿ ಇದರಿಂದ ನಿಮ್ಮ ಚರ್ಮ ಸುಲಿಯುವವನಿದ್ದೆ" ಎಂದನು.

—ಸಂಜೀವ ಅಕ್ಷೈೀಶ್ವರ



# ಮೂವತ್ತೆರಡು ಲಕ್ಷಣಗಳ ಮಹಿಮೆ

ಕೆ. ಎಂ. ಮುನಶಿ

೧೯೦೪ ರಲ್ಲಿ— ನನಗೆ ನೆನಪಿದ್ದ ಮಟ್ಟಿಗೆ ಎರಡನೆಯ ಎಲ್ ಎಲ್. ಬಿ. ಯ ಮೊದಲನೆ ಭಾಗದಲ್ಲಿ ನಾನು ನಪಾಸಾಗಿದ್ದೆ. ಆ ಕಾಲ ನನಗೆ ಅತ್ಯಂತ ತಾಪದಾಯಕವಾಗಿತ್ತಾದ್ದರಿಂದ ಮನಸ್ಸನ್ನು ಹಗುರ ಮಾಡಿಕೊಳ್ಳಲೆಂದು ಹಾರ್ಮೋನಿಯಂ ಮತ್ತು ತಬಲಾವಾದನಗಳಲ್ಲಿ ಮಗ್ನನಾಗಿರುತ್ತಿದ್ದೆ. ಆ ಸಮಯದಲ್ಲಿ ಧಾರ್ಮಿಕ ಸಾಹಿತ್ಯದಲ್ಲಿ ಪ್ರೀತಿಯಿದ್ದ ನನ್ನ ತಾಯಿ ಯೋಗ ವಾಸಿಷ್ಠ ವಾಚನದಲ್ಲಿ ತೊಡಗಿದ್ದ ಕೆಲ ಹೆಂಗಳೆಯರನ್ನು ಕೂಡಿಕೊಂಡಿದ್ದಳು.

ಆಗ ನೆರೆಹೊರೆಯವರಿಗೆ ಭಡೋಚವು ಕಾಶಿಯಂಥದೇ ಒಂದು ಪುಣ್ಯಕ್ಷೇತ್ರವಾಗಿತ್ತು. ನರ್ಮದಾ ನದಿಯಲ್ಲಿ ಸ್ನಾನ ಮಾಡಿ ಪಾವನರಾಗಲು ಹೊರಗಿನ ಜನರನೇಕರು ಬರುತ್ತಿದ್ದರು. ಸಂನ್ಯಾಸಿಗಳು, ಸಾಧುಗಳು, ಧರ್ಮೋಪದೇಶಕರು – ನಿಜ ಮತ್ತು ಡಾಂಭಿಕ ಎರಡೂ ಬಗೆಯವರು– ಆಗಾಗ ಆ ಪವಿತ್ರ ನದಿಯಲ್ಲಿ ಮಿಂದು ಪುನೀತರಾಗಲೆಂದು, ಭಾಷಣೋಪದೇಶಗಳನ್ನು ಮಾಡಲೆಂದು, ಸಾಧನೆಯನ್ನು ಮಾಡಲೆಂದು ಬರುತ್ತಿದ್ದರು. ಸ್ವಾಭಾವಿಕವಾಗಿ ಭಕ್ತಿ ಭಾವದವರಾಗಿದ್ದ ಭಡೋಚದ ಜನರು ಅವರ ಆತಿಥ್ಯವನ್ನು ಚೆನ್ನಾಗಿ ಮಾಡುತ್ತಿದ್ದರು. ಅವರ ಉಪದೇಶವನ್ನು ಅದು ಒಂದಿಷ್ಟೂ ಅರ್ಥವಾಗದಿದ್ದರೂ ಶ್ರದ್ಧೆಯಿಂದ ಕೇಳುತ್ತಿದ್ದರು. ಮುಕ್ತಿ ದೊರಕೀತೆಂಬ ಆಸೆಯಿಂದ ಅವರ ಪಾದಗಳನ್ನು ಮುಟ್ಟಿ ನಿತ್ಯವೂ ನಮಸ್ಕರಿಸುತ್ತಿದ್ದರು. ಅವರು ಹೋಗುವಾಗ ವೈಭವದಿಂದ ಬೀಳ್ಕೊಡಲು ಎಂದೂ ತಪ್ಪುತ್ತಿರಲಿಲ್ಲ.

ತುಂಬ ವಿದ್ವಾಂಸರಾದ ಒಬ್ಬ ಯೋಗಿಗಳು– ಅವರನ್ನು ನಾನು ಯೋಗಿ ಮಹಾರಾಜ ಎಂದು ಕರೆಯುತ್ತೇನೆ— ಪ್ರತಿ ವರ್ಷವೂ ಅನೇಕಾನೇಕ ಶಿಷ್ಯರೊಂದಿಗೆ ಭಡೋಚಕ್ಕೆ ಬಂದು ಹದಿನೈದು ದಿನ ಮುಕ್ಕಾಮು ಮಾಡುತ್ತಿದ್ದರು. ಆತ ಪ್ರಭಾವಶಾಲಿ ಭಾಷಣಕಾರರೂ ಸಂಭಾಷಣೆಯಲ್ಲಿ ಚತುರರೂ ಆಗಿದ್ದರು. ಬಂದ ಪ್ರತಿಸಲವೂ ಆರಿಸಿದ ಕೆಲವೇ ಮಂದಿಗೆ ಯೋಗ ಶಿಕ್ಷಣವೀಯುತ್ತಿದ್ದರು.

ಒಂದು ದಿನ ತನ್ನ ಧಾರ್ಮಿಕ ವೇದಾಂತ ಸಂಘದಿಂದ ಮನೆಗೆ ಬಂದವಳೇ ನನ್ನ ತಾಯಿ

" ಭವನ್ಸ್ ಜರ್ನಲ್ " ನಿಂದ

ಭಡೋಚಕ್ಕೆ ಬಂದಿದ್ದ ಹೊಸಬರೊಬ್ಬರ ವಿಚಾರವನ್ನು ಹೇಳಿದಳು. ಅವರು ಯೋಗಿ ಮಹಾರಾಜರ ಶಿಷ್ಯಳಂತೆ. ಒಂದು ಇಡೀ ವರ್ಷ ಪ್ರತಿನಿತ್ಯವೂ ನರ್ಮದೆಯಲ್ಲಿ ಮಿಂದು ಪೂರೈಸಬೇಕಾದ ವ್ರತವೊಂದನ್ನು ಪಾಲಿಸಲು ಭಡೋಚಕ್ಕೆ ಬಂದಿರುವಳಂತೆ. ಅವಳ ಪ್ರಭಾವ ಅಮ್ಮನ ಮೇಲೆ ತುಂಬಾ ಬಿದ್ದಿತ್ತು. ಅಮ್ಮನ ಮಾತಿನಿಂದ ನನ್ನ ಮೇಲೂ ಪರಿಣಾಮವಾಗದಿರಲಿಲ್ಲ.

ನೆರೆಹೊರೆಯ ಮನೆಗಳ ಮಾಡಿನ ಮೇಲಿಂದ ಸುತ್ತಲಿನ ದೃಶ್ಯವನ್ನು ಕಾಣಿಸುತ್ತಿದ್ದ ನಮ್ಮ ಮನೆಯ ಮಾಳಿಗೆಯ ಮೇಲಿನ ಕೋಣೆಯೆ ನನ್ನ ಅಭ್ಯಾಸ ಮತ್ತು ಮಲಗುವ ಕೋಣೆಯಾಗಿತ್ತು. ದಿನದ ಹೆಚ್ಚಿನ ವೇಳೆಯನ್ನು ನಾನಿಲ್ಲಿಯೆ ಕಳೆಯುತ್ತಿದ್ದೆ. ಕೋಣೆಯ ಒಂದು ಬಾಗಿಲು ಮಾಳಿಗೆಯ ಕಟಾಂಜನಕ್ಕೆ ಪ್ರವೇಶವೀಯುತ್ತಿತ್ತು. ಅಮ್ಮ ಆಗಂತುಕಳ ವಿಷಯ ತಿಳಿಸಿದ ಮರುದಿನ ಮುಂಜಾನೆ ನಾನು ಕೋಣೆಯಲ್ಲಿ ತಬಲಾ ಬಾರಿಸುತ್ತ ಕುಳಿತಿದ್ದಾಗ ಅಮ್ಮ ಮತ್ತು ಮಹಾತ್ಮಾ- ಆಗಂತುಕಳನ್ನು ಅಮ್ಮನ "ಧಾರ್ಮಿಕ ಸಂಘದ"ವರು ಹಾಗೆಂದೇ ಕರೆಯುತ್ತಿದ್ದರು — ಮಾಳಿಗೆಯನ್ನೇರಿ ಬಂದರು.

ಮಹಾತ್ಮಾ ೨೫-೨೬ ವರ್ಷದ ದೃಢಕಾಯದ ಸ್ತ್ರೀಯಾಗಿದ್ದಳು. ಸುಂದರಿಯಾಗಿರದಿದ್ದರೂ ಯೌವನದ ಕಾಂತಿ ಹೊಳೆಯುತ್ತಿತ್ತು. ಅವಳು ಒಂದೇ ಒಂದು ಬಿಳಿಯ ಬಟ್ಟೆಯನ್ನುಟ್ಟು ಮೈಮುಚ್ಚಿಕೊಂಡಿದ್ದಳು. ಕುಪ್ಪಸ, ಪರಿಕಾರ ಏನೂ ಇರಲಿಲ್ಲ. ಕೊರಳಲ್ಲಿ ರುದ್ರಾಕ್ಷಿ ಸರ; ಹಣೆಗೆ ವಿಭೂತಿ; ಕಾಲಿನಿಂದ ತಲೆಯ ವರೆಗೂ ಅವಳು ಒಬ್ಬ ಸಾಧುವಿನಂತೆ ಕಾಣುತ್ತಿದ್ದಳು. ನಾನು ಇದುವರೆಗೆ ನೂರಾರು ಸಾಧು-ಸಂನ್ಯಾಸಿಗಳನ್ನು ನೋಡಿದ್ದೆನಾದರೂ ಸಂನ್ಯಾಸಿನಿಯೋರ್ವಳನ್ನು ನೋಡುತ್ತಿರುವುದು ಇದೇ ಮೊದಲ ಸಲವಾಗಿತ್ತು. ಆದ್ದರಿಂದ ಅವಳ ಬಗ್ಗೆ ನನ್ನಲ್ಲಿ ತುಂಬ ಗೌರವ ಭಕ್ತಿಗಳು ಉದಯಿಸಿದ್ದರೇನೂ ಆಶ್ಚರ್ಯವಲ್ಲ.

ಮಹಾತ್ಮಾ ನಮ್ಮ ಮನೆಗೆ ಬಂದಿರುವುದರ ಕಾರಣವನ್ನು ಅಮ್ಮ ವಿವರಿಸಿದಳು. ಭಡೋಚದಲ್ಲಿ ಮಹಾತ್ಮಾ ಒಂದು ವರ್ಷಕಾಲ ಇರಬೇಕಾಗಿತ್ತು. ಈ ಕಾಲದಲ್ಲಿ ಅವಳು ಅಮ್ಮನ ಸಂಘಕ್ಕೆ ಮಾರ್ಗದರ್ಶಕಳಾಗಲು, ಸಹಕಾರ ನೀಡಲು ಒಪ್ಪಿದ್ದಳು. ಅಮ್ಮನ ಮನೆ ತನಗೆ ವಾಸಕ್ಕೆ ಅನುಕೂಲವಾದೀತೇ ಎಂದು ನೋಡಲು ಮಹಾತ್ಮಾ ಬಂದಿದ್ದಳು.

ನನ್ನ ಕೋಣೆಯ ಹೊರಗಿದ್ದ ಕಟಾಂಜನದ ಆಚೆ ಬದಿಗೆ ಇದ್ದ ಚಿಕ್ಕ ಕೋಣೆಯೊಂದನ್ನು ಅಮ್ಮ ತೋರಿಸಿದಳು. "ಭಾಯಿ, ಮಹಾತ್ಮಾಳಿಗೆ ಆ ಕೋಣೆ ಒಪ್ಪಿಗೆಯಾಯಿತು" ಅಮ್ಮ ನನಗೆ ಹೇಳಿದಳು.

"ಹೌದು, ಅದು ಚೆನ್ನಾಗಿದೆ. ಗಾಳಿ, ಬೆಳಕು ಚೆನ್ನಾಗಿದ್ದು ಶಾಂತವೂ ಪ್ರತ್ಯೇಕವೂ ಆಗಿದೆ. ಅಲ್ಲಿ ನನ್ನ ಸಾಧನೆಯನ್ನು ಯಾವ ವಿಘ್ನವಿಲ್ಲದೆ ನಡೆಸಬಹುದು. ಈ ಕೋಣೆಯಲ್ಲಿರುವುದೇ ಒಳ್ಳೇದು ಎಂದು ನನಗನಿಸುತ್ತಿದೆ" ಮಹಾತ್ಮಾ ಹೇಳಿದಳು.

ಸಾಮಾನ್ಯವಾಗಿ ಬಲು ಜಾಗರೂಕ ಸ್ವಭಾವದವಳಾದರೂ ಅಮ್ಮ ಈ ಹೊಸ ಸಾಧು ಅತಿಥಿಯ ಮೇಲಿನ ಗೌರವಾದರಗಳ ಮಬ್ಬಿನಲ್ಲಿ ಮಹಾತ್ಮಾಳು ಆ ಕೋಣೆಯಲ್ಲಿರುವುದಕ್ಕೆ ಒಪ್ಪಿಕೊಂಡಳು.

ಕೆಲ ಸಮಯದಿಂದ ಯೋಗಾಭ್ಯಾಸದಲ್ಲಿ ಆಸಕ್ತಿ ತಳೆದು ಯೋಗಸೂತ್ರವನ್ನು ಅರಿಯಲು ಯತ್ನಿಸುತ್ತಿದ್ದ ನನಗೆ ಇದೊಂದು ಸುಯೋಗವೆನಿಸಿತು. ಯೋಗಿ ಮಹಾರಾಜರ ಈ ಶಿಷ್ಯಳಿಂದ ನಾನೂ ಒಂದಿಷ್ಟು ವ್ಯಾವಹಾರಿಕ ಯೋಗವನ್ನು ಅಭ್ಯಾಸಮಾಡಬಹುದು ಎಂದು ನನಗನಿಸಿತು.

ಅಂದು ರಾತ್ರಿ ಭೋಜನ ಸಮಯದಲ್ಲಿ ಮಹಾತ್ಮಾ ಬರೇ ಹಣ್ಣುಗಳನ್ನು, ಅಮ್ಮ ತುಪ

ದಲ್ಲಿಯೆ ತಯಾರಿಸಿದ್ದ ಕೆಲ ತಿಂಡಿಗಳನ್ನು ಮಾತ್ರ ಸೇವಿಸಿದ್ದನ್ನು ಕಂಡೆ.

ಇಂದು ಹೆಜ್ಜೆ ಹೆಜ್ಜೆಗೆ ಸುಶಿಕ್ಷಿತ ಸ್ತ್ರೀಯರನ್ನೂ ಕಾಣುವೆವಾದರೂ ಸಂಸ್ಕೃತವನ್ನು ಬಲ್ಲ, ಗೀತೆ, ಯೋಗ ಮತ್ತು ದೇವರ ವಿಚಾರವನ್ನು ಅಧಿಕಾರ ವಾಣಿಯಿಂದ ಚರ್ಚಿಸಬಲ್ಲ ಸ್ತ್ರೀಯನ್ನು ಕಾಣುವುದು ಕಠಿಣ. ಆ ಕಾಲದಲ್ಲಿ ಅಂಥವಳೊಬ್ಬಳನ್ನೂ ಕನಸಿನಲ್ಲಿಯೂ ಕಾಣುವುದು ಅಸಾಧ್ಯವೆಂದು ನನಗೆ ಅನಿಸುತ್ತಿತ್ತು. ಮಹಾತ್ಮಾಳೊಂದಿಗೆ ಎರಡು ತಾಸುಗಳ ವರೆಗೆ ಕರ್ಮಯೋಗ, ಭಕ್ತಿ, ಧ್ಯಾನ ಮತ್ತು ಅಂಥ ಇತರ ವಿಷಯುಗಳನ್ನು ಕುರಿತು ಚರ್ಚಿಸುತ್ತಿದ್ದಾಗ ನಾನು ಸ್ವರ್ಗದಲ್ಲಿದ್ದೇನೆಂದೇ ನನಗನಿಸಿತು. ಸಾಧುಗಳ ಪ್ರಪಂಚಕ್ಕೆ ನಾನು ಹೊಸಬನಾಗಿದ್ದೆ. ಆ ಪ್ರಪಂಚದಲ್ಲಿ ಮಹಾತ್ಮಾ ಹೇಳುತ್ತಿದ್ದ ಮಾತುಗಳು ನಿತ್ಯದ ಪಲ್ಲವಿಗಳು ಎಂದು ನನಗಾಗ ಗೊತ್ತಿರಲಿಲ್ಲ.

ನಾನು ನಿದ್ದೆಯಲ್ಲಿ ಅಂದು ಜನಕರಾಜನ ಸಭೆಯಲ್ಲಿ ಶೋಭಿಸುತ್ತಿದ್ದ ಗಾರ್ಗಿ ಮೈತ್ರೇಯಿಯರ ಕನಸನ್ನು ಕಂಡೆ.

*

ಮರುದಿನ ಮಹಾತ್ಮಾ ಬಹಿಷ್ಠೆಯಾದಳು. ಅವಳ ಊಟ ಪ್ರತ್ಯೇಕವಾಗಿ ನಡೆಯಿತು. ಅವಳು ಕೆಳಗಡೆಯ ಒಂದು ಕೋಣೆಯಲ್ಲಿದ್ದ ತೂಗುಮಂಚದ ಮೇಲೆ ಕುಳಿತು ದಿನಗಳೆದಳು. ರಾತ್ರಿ ಅಲ್ಲೆ ಮಲಗಿದಳು.

ಮರುದಿನ ನಾನು ಊಟಕ್ಕೆಂದು ಕೆಳಗಿಳಿದು ಹೋದಾಗ ಮಹಾತ್ಮಾ ತೂಗುಮಂಚದಲ್ಲಿ ಕುಳಿತು ತೂಗಿಕೊಳ್ಳುತ್ತ ಮೀರಾಳ "ಕಾನು ದೋಶು ಜಾವೆ ಮಾರಿ ಪ್ರೀತಾ" ಎಂಬ ಪ್ರಸಿದ್ಧ ಹಾಡನ್ನು ಹಾಡುತ್ತಿರುವುದನ್ನು ಕೇಳಿದೆ. ("ಕೃಷ್ಣನಿಗೆ ನನ್ನ ಪ್ರೇಮದ ಅರಿವಿಲ್ಲ" ಎಂದು ಈ ಹಾಡಿನ ಅರ್ಥವಿದೆ )

ಈ ಹಾಡೆಲ್ಲಿ ಯೋಗವೆಲ್ಲಿ ? ಎಂಬ ವಿಚಾರ ನನ್ನ ಮನಸ್ಸಿನಲ್ಲಿ ಸುಳಿದುಹೋಯಿತು.

ಸಂಜೆ ನಾನು ಮಾಳಿಗೆಯಿಂದ ಕೆಳಗಿಳಿದು ಬಂದಾಗಲೂ ಮಹಾತ್ಮಾ ಅದೇ ಹಾಡನ್ನು ಹಾಡುತ್ತಿದ್ದಳು. ಇದು ನಿಜವಾಗಿಯೂ ಅಸಮಾಧಾನಕರವಾಗಿತ್ತು.

ಮೂರನೆಯ ದಿನ ಮಹಾತ್ಮಾ ಸ್ನಾನಮಾಡಿ ಶುಚಿರ್ಭೂತಳಾದಳು. ಸಂಪ್ರದಾಯಕ್ಕನುಸರಿಸಿ ಅವಳಿನ್ನೂ ಉಳಿದವರಿಂದ ದೂರವಿರಬೇಕಾಗಿದ್ದರೂ ಅವಳು ಮನೆಯಲ್ಲೆಲ್ಲ ಓಡಾಡಬಹುದಾಗಿತ್ತು.

ಸುಮಾರು ೧೦ ಗಂಟೆಯ ಹೊತ್ತಿಗೆ ನಾನು ತಬಲಾ ಅಭ್ಯಾಸ ಮಾಡುತ್ತಿದ್ದಾಗ ಮಹಾತ್ಮಾ ಮುಗುಳ್ನಗುತ್ತಲೇ ನನ್ನ ಕೋಣೆಗೆ ಬಂದಳು. ನನ್ನಿಂದ ದೂರದಲ್ಲಿ ಕೋಣೆಯಲ್ಲಿ ಚಾಪೆಯಿರದ ಕಡೆ ಇಟ್ಟಿದ್ದ ಕುರ್ಚಿಯ ಮೇಲೆ ಅವಳು ಕುಳಿತು, "ಭಾಯಿ, ನೀನು ನನಗೆ ಸಹಾಯ ಮಾಡಬೇಕು" ಎಂದಳು. ನನ್ನ ತಾಯಿ ನನ್ನನ್ನು ಕರೆಯುತ್ತಿದ್ದ ಹೆಸರಿನಿಂದಲೇ ಅವಳು ನನ್ನನ್ನು ಸಂಬೋಧಿಸತೊಡಗಿದ್ದಳು. "ನನಗೆ ಸಂಸ್ಕೃತದಲ್ಲಿ ಒಂದು ಪತ್ರ ಬಂದಿದೆ. ಅದರಲ್ಲಿಯ ಎರಡು ವಾಕ್ಯಗಳ ಅರ್ಥವೇ ನನಗಾಗುವುದಿಲ್ಲ. ಅವನ್ನು ನನಗೆ ತಿಳಿಸಿ ಹೇಳುವಿಯಾ ?" ಎಂದವಳು ಕೇಳಿದಳು.

ಒಂದಿಷ್ಟು ಸಂಸ್ಕೃತ ಬರುತ್ತಿದ್ದ ನಾನು ಸಹಾಯ ಮಾಡಲು ಸಿದ್ಧನಾಗಿಯೆ ಇದ್ದೆ. ಆ ಪತ್ರವನ್ನೋದಿ ಆ ಎರಡು ವಾಕ್ಯಗಳ ಅರ್ಥವನ್ನು ನನಗೆ ತಿಳಿದಂತೆ ಹೇಳಿದೆ. ಯೋಗಿ ಮಹಾರಾಜರು ಅವಳನ್ನು ತಮ್ಮ ಸಮ್ಮುಖದಿಂದ ಹನ್ನೆರಡು ತಿಂಗಳ ಕಾಲ ಗಡೀಪಾರು ಮಾಡಿದ್ದರು. ಆ ಅವಧಿಯನ್ನು ಅವಳು ಧರ್ಮದ ಅಧ್ಯಯನ ಮತ್ತು ಯೋಗಸಾಧನೆಯಲ್ಲಿ ಕಳೆದರೆ ಮಾತ್ರ ತಿರುಗಿ ತನ್ನ ಬಳಿ ಬರಬಹುದೆಂದು ವಿಧಿಸಿದ್ದರು.

ನಾನು ಶರಲಕ್ ಹೋಮ್ಸನಾದೆ. "ಯಾ-

ವುದೋ ಅಪರಾಧಕ್ಕಾಗಿ ಯೋಗಿ ಮಹಾರಾಜರು ನಿಮಗೆ ಶಿಕ್ಷೆ ವಿಧಿಸಿರುವಂತಿದೆ. ಯಾವುದೊ ಪಾಪದ ಪರಿಮಾರ್ಜನೆಗಾಗಿ ನೀವಿಲ್ಲಿಗೆ ಬಂದಿರುವಿರಿ" ಎಂದೆ. ಅವಳ ಅಂತರಂಗವನ್ನು ತಿಳಿಸಬೇಕೆಂಬ ಬಿನ್ನಹವನ್ನು ಮಾಡಿಕೊಂಡು ನಾನು ದೊಡ್ಡ ಹೆಡ್ಡತನ ಮಾಡಿದೆ.

ನನ್ನ ಪ್ರಶ್ನೆ ಕೇಳಿ ಮಹಾತ್ಮಾ ಸೆಟೆದು ಕುಳಿತು "ಛೆ! ಛೆ! ಹಾಗೇನಿಲ್ಲ" ಎಂದಳು.

"ಆ ಪತ್ರದ ಅರ್ಥ ಹಾಗಲ್ಲದೆ ಇನ್ನೇನೂ ಅಲ್ಲ. ನಾನು ಯೋಗಿ ಮಹಾರಾಜರನ್ನು ಕಂಡಿದ್ದೇನೆ. ಚಿಕ್ಕಪುಟ್ಟ ತಪ್ಪಿಗಾಗಿ ನಿಮ್ಮನ್ನು ದಂಡಿಸುವವರಲ್ಲ ಅವರು," ನಾನೊಬ್ಬ ಜಾಣನಂತೆ ನುಡಿದೆ.

"ಹಾಗಾದರೆ ಭಾಯಿ, ನಿನಗೆ ಎಲ್ಲವನ್ನೂ ಹೇಳುತ್ತೇನೆ. ನಾನಿನ್ನೂ ನಾಲ್ಕು ವರ್ಷದವಳಿದ್ದಾಗಲೇ ವಿಧವೆಯಾದೆ. ವಿಧವೆಯೂ ಅಸಹಾಯಳೂ ಆಗಿದ್ದ ನನ್ನ ತಾಯಿ ನನ್ನನ್ನು ಯೋಗಿ ಮಹಾರಾಜರಿಗೆ ಒಪ್ಪಿಸಿದಳು. ಅವರು ನನ್ನನ್ನು ಬೆಳೆಸಿದರು. ಶಿಕ್ಷಣವಿತ್ತರು. ಶಾಸ್ತ್ರ ಮತ್ತು ಯೋಗಗಳನ್ನು ಕಲಿಸಿದರು. ಯೋಗಿ ಮಹಾರಾಜರು 'ಕಾಂಚಾಲಿಯಾ ಪಂಥ' ಎಂಬ ಶಾಕ್ತ ಪಂಥದ ಪ್ರಮುಖರು ಎಂಬುದನ್ನು ಬಲ್ಲೆಯಾ?"

"ಹೌದೇನು? ಆತ ಗೀತೆಯ ಅನುಷ್ಠಾನಗೈಯುವ ಯೋಗಿಯೆಂದು ತಿಳಿದಿದ್ದೆ."

"ಅದೂ ಹೌದು. ನಾನು ಹೇಳಿದ್ದೂ ಹೌದು."

ನನಗೆ ಕುತೂಹಲ ಕೆರಳಿತು. ಶಾಕ್ತ ಪಂಥದ ವಿಚಾರವಾಗಿ ಬಹಳಷ್ಟನ್ನು ಕೇಳಿದ್ದೆನಾದರೂ ಆ ಪಂಥದ ಒಬ್ಬರೊಡನೆಯೂ ಇದುವರೆಗೆ ನನಗೆ ಸಂಬಂಧ ಬಂದಿರಲಿಲ್ಲ.

ಮಹಾತ್ಮಾ ಹೇಳಿದಳು: "ನಾನು ದೊಡ್ಡವಳಾದ ಮೇಲೆ ಯೋಗಿ ಮಹಾರಾಜರು ನನ್ನನ್ನು ಶಾಕ್ತ ಪಂಥಕ್ಕೆ ಸೇರಿಸಿದರು. ನಾನು ಅವರ ಪಟ್ಟಶಿಷ್ಯಳಾದೆನಲ್ಲದೆ ಶಾಕ್ತ ವಿಧಿಗಳನ್ನು ನೆರವೇರಿಸಲು ಅವರ ಸಹಾಯಕಳಾದೆ," ಅವಳು ಗೂಢ ನಗು ನಕ್ಕಳು.

"ಹಾಗಿದ್ದರೆ ನಿಮ್ಮ ಮೇಲೆ ಅವರು ಸಿಟ್ಟಾದದ್ದೇಕೆ?"

"ಅವರ ಶಾಕ್ತ ಶಿಷ್ಯೆಯರಲ್ಲಿ ನಾನೇ ಮೆಚ್ಚಿನವಳಾಗಿದ್ದೆ. ಮುಂದೆ ಅವರು ಹೊಸ ಶಿಷ್ಯೆಯರನ್ನು ಬರಮಾಡಿಕೊಂಡು ಅವರೊಡನೆ ವಿಧಿಗಳನ್ನು ಪೂರೈಸತೊಡಗಿದಾಗ ನಾನು ಅಸೂಯೆಗೊಂಡೆ. ಅವರೊಡನೆ ಜಗಳಾಡಿದೆ. ಗುರುವಾದ ತಮಗೆ ಇಷ್ಟ ಬಂದವಳನ್ನು ಅನುಗ್ರಹಿಸುವ ಅಧಿಕಾರವಿದೆಯೆಂದು ಅವರು ಹೇಳಿದರು. ಆಗ ನಾನು ಸೇಡು ತೀರಿಸಿಕೊಳ್ಳಲು ನಿಶ್ಚಯಿಸಿದೆ. ಯೋಗಿ ಮಹಾರಾಜರೊಂದಿಗೆ ನಾನು ಮುಂಬಯಿಗೆ ಹೋದಾಗ ಪಂಥದ ವಿಧಿಗಳನ್ನು ಪೂರೈಸಲು ಬೇರೆ ಕೆಲ ಮಿತ್ರರನ್ನು ಸಂಪಾದಿಸಿಕೊಂಡೆ. ಯೋಗಿ ಮಹಾರಾಜರಿಗೆ ಸಿಟ್ಟು ಬಂತು. ಶಿಷ್ಯತ್ವದ ಪ್ರತಿಜ್ಞೆ ಭಂಗಿಸಿದ್ದಕ್ಕಾಗಿ ಅವರು ನನ್ನನ್ನು ದಂಡಿಸಿದರು. 'ನೀವು ಬೇರೆ ಹೆಂಗಸರನ್ನು ಹೊಂದಬಹುದಾದರೆ ನಾನೇಕೆ ಬೇರೆ ಗಂಡಸರನ್ನು ಕೂಡಬಾರದು?' ಎಂದು ನಾನು ಕೇಳಿದೆ. ಆಗ ಅವರು ಇನ್ನೂ ಕೋಪಗೊಂಡು ನನಗೆ ಈ ಶಿಕ್ಷೆ ವಿಧಿಸಿದರು. ಅವರು ಸೇರಾದರೆ ನಾನು ಸವ್ವಾಸೇರು ಎಂದು ಅವರು ತಿಳಿಯರು."

ನನಗೆ ಆಘಾತವಾಯಿತು ಎಂದರೆ ಅತಿಶಯೋಕ್ತಿಯಾಗದು. ಹಾಗಿದ್ದರೂ ಇಂಥ ಕುಪ್ರಸಿದ್ಧ ಪಂಥದೊಡನೆ ಯೋಗಿ ಮಹಾರಾಜರು ಸಂಬಂಧವಿಟ್ಟುಕೊಂಡಿದ್ದಾರೆಂದು ನಂಬುವುದು ನನಗೆ ಜಡವಾಯಿತು ಮಹಾತ್ಮಾ ಸುಳ್ಳು ಹೇಳುತ್ತಿದ್ದಾಳೆಂದೇ ಬಗೆದೆನೆನ್ನಬಹುದು.

ಆಗ ನಾನು ಪ್ಲೇಟೋ, ಪಾಸ್ಕಲ್ ಮತ್ತು ಪತಂಜಲಿಯ ಯೋಗಸೂತ್ರಗಳ ಪ್ರಭಾವದಿಂದ ಅತ್ಯಂತ ಪವಿತ್ರ ಜೀವನದ ಕನಸು ಕಾಣುವವನಾಗಿದ್ದೆ. ಪ್ರೇಮ ಮತ್ತು ಅದರ ಸುಖಗಳ ವಿಚಾರ ಮಾಡುತ್ತಿರಲಿಲ್ಲವೆಂದಲ್ಲ.

ನನ್ನ ಪ್ರೀತಿಯ ಕವಿಯಾದ ಶೆಲ್ಲಿಯಿಂದ ಪ್ರಭಾವಿತವಾದ ಪ್ರೇಮರಾಜ್ಯದಲ್ಲಿ ನಾನು ವಿಹರಿಸುತ್ತಿದ್ದೆ. ಆದರೆ ನಾನು ಆಗ ಯಾವುದನ್ನೂ ಸುಲಭದಲ್ಲಿ ಒಪ್ಪುವವನಾಗಿರಲಿಲ್ಲ. ಯಾವಾಗಲೂ ನಾನು ಹಾಗೆಯೆ ಎನ್ನಬಹುದು. ಕಟ್ಟುನಿಟ್ಟಿನ ವಾತಾವರಣದಲ್ಲಿ ಬೆಳೆದ ನಾನು ನೈತಿಕ ಅಪರಾಧಗಳನ್ನು ತಿರಸ್ಕಾರದಿಂದ ನೋಡುತ್ತಿದ್ದೆನಾದ್ದರಿಂದ ಮಹಾತ್ಮಾಳ ಮಾತು ಕೇಳಿ ನಾನು ಖತಿಗೊಂಡೆ.

ನನಗೆ ತುಂಬ ಮನಸ್ತಾಪವೂ ವಿವಂಚನೆಯೂ ಆಯಿತು. ಈ ಹೆಂಗಸು ಒಬ್ಬ ಯೋಗಿಯ ಸೂಳೆಯಾಗಿದ್ದಳು. ಈಗವಳು ನಮ್ಮೊಂದಿಗೆ ವಾಸ ಮಾಡುವಳು. ನನ್ನ ಕೋಣೆಯ ಹೊರಗಿನ ಕಟಾಂಜನದಾಚೆ ಇರುವ ಕೋಣೆಯಲ್ಲಿ ರಾತ್ರಿ ಮಲಗಿರುವಳು. ಅವಳ ಕೋಣೆಗೆ ಹೋಗಬೇಕಾದರೆ ನನ್ನ ಕೋಣೆಯಲ್ಲಿ ಹಾಯ್ದೇ ಹೋಗಬೇಕು. ಅಯ್ಯೊ! ದೇವರೆ!

ನಾನು ಸ್ನಾನ-ಊಟಗಳಿಗಾಗಿ ಕೆಳಗಿಳಿದು ಹೋದಾಗ ಮಹಾತ್ಮಾ ಮಂಚದಲ್ಲಿ ತೂಗಿಕೊಳ್ಳುತ್ತ "ಕಾನು ದೊ....ಮಾರಿ ಪ್ರೀತಾ" ಎಂದು ಗಟ್ಟಿಯಾಗಿ ಹಾಡುತ್ತಿದ್ದಳು. ನನಗೆ ಹೊಸತೊಂದು ವಿಚಾರ ಬಂತು. ಅವಳು ಕೃಷ್ಣನನ್ನು ಕರೆಯುತ್ತಿದ್ದಾಳೆಯೆ ಅಥವಾ ಇದೇ ಮನೆಯಲ್ಲಿರುವ ಅದೇ ಹೆಸರಿನವನನ್ನೆ?

"ಈ ಹಾಡನ್ನೆ ಯಾಕೆ ಯಾವಾಗಲೂ ಹಾಡುವಿರಿ?" ಎಂದು ಕೇಳಿದೆ.

"ಓ! ನಾನು ಪ್ರೇಮಲಕ್ಷಣ ಭಕ್ತಿಯಲ್ಲಿ ನಂಬಿಕೆಯುಳ್ಳವಳು."

ಸಂಜೆ ಅಮ್ಮನೊಡನೆ ಮಾತಾಡಿದೆ. ಅವಳಿಗೂ ಮಹಾತ್ಮಾಳ ಹಾಡು ಸೇರಿಕೆಯಾಗಿರಲಿಲ್ಲ. ಮಹಾತ್ಮಾಳ ಮುಟ್ಟಿನ ಅವಧಿ ಮುಗಿದೊಡನೆ ಅವಳನ್ನು ಬೇರೆಡೆಗೆ ಹೇಗೆ ಸಾಗಿಸಲಿ ಎಂದು ಅವಳು ಯೋಚಿಸುತ್ತಿದ್ದಳು.

*

ನಾಲ್ಕನೆಯ ದಿನ-ಅದೂ ವೈಶಾಲಿಗೆಯ ದಿನವೇ ಸರಿ- ಮಹಾತ್ಮಾ ನದಿಗೆ ಹೋಗಿ ಸ್ನಾನ ಮಾಡಿಕೊಂಡು ೧೦ ಗಂಟೆಯ ಸುಮಾರಿಗೆ ನನ್ನ ಕೋಣೆಗೆ ಬಂದಳು.

ಹಿಂದಿನ ದಿನ ಕುಳಿತಿದ್ದ ಕುರ್ಚಿಯ ಮೇಲೆಯೆ ಕುಳಿತು ಅವಳು ತನ್ನ ಪಂಥದ ಶಾಕ್ತ ವಿಧಿಗಳನ್ನು ಕುರಿತು ಮಾತಾಡತೊಡಗಿದಳು. ಮೊನ್ನೆ ನಾನು ಅವಳನ್ನು ಅವುಗಳ ಬಗ್ಗೆ ಕೇಳಿದ್ದೆ. ಆದ್ದರಿಂದಲೇ ಆವಳು ವಿವರವಾಗಿ ಹೇಳತೊಡಗಿದಳು. ನಾನು ಆಸ್ಥೆಯಿಂದ ಕೇಳುತ್ತಿದ್ದೆ.

"ಭಾಯಿ, ನನ್ನದೊಂದು ವಿನಂತಿಯಿದೆ. ನಾನು ಕೆಲವೊಂದು ವಿಧಿಗಳನ್ನಾಚರಿಸುತ್ತಿದ್ದೇನೆ. ಆದರೆ ಸರಿಯಾದ ಸಹಕಾರಿಯಿಲ್ಲದೆ ಅವುಗಳನ್ನಾಚರಿಸುವುದು ಸಾಧ್ಯವಿಲ್ಲ. ಶಾಸ್ತ್ರಗಳಲ್ಲಿ ಹೇಳಿರುವ ದ್ವಾತ್ರಿಂಶತ್ (ಮೂವತ್ತೆರಡು) ಲಕ್ಷಣಗಳುಳ್ಳವನೇ ಸಹಕಾರಿಯಾಗಬೇಕು." ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಬರುವ ನಾಯಕರೆಲ್ಲ ಈ ದ್ವಾತ್ರಿಂಶತ್ ಲಕ್ಷಣಗಳನ್ನು ಹೊಂದಿರುವವರೇ ಆಗಿದ್ದಾರೆ.

ಅವಳು ಮುಂದೆ ಹೇಳುತ್ತಿದ್ದುದನ್ನು ಊಹಿಸಿಕೊಂಡ ನನಗೆ ಅವಳನ್ನು ಒದ್ದು ಹೊರಗೆ ಹಾಕುವ ವಿಚಾರ ಬಂತು. ಆದರೆ ನಾನಿದ್ದ ಪರಿಸ್ಥಿತಿಯ ಅರಿವಾಗಿ ಎದೆ ನಡುಗಿತು. ಕೋಣೆಯಲ್ಲಿ ನಾವಿಬ್ಬರೇ ಇದ್ದೆವು ಬೇರೆ ಯಾವ ಮನೆಯ ಕಿಟಕಿಗಳಿಂದಲೂ ಕೋಣೆಯ ಒಳಗೆ ದೃಷ್ಟಿ ಹಾಯಿಸಲು ಸಾಧ್ಯವಿರಲಿಲ್ಲ ಅವಳು ಅಸಮಾಧಾನಗೊಂಡು ಒಂದು ವೇಳೆ ಒಂದಿಷ್ಟು ಬೊಬ್ಬೆ ಹಾಕಿ ನಾನು ಅವಳನ್ನು ಕೆಡಿಸಲು ಯತ್ನಿಸಿದೆನೆಂದು ಹೇಳಿದರೆ ಸಾಕು, ನನ್ನ ಅವತಾರ ಮುಗಿಯಬಹುದಿತ್ತು. ನಾನು ಬಲು ಪೇಚಿನಲ್ಲಿ ಸಿಕ್ಕಿಕೊಂಡಿದ್ದೆ. ಹೇಗಾದರೂ ಮಾಡಿ ಪಾರಾಗಬೇಕಾಗಿತ್ತು.

"ಸಹಕಾರಿ ಬೇಕಾಗಿರುವ ಈ ವಿಧಿಗಳಾದರೂ ಯಾವವು?" ಎಂದು ನಾನು ನನ್ನ ಅಸ್ವ-

ಸ್ಥಿತಿಯನ್ನು ಸಾಧ್ಯವಿದ್ದಷ್ಟು ಮುಚ್ಚಿಕೊಳ್ಳುತ್ತ ಕೇಳಿದೆ.

ಅತ್ಯಂತ ನಿರ್ಲಜ್ಜ, ಶಾಂತ ಧೈರ್ಯದಿಂದ ಅವಳು ಶಾಸ್ತ್ರವಚನಗಳ ಆಧಾರಗಳೊಂದಿಗೆ ಆ ವಿಧಿಗಳನ್ನಾಚರಿಸುವ ಬಗೆಯನ್ನು ವಿವರಿಸಿದಳು; ಧೂಪ, ಪುಷ್ಪ, ಶ್ರೀಚಕ್ರ, ಮದ್ಯಪಾನ, ಶಕ್ತಿಯ ಆವಾಹನೆಗಾಗಿ ಜಪ— ಕೊನೆಗೆ ಯಾವುದರಲ್ಲಿ ಮಾತ್ರ ಶಕ್ತಿಯೊಂದಿಗೆ ತಾದಾತ್ಮ್ಯ ಹೊಂದಬಹುದೋ ಆ ಅಂತಿಮ ವಿಧಾನ— ಎರಡು ದೇಹಗಳು ಒಂದಾಗುವುದು.

"ಸರಿ. ಆದರೆ ಶಾಸ್ತ್ರಗಳಲ್ಲಿ ಹೇಳಿರುವ ಮೂವತ್ತೆರಡೂ ಲಕ್ಷಣಗಳುಳ್ಳ ಸಹಕಾರಿ ಸಿಗುವುದು ನಿಮಗೆ ಸಾಧ್ಯವೇ ಇಲ್ಲ" ಎಂದೆ ನಾನು, ಸ್ತ್ರೀಯರು ಲಜ್ಜೆಯ ಮೂಲಕ ತಾವಾಗಿಯೆ ಮುಂಬರಿದು ಮೈಮೇಲೆ ಬೀಳುವುದಿಲ್ಲೆಂಬ ಮಾತಿನ ಆಧಾರದಿಂದ.

ಅವಳೂ ಮೊದಲಿನಷ್ಟೆ ಶಾಂತ ಚಿತ್ತದಿಂದ "ಅತಿ ವಿನಯ ಬೇಡ. ನಿನ್ನಲ್ಲಿ ಆ ಮೂವತ್ತೆರಡೂ ಲಕ್ಷಣಗಳಿವೆ," ಎಂದಳು.

ನನ್ನ ಅಂಜಿಕೆ ಮೇರೆ ಮೀರುತ್ತಿದ್ದಂತೆ ಮಿದುಳು ಇಮ್ಮಡಿ ವೇಗದಿಂದ ಕೆಲಸ ಮಾಡತೊಡಗಿತು.

ನೋಡಲು ತಕ್ಕಮಟ್ಟಿಗೆ ಚೆನ್ನಾಗಿಯೆ ಇರುವ ತರುಣ, ಅವನನ್ನು ಬಹುವಾಗಿ ಪ್ರೀತಿಸುವ ತಾಯಿ, ಹೆಚ್ಚಾಗಿ ತವರು ಮನೆಯಲ್ಲಿಯೆ ಇರುತ್ತಿದ್ದ ಚಿಕ್ಕವಯಸ್ಸಿನ ಪತ್ನಿ! ಮೈಲಿಗೆ ಕಳೆದ ಮೇಲೆ ಕಟಾಂಜನವೊಂದರಿಂದ ಮಾತ್ರ ಪ್ರತ್ಯೇಕಿಸಲ್ಪಟ್ಟಿರುವ ಈ ಎರಡು ಕೋಣೆಗಳು! ಮಹಾತ್ಮಾ ಹೇಳಿದ ರೀತಿಯಲ್ಲಿ ವಿಧಿಗಳನ್ನಾಚರಿಸಲು ಇದು ಸ್ವರ್ಗತುಲ್ಯ ಸ್ಥಳವಾಗಿತ್ತು.

"ನಾವಿಲ್ಲಿ ನೀವೆನ್ನುವ ವಿಧಿಗಳನ್ನು ಆಚರಿಸಲಾರೆವು. ಅಮ್ಮನಿಗೆ ಅದೆಂದೂ ಸೇರಿಬಾರದು. ನಾವು ಚಾಂದೋಡಕ್ಕೆ ಹೋಗೋಣ. ನರ್ಮದೆಯ ದಂಡೆಯ ಮೇಲಿರುವ ಒಂದು ಕ್ಷೇತ್ರ ಸ್ಥಳ ಅದು. ಅಲ್ಲಿ ನಾವಿಳಿದುಕೊಳ್ಳಬಹುದಾದಂಥ ಅನೇಕ ಧರ್ಮಶಾಲೆಗಳಿವೆ. ನಮ್ಮ ಪುರೋಹಿತರು ಕೂಡ ತುಂಬ ಆತಿಥ್ಯಶೀಲ ಗೃಹಸ್ಥರು," ಎಂದೆ ನಾನು.

"ನೀನು ನನ್ನ ಸಂಗಡ ಬರುತ್ತೀಯಷ್ಟೆ?" ಮಹಾತ್ಮಾ ಕೇಳಿದಳು.

"ಹೌದು. ನಾವು ಅಲ್ಲಿ ಕೆಲದಿನಗಳ ವರೆಗೆ ಇರಬಹುದು."

ಅವಳು ತುಸು ವಿಚಾರ ಮಾಡಿದಳು. ನನ್ನೊಂದಿಗೆ ಸಂಧಾನ ಮಾಡಿಕೊಳ್ಳಬೇಕಾಗಿದ್ದರಿಂದ ಅವಳು ಒಪ್ಪಿದಳು. ಮರುದಿನ ಮಧ್ಯಾಹ್ನ ಟ್ರೇನಿನಲ್ಲಿ ಅವಳನ್ನು ಚಾಂದೋಡಕ್ಕೆ ಕರೆದೊಯ್ಯುವುದಾಗಿ ವಚನವಿತ್ತೆ.

*

ಅವಳು ಹೋದೊಡನೆಯೆ ಅಮ್ಮನ ಬಳಿಗೆ ಹೋಗಿ ನನ್ನ ಮೂವತ್ತೆರಡು ಲಕ್ಷಣಗಳ ವಿಷಯವನ್ನೆಲ್ಲ ಹೇಳಿದೆ. ಮಹಾತ್ಮಾಳ ಬಗ್ಗೆ ಅವಳು ತಾಳಿದ್ದ ಗೌರವಾದರಗಳು ನನ್ನನ್ನು ಎಂಥ ಸಂಕಟಕ್ಕೆ ಸಿಲುಕಿಸಿದವು ಎಂದು ದೂರಿಕೊಂಡೆ.

ನನ್ನ ಒಳಸಂಚಿನಲ್ಲಿ ಅಮ್ಮ ಆನಂದದಿಂದ ಸಹಕರಿಸಿದಳು. ಮಹಾತ್ಮಾಳೊಂದಿಗೆ ಊಟಕ್ಕೆ ಕುಳಿತಾಗ ಚಾಂದೋಡ ಕ್ಷೇತ್ರದ ಮಹಿಮೆಯನ್ನು ನಾವಿಬ್ಬರೂ ಬಣ್ಣಿಸಿಯೇ ಬಣ್ಣಿಸಿದೆವು.

ನಮ್ಮ ನಂಬಿಗೆಯ ಆಳಾದ ಮಹಮ್ಮದ ಶಫಿಯನ್ನು ಕರೆದು ಮಹಾತ್ಮಾಳ ಎದುರಿನಲ್ಲಿಯೆ ಚಾಂದೋಡಕ್ಕೆ ಎರಡು ತಿಕೀಟುಗಳನ್ನು ಕೊಂಡು ತರಲು ಹೇಳಿದೆ. ಆ ಮೇಲೆ ನಾವಿಬ್ಬರೇ ಇದ್ದಾಗ ಅವನಿಗೆ ಗುಪ್ತವಾಗಿ ಬೇರೆ ಸೂಚನೆಗಳನ್ನು ಕೊಟ್ಟೆ.

ಅಂದಿಡೀ ಎಲ್ಲಿ ಮಹಾತ್ಮಾ ನನ್ನ ಕೋಣೆಗೆ ನುಗ್ಗುವಳೊ ಎಂದು ಅಂಜಿಕೊಂಡೇ ಇದ್ದೆ. ಮಧ್ಯಾಹ್ನ ಒಬ್ಬ ಮಿತ್ರನ ಮನೆಗೆ ಹೋಗಿ ರಾತ್ರಿ ಊಟದ ಹೊತ್ತಾಗುವ ವರೆಗೂ ಅಲ್ಲೇ ಉಳಿದೆ.

ಮನೆಗೆ ಬಂದೆ. ಎಲ್ಲರೂ ಒಟ್ಟಿಗೆ ಊಟ ಮಾಡಿದೆವು. ಮಲಗಲು ಹೋಗುವಾಗ ಮಹಾತ್ಮಾ "ಭಾಯಿ, ನಾಳೆ ಭೆಟ್ಟಿಯಾಗೋಣ" ಎಂದಳು.

" ಅವಶ್ಯ. "

ನಾನು ಮೆಟ್ಟಲುಗಳನ್ನೇರುತ್ತಿದ್ದಾಗ ಅವಳು "ಕಾನುದೊ.. ಮಾರೀಪ್ರೀತಾ" ಹಾಡುತ್ತಿರುವುದನ್ನು ಕೇಳಿದೆ.

ಅದನ್ನು ಹಾಡಬೇಕಾದ ಅಗತ್ಯವಿರಲಿಲ್ಲ. ಕನ್ಹಯ್ಯನಿಗೆ ಅವನ ದುರ್ಭಾಗ್ಯದಿಂದ ಎಲ್ಲವೂ ತಿಳಿದಿತ್ತು.

ಹೇಳಿಟ್ಟಿದ್ದಂತೆ ಮಹಮ್ಮದ ಮುಂಜಾನೆ ಆರು ಗಂಟೆಗೆ ನನಗಾಗಿ ಗಾಡಿ ತಂದ. ಮಹಾತ್ಮಾ ಆಗಲೇ ಸ್ನಾನಕ್ಕಾಗಿ ನದಿಗೆ ಹೋಗಿದ್ದಳು. ನಾನು ಗಾಡಿಯಲ್ಲಿ ಕುಳಿತು ವೇಗವಾಗಿ ಸ್ಟೇಶನ್ನಿಗೆ ಹೊಡೆಯಲು ಹೇಳಿದೆ.

"ಆದರೆ ತಾವು ೯-೩೦ ರ ಗಾಡಿಗೆ ಬಡೋದೆಗೆ ಹೋಗುವವರು. ಅವಸರವೇನು? " ಎಂದ ಗಾಡಿಯವ.

" ವೇಟಿಂಗ್‌ರೂಮಿನಲ್ಲಿ ಗಾಡಿಗಾಗಿ ಕಾಯುತ್ತ ಕೂಡ್ರುವುದೆಂದರೆ ನನಗೆ ಬಲು ಪ್ರೀತಿ. "

ಮನೆಯಲ್ಲಿರುವ ಧೈರ್ಯ ನನಗಿರಲಿಲ್ಲವೆಂದು ಅವನಿಗೆ ತಿಳಿದಿರಲಿಲ್ಲ. ನಾನು ಸುರಕ್ಷಿತನಾಗಿರಲು ಸಾಧ್ಯವಿಲ್ಲದಷ್ಟು ಒಳ್ಳೆಯ ಲಕ್ಷಣಗಳು ನನ್ನಲ್ಲಿದ್ದವು. ೯-೪೫ ಕ್ಕೆ ಗಾಡಿ ಬಡೋದೆಗೆಂದು ಸ್ಟೇಶನ್ ಬಿಟ್ಟಾಗಲೆ ನನ್ನ ಎದೆ ಹಾರುವುದು ನಿಂತಿತು.

*

ಮಹಾತ್ಮಾ ಸ್ನಾನ ಮಾಡಿ ಬಂದವಳು ಸಂಧ್ಯಾವಂದನೆ, ಪೂಜೆಗಳನ್ನು ಮುಗಿಸಿದಳು. ಆ ಮೇಲೆ ಅವಳು ನನ್ನ ಕೋಣೆಗೆ ಹೊರಟಳು.

ಮುದುಕ ಮಹಮ್ಮದ ಶಫಿ ಅವಳನ್ನು ತಡೆದು " ಭಾಯಿ ಬಡೋದೆಗೆ ಹೋಗಿದ್ದಾರೆ. ನಿಮ್ಮನ್ನು ಚಾಂದೋಡಕ್ಕೆ ಕರೆದೊಯ್ಯಲು ನನಗೆ ಹೇಳಿ ಹೋಗಿದ್ದಾರೆ" ಎಂದ.

" ಆದರೆ ಭಾಯಿ ನನ್ನೊಂದಿಗೆ ಬರುವವರಿದ್ದರಲ್ಲ. "

" ಹೌದು. ಆದರೆ ಅಗತ್ಯದ ಕೆಲಸಕ್ಕಾಗಿ ಅವರು ಬಡೋದೆಗೆ ಹೋಗಬೇಕಾಯಿತು. "

" ಹಾಗಾದರೆ ಅವರು ತಿರುಗಿ ಬರುವ ವರೆಗೆ ನಾನಿಲ್ಲಿಯೇ ಇರುತ್ತೇನೆ. "

" ಊಂಹುಂ. ಭಾಯಿ ಅಪ್ಪಣೆ ಮಾಡಿ ಹೋಗಿದ್ದಾರೆ. ನೀವು ಚಾಂದೋಡಕ್ಕೆ ಹೋಗದಿದ್ದರೆ ಪೋಲೀಸರಿಗೆ ತಿಳಿಸಲು ಹೇಳಿದ್ದಾರೆ. "

ಆಗ ಮಹಾತ್ಮಾ ಒಪ್ಪಿದಳು. ಎರಡು ಗಂಟೆಗೆ ಅವಳನ್ನು ಗಾಡಿಯಲ್ಲಿ ಸ್ಟೇಶನ್ನಿಗೆ ಕರೆದೊಯ್ದು ಅವಳು ಚಾಂದೋಡಕ್ಕೆ ತೆರಳಿದ್ದನ್ನು ಕಂಡು ಮಹಮ್ಮದ ತಿರುಗಿ ಬಂದ.

ಮನೆಯಿಂದ ಹೊರಡುವಾಗ ನನ್ನ ಪುಟ್ಟ ಹೆಂಡತಿಯನ್ನು ಬದಿಗೆ ಕರೆದು ಮಹಾತ್ಮಾ "ಅತ್ತಿಗೆ, ಭಾಯಿ ಬಂದಾಗ ನನ್ನ ಸಂದೇಶವನ್ನು ಅವರಿಗೆ ಮುಟ್ಟಿಸು. ನಾವಿಬ್ಬರೂ ಪುನಃ ಭೆಟ್ಟಿಯಾಗುತ್ತೇವೆ, ಮುಂದಿನ ಜನ್ಮದಲ್ಲಿಯಾದರೂ ಭೆಟ್ಟಿಯಾಗುತ್ತೇವೆ ಎಂದು ತಿಳಿಸು" ಎಂದಳು.

ದೇವರೇ ಕಾಪಾಡಬೇಕು.

ಅಲ್ಲಿಂದೀಚೆಗೆ ನನ್ನಲ್ಲಿ ಮೂವತ್ತೆರಡಂತಿರಲಿ ಒಂದೇ ಒಂದು ಒಳ್ಳೇ ಲಕ್ಷಣವೂ ಇರುವುದು ಬೇಡ ಎಂದು ನನಗನಿಸಿದೆ. *



# ನಗೆಮಲ್ಲಿಗೆ

ಒಬ್ಬ ನಿರುದ್ಯೋಗಿ ಯುವಕ ಓರ್ವ ಜಿಪುಣನೊಡನೆ ಒಂದು ಬಾರಿ, "ನಾನು ನಿಮಗೆ ಒಂದು ಸಾವಿರ ರೂಪಾಯಿ ಲಾಭದ ಮಾರ್ಗವನ್ನು ಹೇಳಿಕೊಡುತ್ತೇನೆ ಕೇಳಿ" ಎಂದ.

ಜಿಪುಣ ಸಂತೋಷದಿಂದ ಆತನನ್ನು ತಾನು ಕುಳಿತಿದ್ದ ಚಾಪೆಯ ಮೇಲೆ ಕುಳ್ಳಿರಿಸಿ "ಅದು ಹೇಗೆ?" ಎಂದು ಪ್ರಶ್ನಿಸಿದ.

ಯುವಕ- "ನಿಮಗೊಬ್ಬ ಮದುವೆಯ ವಯಸ್ಸಿಗೆ ಬಂದ ಮಗಳಿದ್ದಾಳಲ್ಲವೇ?"

ಜಿಪುಣ- "ಹೌದು."

ಯುವಕ- "ಅವಳ ಮದುವೆಯಲ್ಲಿ ವರದಕ್ಷಿಣೆ ಕೊಡಲೆಂದು ನೀವು ರೂ. ೫೦೦೦ ತೆಗೆದಿಟ್ಟದ್ದೀರಲ್ಲವೇ?"

ಜಿಪುಣ- "ಹೌದು. ಅದರಿಂದ ಏನಾಯಿತೀಗ?"

ಯುವಕ- "ಬೇಕಾದರೆ ನಾನವಳನ್ನು ಬರೇ ರೂ. ೪೦೦೦ ಕ್ಕೆ ಮದುವೆಯಾಗಲು ಸಿದ್ಧನಿದ್ದೇನೆ. ನಿಮಗೆ ಆಗ ರೂ. ೧೦೦೦ ಲಾಭವಾಗುವುದಲ್ಲವೇ?"

—ಸಚ್ಚಿದಾನಂದ ಹೆಗಡೆ

*

"ಅಪ್ಪಾ, ನಾನು ನನ್ನ ಮನಸ್ಸಿಗೆ ಬಂದಂತೆ ಮಾಡುವಷ್ಟು ದೊಡ್ಡವನಾಗುವುದು ಯಾವಾಗ!"

"ಏನೋ, ನನಗೆ ಗೊತ್ತಿಲ್ಲ. ಅಷ್ಟು ವಯಸ್ಸು ಇದುವರೆಗೆ ಯಾರಿಗೂ ಆಗಿಲ್ಲ."

*

ಅಮೇರಿಕಾದಲ್ಲಿ ಒಮ್ಮೆ ನಡೆದ ಕತೆಯಿದು. ಒಬ್ಬ ಪಾರ್ಕುಗಳಲ್ಲಿ ಉಪಯೋಗಿಸುವಂತಹ ಬೆಂಚೊಂದನ್ನು ಕ್ರಯಕ್ಕೆ ತೆಕ್ಕೊಂಡ. ಮತ್ತು ತನ್ನ ಮಿತ್ರನೊಡನೆ ಅದನ್ನು ಹೊತ್ತುಕೊಂಡು ಮುನಸಿಪಾಲಿಟಿಯ ಪಾರ್ಕಿನ ಒಂದು ಮೂಲೆಯಲ್ಲಿರಿಸಿ ಸ್ವಲ್ಪ ಹೊತ್ತು ಆರಾಮವಾಗಿ ಕುಳಿತುಕೊಂಡ. ಒಂದರ್ಧ ಗಂಟೆ ಕಳೆಯಲು ಆ ದಾರಿಯಾಗಿ ಪೋಲೀಸಿನವರಿಬ್ಬರು ಬರುವುದು ಕಾಣಿಸಿತು. ಕೂಡಲೇ ಆತ ತನ್ನ ಮಿತ್ರನನ್ನೆಬ್ಬಿಸಿದ. ಇಬ್ಬರೂ ಸೇರಿ ಬೆಂಚನ್ನು ಹೊತ್ತುಕೊಂಡು ಪಾರ್ಕಿನಿಂದ ಹೊರ ಹೊರಡಲು ಪ್ರಾರಂಭಿಸಿದರು. ಪೋಲೀಸಿನವರು ಇಬ್ಬರನ್ನೂ ಗದರಿಸಿ ಸ್ಟೇಶನ್ನಿಗೆ ಕರೆದುಕೊಂಡು ಹೋದರು. ಅಲ್ಲಿ ಸ್ವಲ್ಪ ಹೊತ್ತು ಜೋರಾಗಿ ವಿಚಾರಣೆ ನಡೆಯಿತು. ಅದು ವರೆಗೂ ಮಾತಾಡದೆ ಕುಳಿತಿದ್ದ ಆತ, ಮೆಲ್ಲನೆ ಜೇಬಿನಿಂದ ಬೆಂಚು ಖರೀದಿ ಮಾಡಿದಾಗ ಪಡೆದಿದ್ದ ರಶೀದಿಯನ್ನು ತೆಗೆದು ಇನ್ಸ್‌ಪೆಕ್ಟರನ ಮುಂದಿಟ್ಟ. ಇನ್ಸ್‌ಪೆಕ್ಟರ್ ಪೆಚ್ಚಾಗಿ ಇಬ್ಬರನ್ನೂ ಹೊರಗೆ ಕಳಿಸಿ ಪೋಲೀಸಿನವರನ್ನು ಗದರಿಸಲು ಪ್ರಾರಂಭಿಸಿದ. ಇದೇ ರೀತಿ ಹಲವಾರು ಪಾರ್ಕುಗಳಲ್ಲಿ ಆತ ತನ್ನ ಬೆಂಚನ್ನು ಹೊತ್ತುಕೊಂಡು ಗಲಾಟೆ ನಡೆಸಿದ್ದನಂತೆ.

— ಡಿ. ಎನ್. ಶಂಕರಭಟ್ಟ

*

"ಹಣ ಗಳಿಸಲು ಸಾವಿರಾರು ಮಾರ್ಗಗಳಿರೂ ಅವುಗಳಲ್ಲಿ ಒಂದೇ ಒಂದು ಮಾತ್ರ ಪ್ರಾಮಾಣಿಕ ಹಾದಿಯಾಗಿರುತ್ತದೆ."

"ಹೌದೇನು? ಯಾವುದದು?"

"ಹಾಂ! ನಿನಗೆ ಆ ಮಾರ್ಗ ಗೊತ್ತಿಲ್ಲವೆಂದು ನನಗೆ ಖಾತ್ರಿಯಿತ್ತು."

# ಇದುವೆ ಜೀವ, ಇದು ಜೀವನ

ಸಹ್ಯಾದ್ರಿಯ ಕೊಂಕಣಭಾಗದ ತಪ್ಪಲಿನಲ್ಲಿ ಕೊಯನಾ ನದಿ ಯೋಜನೆಯ ಸರ್ವೆ ಕೆಲಸ ನಡೆದಿತ್ತು. ಆ ಕೆಲಸಕ್ಕೆ ಕೂಲಿಗಳ ಅಭಾವ ಬಹಳವಾಗಿ ಕೆಲಸ ನಿಲ್ಲುವ ಸ್ಥಿತಿಗೆ ಬಂದಿತು. ನಾವು ಕೂಲಿಗಳನ್ನು ಹುಡುಕಿಕೊಂಡು ಉರಿ ಬಿಸಿಲಿನಲ್ಲಿ ಎರಡು ಮೂರು ಹಳ್ಳಿಗಳಿಗೆ ತಿರುಗಿದೆವು. ಏಳೆಂಟು ಮೈಲು ಸುತ್ತಿದರೂ ಒಬ್ಬ ಕೂಲಿಯೂ ಸಿಕ್ಕಲಿಲ್ಲ. ಐನೂರು-ಆರು ನೂರು ಅಡಿ ಎತ್ತರದ ಬೆಟ್ಟದ ಮೇಲೆ ಒಂದು ಗೊಲ್ಲರ ಹಳ್ಳಿ ಇತ್ತು. ಅಲ್ಲಿಗಾದರೂ ಹೋಗಿ ನೋಡಿಕೊಂಡು ಬರೋಣವೆಂದು ನಾವು ನಾಲ್ಕೈದು ಜನ ಉರಿಬಿಸಿಲಿನಲ್ಲಿ ಬೆಟ್ಟವನ್ನು ಹತ್ತಿದೆವು. ಸ್ವಲ್ಪ ದೂರದಲ್ಲೆ ಒಂದು ಮರದ ಕೆಳಗೆ ಒಬ್ಬ ಮನುಷ್ಯ ಕುಳಿತಿದ್ದುದನ್ನು ನೋಡಿದೆವು. ನಮಗೆ ಬೆಟ್ಟ ಹತ್ತಿದ ಆಯಾಸ ಮರೆತು ಮರು ಭೂಮಿಯಲ್ಲಿ ನೀರು ಕಾಣಿಸಿದ ಹಾಗಾಯಿತು. ನಾವು ಆ ಮನುಷ್ಯನತ್ತ ಧಾವಿಸಿದೆವು. ಅವನು ನಮ್ಮನ್ನು ನೋಡಿ "ಕುಳಿತುಕೊಳ್ಳಿ, ಬಿಸಿಲು ಹೆಚ್ಚಾಗಿದೆ. ತಮಗೆ ಏನು ಬೇಕಾಗಿತ್ತು?" ಎಂದು ಆದರದಿಂದ ಕೇಳಿದ. ನಾವು ಆತುರದಿಂದ "ನಮ್ಮ ಕೆಲಸಕ್ಕೆ ಬಾ, ಬೆಳಿಗ್ಗೆಯಿಂದ ಮಧ್ಯಾಹ್ನ ಒಂದು ಗಂಟೆಯ ವರೆಗೆ ಮಾತ್ರ ಕೆಲಸಕ್ಕೆ ಒಂದೂವರೆ ರೂಪಾಯಿ ಸಂಬಳ ಕೊಡುತ್ತೇವೆ" ಎಂದೆವು. ಅವನು ಶಾಂತವಾಗಿ "ಕೆಲಸ ಏಕೆ ಮಾಡಬೇಕು? ಮತ್ತು ಹಣವೇಕೆಬೇಕು?" ಎಂದು ಕೇಳಿದ. ನಾವು ಅವಾಕ್ಕಾಗಿ "ಜೀವನೋಪಾಯಕ್ಕೆ ಹಣ ಬೇಡವೇ?" ಎಂದು ಕೇಳಿದೆವು. ಅವನು ಅಲ್ಲೇ ಸಮೀಪದಲ್ಲಿ ಮೇಯುತ್ತಿದ್ದ ಮೇಕೆಯನ್ನು ತೋರಿಸಿ "ಇದು ದಿನಾಲೂ ಹಾಲು ಕೊಡುತ್ತದೆ. ಅದೇ ನನ್ನ ಆಹಾರ. ಯಾವಾಗ ಈ ಎರಡು ತುಂಡು ಬಟ್ಟೆ ಹರಿಯುತ್ತದೋ ಅಥವಾ ಯಾವಾಗ ಈ ಮೇಕೆ ಹಾಲನ್ನು ಕೊಡುವುದಿಲ್ಲವೋ ಮತ್ತು ಯಾವಾಗ ನಾನು ಬೇರೆ ಮೇಕೆಯನ್ನು ಕೊಂಡುಕೊಳ್ಳಬೇಕಾಗುತ್ತದೋ ಆಗ ಒಂದು ನಾಲ್ಕು ದಿವಸ ಕೆಲಸ ಮಾಡುತ್ತೇನೆ" ಎಂದು ಹೇಳಿ ಸಹ್ಯಾದ್ರಿಯ ನೈಸರ್ಗಿಕ ದೃಶ್ಯಗಳತ್ತ ಕಣ್ಣು ಹೊರಳಿಸಿದ. ನಾವು ಆಶ್ಚರ್ಯ ನಿರಾಶೆಗಳಿಂದ ಹಿಂತಿರುಗಿದೆವು.

—ಎಚ್. ಬಿ. ಎಸ್. ಮೂರ್ತಿ

ಪೋಲೀಸು ಇಲಾಖೆಯಲ್ಲಿ ಕಾನ್‌ಸ್ಟೇಬಲ್‌ಗಳಿಗೆಲ್ಲ ಮೇಲಧಿಕಾರಿಗಳ ನಂಬುಗೆಯನ್ನು ಪಡೆಯುವುದೆಂದರೆ ಬಹಳ ಹೆಮ್ಮೆ. ನಾನು ಸಬ್ ಇನ್ಸ್‌ಪೆಕ್ಟರ್ ಆಗಿದ್ದಾಗ ನಡೆದ ಒಂದು ಘಟನೆಯನ್ನು ನಾನೆಂದೂ ಮರೆಯುವಂತಿಲ್ಲ. ನನ್ನ ಕೈ ಕೆಳಗೆ ೨೪ ಮಂದಿ ಕಾನ್‌ಸ್ಟೇಬಲ್‌ಗಳಿದ್ದರು. ಅವರೆಲ್ಲರೂ ಅಷ್ಟೆ-ನಾನೇನಾದರೂ ಮಹತ್ವದ ಕೆಲಸವನ್ನು ಅವರಿಗೆ ವಹಿಸಿಬಿಟ್ಟರೆ ಸರಿ, ಬಲೂನಿನಂತಾಗಿ ಬಿಡುತ್ತಿದ್ದರು.

ಒಂದು ದಿನ ನನ್ನ ಗೆಳೆಯನಿಂದ ನಾ.

ರಾಜಣ್ಣನವರು ಬರೆದ "ವಜ್ರದುಂಗುರ" ಕಾದಂಬರಿಯನ್ನು ಮನೆಗೆ ಓದಲು ತೆಗೆದುಕೊಂಡು ಹೋಗಿದ್ದೆ. ಅವನು ಅದನ್ನು ಒಂದು ದಿನದ ಮಟ್ಟಿಗೆ ಮಾತ್ರ ನನಗೆ ಕೊಟ್ಟಿದ್ದ. ಏನೋ ಮರುದಿನ 'ಡ್ಯೂಟಿ'ಗೆ ಹಾಜರಾಗಲು ಹೋದಾಗ ಪುಸ್ತಕ ತೆಗೆದುಕೊಂಡುಹೋಗಲು ಮರೆತಿದ್ದೆ. ನನ್ನ ಗೆಳೆಯ ಪುಸ್ತಕಕ್ಕಾಗಿ ನನ್ನನ್ನು ಹುಡುಕಿಕೊಂಡು ಸ್ಟೇಶನ್ನಿಗೇ ಬಂದ. ಆದುದರಿಂದ ಒಬ್ಬ ಕಾನ್‌ಸ್ಟೇಬಲ್‌ನನ್ನು ಕರೆದು ಮನೆಯಿಂದ ವಜ್ರದುಂಗುರವನ್ನು ತರುವಂತೆ ಹೇಳಿದೆ. ಪಾಪ, ಅವನು ಹಿಗ್ಗಿ ಹೋದ. "ವಜ್ರದುಂಗುರದಂತಹ ಮಹತ್ವದ ವಸ್ತುವನ್ನು ನನ್ನಲ್ಲಿ ತರಹೇಳಿದರಲ್ಲ" ಎಂದವನಿಗೆ ಸಂತೋಷ. ಅವನು ಅದೇ ಉಬ್ಬಿನಿಂದ ನೆಟ್ಟಗೆ ನನ್ನ ಮನೆಗೆ ಹೋಗಿ ನನ್ನವಳನ್ನು ಕರೆದು ಬಹು ಮೆಲ್ಲಗೆ, "ವಜ್ರದುಂಗುರ ಬೇಕಂತಮ್ಮ" ಎಂದು ಬಹಳ ಗುಟ್ಟಿನ ವಿಷಯವನ್ನು ಹೇಳುವವನಂತೆ ಹೇಳಿದನಂತೆ. ಪಾಪ! ಓದು ಬರಹ ಬಾರದ ಅವಳಿಗೇನು ಗೊತ್ತು ಪುಸ್ತಕದ ಕತೆ! ಆದರೆ ಅವಳಲ್ಲಿ ವಜ್ರದುಂಗುರವಾದರೋ ಎಲ್ಲಿ? ಕಡೆಗೆ ನನ್ನ ಮಗಳು ವಿಚಾರಿಸಿ, "ವಜ್ರದುಂಗುರ" ಪುಸ್ತಕವನ್ನು ಕೊಟ್ಟಾಗ ಮಾತ್ರ ಆವನ ಉತ್ಸಾಹ ಝುರ್ರನೆ ಇಳಿಯಿತಂತೆ.

—ಮುರಳಿ, ಮೈಸೂರು

೧೯೪೦ ರಲ್ಲಿ ನಮ್ಮೂರಿನ ಶಾಲೆಗೆ ಓರ್ವ ಹೊಸ ಅಧ್ಯಾಪಕರು ಬಂದರು. ಅವರು ನಿತ್ಯ ಸಾಯಂಕಾಲ ಮನೆಗೆ ಹೋಗುವವರಾದರೂ ಮಧ್ಯಾಹ್ನದ ಊಟಕ್ಕೆ ಶಾಲೆಯ ಹತ್ತಿರದ ಒಬ್ಬರ ಮನೆಯಲ್ಲಿ ವ್ಯವಸ್ಥೆ ಮಾಡಿಕೊಂಡರು. ಅವರು ಕ್ಲಿಷ್ಟ ಶಬ್ದಗಳನ್ನುಪಯೋಗಿಸಿ ಗಂಭೀರವಾಗಿ ಮಾತನಾಡುವ ಪ್ರಕೃತಿಯವರು. ಪ್ರಥಮ ದಿವಸ ಮಧ್ಯಾಹ್ನ ಊಟಕ್ಕೆ ಕುಳಿತಾಗ, ಆ ಮನೆಯ ಹೆಂಗಸು, ಊಟ ಬಡಿಸಿದ ನಂತರ ಔಪಚಾರಿಕವಾಗಿ "ಮಾಸ್ಟ್ರೆ, ನಮ್ಮಲ್ಲಿ ವಿಶೇಷದ ಅಡಿಗೆಯಿಲ್ಲ; ನಿಮಗೆ ಊಟ ರುಚಿಯಾಯಿತೋ ಇಲ್ಲವೋ'' ಎಂದರು. ಅದಕ್ಕೆ ಮಾಸ್ತರು ಗಂಭೀರವಾಗಿ "ಏನಿಲ್ಲ, ಊಟ ಪರಿಷ್ಕಾರವಾಗಿದೆ" ಅಂತ ಹೇಳಿ ಶಾಲೆಗೆ ಹೋದರು.

ಮಾರನೆಯ ದಿನ ಉಪಾಧ್ಯಾಯರು ಊಟಕ್ಕೆ ಕುಳಿತಾಗ ಅವರಿಗೆ ಹಾಕಿದ ಪದಾರ್ಥಗಳೆಲ್ಲಾ ಬಹಳ ಸಪ್ಪೆಯಾಗಿದ್ದವು. ಹೊಸಬರಾದ ಅವರು ಊಟವನ್ನು ದೂಷಿಸದೆ ಹೇಗೋ ಕಷ್ಟಪಟ್ಟು ಉಣ್ಣುತ್ತಿದ್ದರು. ಆಗ ಮನೆಯೊಡತಿ ಬಂದು "ಮಾಸ್ಟ್ರೆ, ನಿನ್ನೆ ನೀವು ಊಟ ಬಹಳ ಖಾರವಾಗಿದೆ ಅಂದಿದ್ದಿರಿ. ಆದಕ್ಕೆ ಇವತ್ತು ಕೊಂಚ ಖಾರ ಕಡಿಮೆ ಹಾಕಿದ್ದೇನೆ. ಇವತ್ತು ನಿಮಗೆ ಸರಿಯಾಗಿರಬಹುದು. ಅಲ್ಲವೆ?'' ಎಂದು ಕೇಳಿದರು. ಕೂಡಲೆ ಉಪಾಧ್ಯಾಯರಿಗೆ ಜ್ಞಾನೋದಯವಾಯಿತು: ತಾವಿಂದು ಉಣ್ಣುತ್ತಿರುವ ಸಪ್ಪೆ ಊಟವು ತಮ್ಮ ಭಾಷಾ ಪ್ರವೀಣತೆಯ ಫಲವೆಂದು. ಅಂದಿನಿಂದ ಉಪಾಧ್ಯಾಯರ ಪಾಂಡಿತ್ಯಪ್ರದರ್ಶನ ಶಾಲೆಯಿಂದ ಹೊರಗೆ ಕಾಣಲಿಲ್ಲ.

—ಎಚ್. ಶಿವಾನಂದ ಹಂದೆ



ಇದು ನಿಜವಾಗಿ ಒಂದೇ ರೋಗವಲ್ಲ—
ಹಲವು ರೋಗಗಳು

# ರಕ್ತದ ಒತ್ತಡ: ಹೊಸ ಶೋಧಗಳು

### ರಕ್ತದ ಒತ್ತಡ ಎಂದರೇನು?

ರಕ್ತದ ಒತ್ತಡ ಎನ್ನುವುದಕ್ಕಿಂತ ಇದನ್ನು ರಕ್ತದ ಅತಿ ಒತ್ತಡ ಎನ್ನುವುದು ಸರಿಯಾದೀತು. ರಕ್ತವು ಹೃದಯದ ಕುಗ್ಗುವ ಹಿಗ್ಗುವ ಪಂಪಿನಂಥ ಕ್ರಿಯೆಯಿಂದ ನಮ್ಮ ಶುದ್ಧ ರಕ್ತನಾಳಗಳಲ್ಲಿ ಒತ್ತಲ್ಪಟ್ಟು ಚಲಿಸುತ್ತದೆ. ಹೃದಯವು ಕುಗ್ಗಿ ರಕ್ತವನ್ನು ತಳ್ಳಿದಾಗ ನಾಳಗಳಲ್ಲಿ ಒತ್ತಡ ಸ್ವಲ್ಪ ಹೆಚ್ಚುತ್ತದೆ ಮತ್ತು ಹೃದಯವು ಹಿಗ್ಗಿ "ವಿಶ್ರಾಂತಿ" ತೆಗೆದುಕೊಳ್ಳುವಾಗ ಒತ್ತಡ ತುಸು ಕಡಿಮೆಯಾಗುತ್ತದೆ. ಮೊದಲಿನದಕ್ಕೆ ಸಿಸ್ಟೋಲಿಕ್ ಒತ್ತಡ ಮತ್ತು ಎರಡನೆಯದಕ್ಕೆ ಡಾಯಸ್ಟೋಲಿಕ್ ಒತ್ತಡ ಎಂದು ಹೆಸರು. ಇದನ್ನು ಅಳೆಯಲು ಒತ್ತಡ ಮಾಪಕ ಉಪಕರಣವಿದೆ. ರಕ್ತದ ಒತ್ತಡದ ಅಂಕೆಗಳು ಈ ಉಪಕರಣದಲ್ಲಿ ಪಾದರಸ ಎಷ್ಟು ಮಿಲಿಮಿಟರ್ ಎತ್ತರಕ್ಕೆ ತಳ್ಳಲ್ಪಡುವುದು ಎಂಬುದನ್ನು ತೋರಿಸುತ್ತವೆ.

ಸಾಮಾನ್ಯವಾಗಿ ನಿರೋಗಿ ಮನುಷ್ಯನ ರಕ್ತದ ಒತ್ತಡ ಸಿಸ್ಟೋಲಿಕ್ ೧೨೦ ಮತ್ತು ಡಾಯಸ್ಟೋಲಿಕ್ ೮೦ ಇರಬೇಕೆಂದು ಲೆಕ್ಕ. (ಇದನ್ನು ೧೨೦/೮೦ ಎಂದು ಬರೆಯುತ್ತಾರೆ.) ಉಪಕರಣವು ಇದಕ್ಕಿಂತ ಬಹಳ ಹೆಚ್ಚು ಅಂಕೆಗಳನ್ನು ತೋರಿಸಿದರೆ ಅದನ್ನು "ರಕ್ತದ ಅತಿ ಒತ್ತಡ" ಅಥವಾ ಕೇವಲ "ರಕ್ತದ ಒತ್ತಡ" ಎನ್ನುವುದು ರೂಢಿ. ಆದರೆ ನಾವು ಉತ್ತೇಜಿತರಾದಾಗ ಅಥವಾ ಬಲವಾದ ಚಟುವಟಿಕೆಯಲ್ಲಿದ್ದಾಗ ರಕ್ತದ ಒತ್ತಡ ತಾತ್ಕಾಲಿಕವಾಗಿ ಹೆಚ್ಚುತ್ತದೆಂಬುದನ್ನು ಮರೆಯಬಾರದು. ಆದ್ದರಿಂದ ಯಾವಾಗಾದರೊಮ್ಮೆ ೧೪೦/೯೫ ಒತ್ತಡ ಕಂಡುಬಂದರೆ ಅದು ರಕ್ತದ ಒತ್ತಡವಲ್ಲ. ಬದಲಿಗೆ ವರ್ಷದುದ್ದಕ್ಕೂ ೧೬೦/೯೦ ಅಥವಾ ೧೬೦/೧೦೦ ಒತ್ತಡ ಕಾಣಿಸಿಕೊಂಡರೆ ನಿಮಗೆ ಬಹುಶಃ ರಕ್ತದ ಒತ್ತಡ ರೋಗ ಪ್ರಾರಂಭವಾಗಿದೆಯೆಂದು ಡಾಕ್ಟರರು ಎಣಿಸುತ್ತಾರೆ.

### ರಕ್ತದ ಒತ್ತಡದ ಅಪಾಯಕರ ಮಟ್ಟ ಯಾವುದು?

ನಿಗದಿಯಾಗಿ ಹೇಳಲು ಬಾರದು. ಇದು ಅವರವರ ಪ್ರಕೃತಿಯನ್ನು ಅವಲಂಬಿಸಿದ ಮಾತು. ರಕ್ತದ ಒತ್ತಡ ರೋಗವನ್ನು ಅಂಕೆಗಳಿಂದ ಅಳೆಯದೆ ಅದು ಶರೀರದ ರಕ್ತವಾಹಿನಿಗಳಿಗೆ ಉಂಟುಮಾಡುವ ಧಕ್ಕೆಯಿಂದ ಅಳೆಯಬೇಕಾಗುತ್ತದೆ. ಕೆಲವರು, ವಿಶೇಷವಾಗಿ ಮುಟ್ಟು ನಿಂತ ಹೆಂಗಸರು, ೧೮೦ ರಷ್ಟು ಹೆಚ್ಚು ಒತ್ತಡವಿದ್ದರೂ ಯಾವ ಕಷ್ಟವೂ ಇಲ್ಲದೆ ೭೦-೮೦

"ಸಾಯನ್ಸ್ ಡೈಜೆಸ್ಟ್" ಮತ್ತು "ಟುಡೇಸ್ ಹೆಲ್ತ್" ಆಧಾರದಿಂದ

ವರ್ಷ ಬಾಳುವುದುಂಟು.

ಉಳಿದವರಿಗೆ ರಕ್ತದ ಒತ್ತಡದಿಂದ ಸಾವ ಕಾಶವಾಗಿ ರಕ್ತವಾಹಿನಿಗಳಿಗೆ ಧಕ್ಕೆ ಹೆಚ್ಚಾಗಿ ಆಯುಷ್ಯ ಕ್ಷೀಣವಾಗುತ್ತದೆ. ಇದಕ್ಕೆ "ಹಳೇ (ಕ್ರಾನಿಕ್) ರಕ್ತದ ಒತ್ತಡ" ಎನ್ನುತ್ತಾರೆ. ಅವರು ಕೊನೆಗೆ ಮಿದುಳಿನಲ್ಲೋ ಹೃದಯ-ದಲ್ಲೊ ರಕ್ತದ ಗಟ್ಟಿ ಸಿಕ್ಕಿಕೊಂಡು ಇಲ್ಲವೆ ರಕ್ತಸ್ರಾವ ವಾಗಿ ಸಾಯುತ್ತಾರೆ.

ಇನ್ನು ಕೆಲವರಿಗೆ ಮೂತ್ರ ಪಿಂಡಗಳು ಕೆಟ್ಟು ಅಥವಾ ಹೃದಯ ದುರ್ಬಲವಾಗಿ ಅವು ಕೊನೆಗೆ ಕೆಲಸ ಮಾಡಲಾರದೆ ನಿಂತುಹೋಗುವುದರಿಂದ ಮರಣವೊದಗಬಹುದು.

ಇನ್ನೊಂದು ತರಹದ ರಕ್ತದ ಒತ್ತಡದಲ್ಲಿ ೪೦-೫೦ ವಯಸ್ಸಿನೊಳಗೇ ರೋಗ ರಭಸದಿಂದ ಮುಂದೊತ್ತಿ ಒತ್ತಡ ೨೦೦, ೨೫೦, ೩೦೦ ರ ವರೆಗೂ ಏರಿ ಕೆಲ ವಾರ ಅಥವಾ ತಿಂಗಳುಗಳ ಅವಧಿಯಲ್ಲಿ ರೋಗಿಯನ್ನು ಕೊಲ್ಲಬಹುದು ಇಲ್ಲವೆ ಯಾವ ಕೆಲಸಕ್ಕೂ ಬಾರದಂತೆ ಮಾಡಿ ಬಿಡಬಹುದು. ಇದಕ್ಕೆ "ಉಗ್ರ ರಕ್ತದ ಒತ್ತಡ" ಎಂದು ಹೆಸರು.

### ರಕ್ತದ ಒತ್ತಡಕ್ಕೆ ಕಾರಣವೇನು ?

ಹಲವು ಕಾರಣಗಳಿವೆ. ತೀರ ಈಚೆಗಿನ ಸಂಶೋಧನೆಗಳ ಫಲವಾಗಿ ರೋಗವಿಜ್ಞಾನಿಗಳು ಈಗ ರಕ್ತದ ಒತ್ತಡವು ನಿಜವಾಗಿ ಒಂದೇ ರೋಗವಲ್ಲ, ಹಲವು ರೋಗಗಳು ಎಂದು ನಂಬ ತೊಡಗಿದ್ದಾರೆ.

ಅವರು ರಕ್ತದ ಒತ್ತಡದ ಕಾರಣಗಳನ್ನು ನಾಲ್ಕು ಪ್ರಮುಖ ವಿಭಾಗಗಳಾಗಿ ಮಾಡಿದ್ದಾರೆ:

೧. ಹೃತ್-ಧಮನಿಗಳಿಗೆ ಸಂಬಂಧಿಸಿದ್ದು. ಉದಾ - ಮಹಾಪಧಮನಿ ( ಎಯಾರ್ಟ ) ಯಲ್ಲಿ ತಡೆಯುಂಟಾಗುವುದು.

೨. ಗ್ರಂಥಿಗಳಿಗೆ ಸಂಬಂಧಿಸಿದ್ದು. ಉದಾ- ಆಡ್ರೆನಾಲ್ ಗ್ರಂಥಿಯಲ್ಲಿ ವ್ರಣಗಳಾಗುವುದು.

೩. ನರವಿಕಾರಕ್ಕೆ ಸಂಬಂಧಿಸಿದ್ದು.

೪. ಮೂತ್ರಪಿಂಡಗಳ ದೋಷಕ್ಕೆ ಸಂಬಂಧಿಸಿದ್ದು.

### ಮೂತ್ರಪಿಂಡಗಳ ವಿಕಾರವು "ಉಗ್ರ" ರಕ್ತದ ಒತ್ತಡದಲ್ಲಿ ದೊಡ್ಡ ಪಾತ್ರ ವಹಿಸುತ್ತದೆಂಬುದು ನಿಜವೆ ?

ಹೌದು. ಈಚೆಗಿನ ಸಂಶೋಧನೆಗಳು ಮತ್ತಾವ ಕಾರಣಕ್ಕಿಂತಲೂ ಮೂತ್ರಪಿಂಡ ವಿಕಾರಗಳು ಹೆಚ್ಚು ರಕ್ತದ ಒತ್ತಡ ಪ್ರಕರಣ ಗಳಿಗೆ ಕಾರಣವಾಗಿವೆಯೆಂಬುದಕ್ಕೆ ಪುಷ್ಟಿ ಕೊಟ್ಟಿವೆ. ಚಿಕಾಗೋನಲ್ಲಿ ಉಗ್ರ ರಕ್ತದ ಒತ್ತಡದಿಂದ ಸತ್ತ ೨೯ ರಿಂದ ೭೮ ವರೆಗಿನ ವಯಸ್ಸಿನ ೩೫ ರೋಗಿಗಳ ಮರಣೋತ್ತರ ಪರೀಕ್ಷೆ ಮಾಡಿದಾಗ ಅವರಲ್ಲಿ ಪ್ರತಿಯೊಬ್ಬನಿಗೂ ಒಂದಲ್ಲ ಒಂದು ಬಗೆಯ, ಕೆಲ ವೇಳೆ ಹಲವು ಬಗೆಯ, ಮೂತ್ರಪಿಂಡ ರೋಗಗಳಿದ್ದದ್ದು ಸಿದ್ಧವಾಯಿತು. ಅವು ನಾನಾ ಪ್ರಕಾರದ ರೋಗಾಣುಗಳಿಂದ ಉಂಟಾದ ವಿಕಾರಗಳೇ ಆಗಿದ್ದವು. ರೋಗಾಣುಗಳು ಅಲ್ಲಿ ಹೇಗೆ ತಲುಪಿದವೆಂದು ತಿಳಿದಿಲ್ಲ. ರಕ್ತದ ಮೂಲಕ ಹೋಗಿರಬಹುದು ಅಥವಾ ಮೂತ್ರಾಂಗಗಳ ಮೂಲಕ ಸಾಗಿರಬಹುದು; ಗಂಟಲಿನ ಟಾನ್ಸಿಲಿನಲ್ಲಿ ಸೇರಿಕೊಂಡ ರೋಗಾಣುಗಳು ಕೂಡ ಅಲ್ಲಿಗೆ ತಲುಪಿರಬಹುದು.

ಮೂತ್ರಪಿಂಡಗಳಲ್ಲಿ ರಕ್ತದ ಒತ್ತಡವನ್ನು ಹೆಚ್ಚಿಸಲು ಪ್ರೇರಣೆ ಕೊಡುವ ಆಂಜಿಯೋಟೆನ್ಸಿನ್ ಎಂಬ ಪದಾರ್ಥವನ್ನು ರಕ್ತದಲ್ಲಿ ಹುಟ್ಟುವಂತೆ ಮಾಡುವ ಒಂದು ಎಂಜೈಮು (enzime) ಹುಟ್ಟುತ್ತದೆಂದು ಸಂಶೋಧಕರು ನಂಬಿದ್ದಾರೆ. ಆಂಜಿಯೋಟೆನ್ಸಿನನ್ನು ಮನುಷ್ಯರಿಗೆ ಇಂಜಕ್ಷನ್ ಕೊಟ್ಟಾಗ ರಕ್ತದ ಒತ್ತಡ ಪ್ರಚಂಡವಾಗಿ ಏರುತ್ತದೆ. ಸಾಮಾನ್ಯವಾಗಿ ಈ ಪದಾರ್ಥವನ್ನು ನಾಶಮಾಡುವ ಶಕ್ತಿಯೂ

ಮೂತ್ರಪಿಂಡಕ್ಕೆ ಇದೆ. ಆದರೆ ರುಗ್ಣವಾದ ಮೂತ್ರಪಿಂಡವು ಈ ಶಕ್ತಿಯನ್ನು ಹೇಗೋ ಕಳೆದುಕೊಳ್ಳುತ್ತಿರಬೇಕೆಂದೂ ಆದ್ದರಿಂದ ರಕ್ತದ ಒತ್ತಡ ಏರುತ್ತದೆಂದೂ ಊಹಿಸಿದ್ದಾರೆ.

**ರಕ್ತದ ಒತ್ತಡದಲ್ಲಿ ಆನುವಂಶಿಕತೆಯ ಪಾತ್ರವೇನು?**

ಸ್ವಲ್ಪವಾದರೂ ಪಾತ್ರವಿದ್ದಂತೆ ಕಾಣುತ್ತದೆ. ಲಂಡನ್ನಿನ ೩೦೦ ಬಸ್ ಡ್ರೈವರರ ರಕ್ತದ ಒತ್ತಡವನ್ನೂ ಅವರ ಪೂರ್ವಜರ ಚರಿತ್ರೆಯನ್ನೂ ಪರಿಶೀಲಿಸಿದಾಗ ರಕ್ತದ ಒತ್ತಡವಿಲ್ಲದವರ ತಂದೆ ತಾಯಿಗಳು ೬೫ ಅಥವಾ ಅದಕ್ಕೂ ಹೆಚ್ಚು ಬದುಕಿದ ದೀರ್ಘಾಯುಷಿಗಳಾಗಿದ್ದರೆಂದೂ ರಕ್ತದ ಒತ್ತಡದಿಂದ ಬಳಲುವವರ ತಂದೆ ತಾಯಿಗಳಲ್ಲೊಬ್ಬರಾದರೂ ೪೦ ರಿಂದ ೬೪ ನೇ ವಯಸ್ಸಿನೊಳಗೆ ಸತ್ತಿದ್ದರೆಂದೂ ಕಂಡು ಬಂತು. ಆದ್ದರಿಂದ ರಕ್ತದ ಒತ್ತಡದ ಪ್ರಶ್ನೆಯನ್ನು ಬಿಡಿಸುವಾಗ ಇಂದು ಡಾಕ್ಟರರು ರೋಗಿಯ ಇತಿಹಾಸದೊಡನೆ ಅವನ ಪೂರ್ವಜರ ಇತಿಹಾಸವನ್ನೂ ವಿಚಾರಿಸಿಕೊಳ್ಳಬೇಕಾಗುವುದು.

**ಇಂದಿನ ಜೀವನದ ಚಿಂತೆ-ಕಾತರಗಳ ಒತ್ತಡವೇ ಇಂದು ಹಿಂದಿಗಿಂತ ಹೆಚ್ಚು ರಕ್ತದ ಒತ್ತಡದ ರೋಗಿಗಳುಂಟಾಗಲು ಕಾರಣವೆಂಬುದು ನಿಜವೆ?**

ಚಿಂತೆ ಕಾತರಗಳ ಒತ್ತಡವು ರೋಗವಿದ್ದಲ್ಲಿ ಅದು ಉಲ್ಬಣಿಸಲು ಕಾರಣವಾಗುವುದು ನಿಜ. ಆದರೂ ರೋಗಿಗಳ ಸಂಖ್ಯೆ ಹೆಚ್ಚಾಗಲು ಅದೇ ಕಾರಣವೆಂಬ ನಂಬಿಕೆಗೆ ಆಧಾರವಿಲ್ಲ. ಆಯಾ ಕಾಲದ ಜನರಿಗೆ ಅಂದಂದಿನ ಜೀವನದ ಒತ್ತಡಗಳು ಇದ್ದೇ ಇದ್ದವೆಂದು ಕ್ಲೀವ್‌ಲ್ಯಾಂಡ್ ಕ್ಲಿನಿಕಲ್ ಫೌಂಡೇಶನ್ನಿನ ಡಾ. ಅರ್ವಿನ್ ಪೇಜರು ನಮ್ಮ ಗಮನಕ್ಕೆ ತಂದುಕೊಟ್ಟಿದ್ದಾರೆ. ಆದರೆ ಒತ್ತಡವೆಂಬುದು ಬಲು ಅಸ್ಪಷ್ಟ ಶಬ್ದ. ಒಬ್ಬರಿಗೆ ಒತ್ತಡವಾಗಿದ್ದುದನ್ನು ಇನ್ನೊಬ್ಬರು ಲಘುವಾಗಿ ತೆಗೆದುಕೊಳ್ಳಬಹುದು. ಆದ್ದರಿಂದ ಇಲ್ಲಿಯೂ ಅವನವನ ಪ್ರಕೃತಿಯೇ ಮುಖ್ಯ. ಅಂದಾಕ್ಷಣ ಚಿಂತೆ ಕಾತರಗಳ್ ಯಾರಿಗಾದರೂ ಹಿತವುಂಟುಮಾಡುತ್ತವೆಂದು ಯಾರೂ ತಿಳಿದುಕೊಳ್ಳಬಾರದು.

**ಸುಲಭವಾಗಿ ಉದ್ವೇಗಗೊಳ್ಳುವ ಮತ್ತು ಅತಿಶಯ ಚಟುವಟಿಕೆಯುಳ್ಳ ಜನರು ರಕ್ತದ ಒತ್ತಡಕ್ಕೆ ಹೆಚ್ಚು ತುತ್ತಾಗುವರೆಂಬುದು ನಿಜವೆ?**

ಡಾ. ಪೇಜರ ಅಭಿಪ್ರಾಯದಲ್ಲಿ ಇಂದೂ ಸಂದಿಗ್ಧವಾದದ್ದೇ. ಅನೇಕ ಉದ್ವೇಜನೀಯ ಮತ್ತು ಅತಿರೇಕ ಕ್ರಿಯಾಶೀಲ ಜನರು ರಕ್ತದ ಒತ್ತಡಕ್ಕೆ ತುತ್ತಾಗದಿರುವುದೂ ಅನುಭವಸಿದ್ಧವಾಗಿದೆ. ವಸ್ತುಸ್ಥಿತಿಯೆಂದರೆ, ಆಗಲೆ ಹೇಳಿದ ಹಾಗೆ, ರಕ್ತದ ಒತ್ತಡದ ಕಾರಣಗಳಲ್ಲಿ ನರಗಳ ದೋಷವು ಒಂದು ಮಾತ್ರ; ಅಧಿಕಾಂಶ ರೋಗಿಗಳಲ್ಲಿ ಮೂತ್ರಪಿಂಡದ ದೋಷವು ಪ್ರಮುಖ ಕಾರಣವಾಗಿರುತ್ತದೆ. ಆದರೆ ಉದ್ವೇಜನೀಯತೆಯೂ ಮಿತಿಮೀರಿದ ಚಟುವಟಿಕೆಯೂ ಈ ರೋಗಿಗಳಿಗೆ ಹಿತವೆಂದು ಭ್ರಮಿಸಲಾಗದು.

**ಸ್ಥೂಲಕಾಯಕ್ಕೂ ರಕ್ತದ ಒತ್ತಡಕ್ಕೂ ಸಂಬಂಧವುಂಟೆ?**

ಸ್ವಲ್ಪ ಮಟ್ಟಿಗೆ ಇದೆ. ಸರಾಸರಿಯಲ್ಲಿ ಕೊಬ್ಬುಳ್ಳ ಸ್ಥೂಲಕಾಯದ ಜನರು ಸ್ವಾಭಾವಿಕವಾಗಿಯೆ ತೆಳ್ಳನ್ನ ಮೈಯ್ಕಟ್ಟಿನ ಜನರಿಗಿಂತ ರಕ್ತದ ಒತ್ತಡವುಳ್ಳವರಾಗಿರುವುದು ಸಂಭವತರವಾಗಿದೆ. ಆದರೆ ಇದು ಸರಾಸರಿ. ದಪ್ಪನಾಗಿರುವವರಿಗೆಲ್ಲ ರಕ್ತದ ಒತ್ತಡವಾಗುತ್ತದೆಂದು ಇದರ ಅರ್ಥವಲ್ಲ.

**ರಕ್ತದ ಒತ್ತಡದಿಂದ ಶರೀರಕ್ಕೆ ಧಕ್ಕೆ ಹೇಗಾಗುತ್ತದೆ?**

ಹೃದಯವು ಬಲು ಗಟ್ಟಿಯಾದ ಯಂತ್ರ. ಆದರೆ ಅದು ಒಂದು ನಿಶ್ಚಿತ ವೇಗಮಿತಿಯೊಳಗೆ ದುಡಿಯಲು ನಿರ್ಮಿತವಾಗಿದೆ. ರಕ್ತದ ಒತ್ತಡ ಹೆಚ್ಚಿದರೆ ಹೃದಯ ಹೆಚ್ಚು ಬಲವಾಗಿ, ಹೆಚ್ಚು ವೇಗದಿಂದ ಕೆಲಸ ಮಾಡಬೇಕಾಗುತ್ತದೆ. ಇದರಿಂದ ಅದರ ಗಾತ್ರ ಹೆಚ್ಚಿ ಸ್ನಾಯುಗಳು ಹೆಚ್ಚು ಬಲಿಷ್ಠವಾಗುತ್ತವೆ. ರಕ್ತ ಅತಿ ವೇಗದಿಂದ ರಕ್ತವಾಹಿನಿಗಳಲ್ಲಿ ಹರಿಯುವುದರಿಂದ ಅಂಗಾಂಗಗಳಲ್ಲಿರುವ ಸೂಕ್ಷ್ಮ ತರಳ ರಕ್ತನಾಳಗಳು ಅದನ್ನು ತಡೆದುಕೊಳ್ಳಲಾರದೆ ಹಾಳಾಗುವವು. ವಿಶೇಷವಾಗಿ ಮಿದುಳು ಮತ್ತು ಕಣ್ಣುಗಳ ರಕ್ತವಾಹಿನಿಗಳು ಧ್ವಂಸಗೊಳ್ಳುವವು. ಹೃದಯ ಕೂಡ ತನ್ನ ಕೆಲಸದ ಭಾರವನ್ನು ತಾಳಲಾರದೆ ಸ್ತಂಭಿತವಾಗಬಹುದು. ಹಾಗೆಯೆ ಮೂತ್ರ ಪಿಂಡಗಳೂ ಕೆಡುವವು.

**ರಕ್ತದ ಒತ್ತಡದ ರೋಗಿಗಳಿಗೆ ಏನು ಪಥ್ಯ ಹಿತಕರ?**

ರಕ್ತದ ಒತ್ತಡದ ರೋಗಿಗಳು ಕಡಿಮೆ ಕೊಬ್ಬು ಮತ್ತು ಕಡಿಮೆ ಉಪ್ಪು ಇರುವ ಆಹಾರ ಸೇವಿಸಬೇಕು. ೨೦ ವರ್ಷಕ್ಕಿಂತಲೂ ಹೆಚ್ಚು ಕಾಲ ಬಾಸ್ಟನ್ನಿನ ೪೫೩ ರೋಗಿಗಳನ್ನು ಲಕ್ಷಿಸಿದ ಡಾ. ರೋಬರ್ಟ್ ಸ್ಮರ್ಲಿಂಗ್ ಪಾಮರರು ಇದನ್ನು ಅನೇಕ ರಾಮಬಾಣೌಷಧಿಗಳ ಈ ಕಾಲದಲ್ಲಿಯೂ ಅಗತ್ಯ ಪಥ್ಯವೆಂದು ತೀರ್ಮಾನಿಸಿದ್ದಾರೆ. ಕೊಬ್ಬು ಸ್ಥೂಲ ಕಾಯಕ್ಕೆ ಕಾರಣವಾಗುತ್ತದೆ; ಮತ್ತು ಸ್ಥೂಲಕಾಯನಿಗೆ ರಕ್ತದ ಒತ್ತಡ ಆಗುವ ಸಂಭವ ಜಾಸ್ತಿ.

ಉಪ್ಪು ಮಿತವಾಗಿ ಸೇವಿಸಿದರೆ ರಕ್ತದ ಒತ್ತಡಕ್ಕೆ ಕಾರಣವಾಗುವುದೆಂದು ಹೇಳಲು ಬಾರದಿದ್ದರೂ ಕಡಿಮೆ ಉಪ್ಪು ತಿನ್ನುವ ದೇಶಗಳಿಗಿಂತ ಅಧಿಕ ಉಪ್ಪು ಬಳಸುವ ದೇಶಗಳಲ್ಲಿ ರಕ್ತದ ಒತ್ತಡ ರೋಗದ ಪ್ರಮಾಣ ವಿಶೇಷವಾಗಿರುವುದನ್ನು (ಉದಾ- ಜಪಾನ್) ನಾವು ಅಲಕ್ಷಿಸುವಂತಿಲ್ಲ. ಉಪ್ಪನ್ನು ವರ್ಜಿಸಬೇಕೆಂಬ ಹಳೇ ನಿಯಮ ಇಂದಿಗೂ ಅಬಾಧಿತವಾಗಿದೆ.

**ರಕ್ತದ ಒತ್ತಡವನ್ನು ನಿವಾರಿಸುವಲ್ಲಿ ಶಸ್ತ್ರಕ್ರಿಯೆಯನ್ನುಪಯೋಗಿಸಬಹುದೆ?**

ಕೆಲ ಮಾದರಿಯ ಪ್ರಕರಣಗಳಲ್ಲಿ ಉಪಯೋಗಿಸಬಹುದು. ಈ ಹಿಂದೆ ಹೇಳಿದ ನಾಲ್ಕು ಕಾರಣಗಳಲ್ಲಿ ಗ್ರಂಥಿಗಳಲ್ಲಿ ವ್ರಣ ಮತ್ತು ಮಹಾಪಥಮನಿಯಲ್ಲಿ ತಲೆದೋರಿದ ಅಡತಡೆಗಳನ್ನು ಶಸ್ತ್ರಕ್ರಿಯೆಯಿಂದ ನಿವಾರಿಸಲು ಸಾಧ್ಯವುಂಟು. ಮೂತ್ರಪಿಂಡಗಳಿಗೆ ಹೋಗುವ ರಕ್ತನಾಳಗಳಲ್ಲಿ ಗಾಯಗಳಿರುವುದರಿಂದಲೂ ರಕ್ತದ ಒತ್ತಡವಾಗುತ್ತದೆಂದು ಆಗಲೆ ಹೇಳಿದೆ. ಇದನ್ನೂ ಶಸ್ತ್ರಕ್ರಿಯೆಯಿಂದ ಹಿಡಿತಕ್ಕೆ ತರಬಹುದು.

**ಔಷಧ ಶಾಸ್ತ್ರವು ರಕ್ತದ ಒತ್ತಡವನ್ನು ಅಂಕೆಯಲ್ಲಿಡುವಲ್ಲಿ ಎಷ್ಟು ಪ್ರಗತಿ ಹೊಂದಿದೆ?**

ಹತ್ತು ವರ್ಷದ ಹಿಂದಿದ್ದುದಕ್ಕಿಂತ ಇಂದು ಅಸಾಧಾರಣ ಪ್ರಗತಿಯಾಗಿದೆ. ಬೇರೆ ಬೇರೆ ಬಗೆಯ ರಕ್ತದ ಒತ್ತಡಕ್ಕೆ ಬೇರೆ ಬೇರೆ ಔಷಧಗಳು ಇಂದು ಡಾಕ್ಟರನ ಬತ್ತಳಿಕೆಯಲ್ಲಿವೆ. ನರಕೇಂದ್ರಗಳನ್ನು ಶಾಂತಗೊಳಿಸುವ ಮೂಲಕ ಒತ್ತಡವನ್ನು ಇಳಿಸುವ ಔಷಧಗಳು ಕೆಲವು; ಮೂತ್ರ ಪಿಂಡಗಳಿಂದ ಹೆಚ್ಚು ಉಪ್ಪನ್ನು ಹೊರತಳ್ಳುವವು ಕೆಲವು.

ಒಂದಲ್ಲ, ಬಹು ಕಾರಣಗಳಿಂದ ರಕ್ತದ ಒತ್ತಡ ಉತ್ಪನ್ನವಾಗುವುದರಿಂದ ಮೇಲೆ ಡಾಕ್ಟರರು ಆಯಾ ರೋಗಿಯ ವಿಶಿಷ್ಟ ಪ್ರಕರಣವನ್ನು ಅಭ್ಯಸಿಸಿ ಈ ಔಷಧ ಶ್ರೇಣಿಯಲ್ಲಿ ಅವನಿಗೆ ಹಿಡಿ

ಸುವ ಒಂದು ಅಥವಾ ಹೆಚ್ಚನ್ನು ಆರಿಸಿಕೊಂಡು ಚಿಕಿತ್ಸೆಯನ್ನು ಸಾಗಿಸಬಹುದಾಗಿದೆ.

ಭಾರತದ ಸರ್ಪಗಂಧೆಯಿಂದ ತಯಾರಿಸಿದ ಸರ್ಪಿನಾ ಮೊದಲಾದ ಹಲವು ಔಷಧಗಳ ಹೆಸರರಿಯದ ರೋಗಿ ಇಂದು ಇರಲಾರ. ನರಮೂಲವಾದ ರಕ್ತದ ಒತ್ತಡದ ರೋಗಿಗಳಿಗೆ ಇವು ವರಪ್ರದಾನದಂತಾಗಿವೆ. ಈಗ ಅದರಿಂದಲೇ ತಯಾರಿಸಿದ ಇನ್ನೊಂದು ಔಷಧ ಬಂದಿದೆ. ಸೈರೋಸಿಂಗೋಪಿನ್ (ಸಿಂಗೋಸರ್ಪ್) ಎಂಬೀ ಔಷಧವು ಮಿದುಳು ಅಥವಾ ನರಗಳನ್ನು ಮಂದಗೊಳಿಸದೆನೆ (ಕೆಲ ಸರ್ಪಗಂಧಾ ಔಷಧಗಳು ರೋಗಿಯನ್ನು "ಮಬ್ಬು" ಗೊಳಿಸುತ್ತವೆ.) ರಕ್ತದ ಒತ್ತಡವನ್ನು ಇಳಿಸಲು ಶಕ್ತವಾಗುತ್ತವೆಂದು ತಿಳಿದಿದೆ.

"ಥಿಯಾಜೈಡ್ ಜನ್ಯ" ವಾದ ಕೆಲ ಹೊಸ ಔಷಧಗಳು ಮೂತ್ರಪಿಂಡಗಳ ಮೇಲೆ ಪರಿಣಾಮಮಾಡಿ ಪ್ರಯೋಜನ ಕೊಡುತ್ತವೆ. ಇವುಗಳ ಕೆಲಸ ಮೂತ್ರಪಿಂಡಗಳಿಂದ ಹೆಚ್ಚು ಉಪ್ಪನ್ನು ಹೊರಪಡಿಸುವುದಾಗಿದೆ. ನೂರಕ್ಕೆ ಐವತ್ತರಷ್ಟು ಪ್ರಕರಣಗಳಲ್ಲಿ ಇವು ರಕ್ತದ ಒತ್ತಡವನ್ನು ಸಾಮಾನ್ಯ ಸ್ಥಿತಿಗಿಳಿಸಲು ಸಮರ್ಥವಾಗಿವೆಯೆಂದು ಅಮೇರಿಕದಲ್ಲಿ ಇದನ್ನು ಪಯೋಗಿಸಿದ ಆಸ್ಪತ್ರೆಗಳು ವರದಿ ಮಾಡಿವೆ.

ಮೊನೋ ಅಮೈನ್ ಆಕ್ಸಿಡೇಸ್ (MAO) ಎಂಬ ಇನ್ನೊಂದು ಔಷಧ ಮಿದುಳನ್ನು ಚುರುಕುಗೊಳಿಸುತ್ತದೆ; ಹೀಗೆ ಮಾಡುವ ಔಷಧಗಳು ರಕ್ತದ ಒತ್ತಡ ಹೆಚ್ಚಿಸುತ್ತವೆಂಬ ಗ್ರಹಿಕೆ ಇದೆ; ಇದು ಮಾತ್ರ ಸಂಗಡಲೇ ರಕ್ತದ ಒತ್ತಡವನ್ನಿಳಿಸುತ್ತದೆ. ಇದು ಹೇಗಾಗುತ್ತದೆಂದು ಇನ್ನೂ ಸಂಶೋಧಕರಿಗೆ ತಿಳಿಯದು. ಆದರೆ ಥಿಯಾಜೈಡ್ ಜನ್ಯ ಔಷಧಗಳೊಡನೆ ಉಪಯೋಗಿಸಿದರೆ ಅದು ಇನ್ನೂ ಹೆಚ್ಚು ಸಫಲವಾಗುತ್ತದೆಂದು ಅನುಭವಕ್ಕೆ ಬಂದಿದೆ.*

### ರಕ್ತದ ಒತ್ತಡದ ಮೇಲೆ ಸಂಪೂರ್ಣ ವಿಜಯ ದೃಷ್ಟಿಪಥದಲ್ಲಿದೆಯೆ ?

ಯುದ್ಧ ಇನ್ನೂ ಮುಗಿದಿಲ್ಲ. ಆದರೆ ವಿಜಯ ಖಂಡಿತವಾಗಿದೆ. ಅನೇಕ ಔಷಧಗಳಿದ್ದರೂ ರಕ್ತದ ಒತ್ತಡವನ್ನು ಸಂಪೂರ್ಣ ಗುಣಪಡಿಸಬಲ್ಲವು ಇನ್ನೂ ದೊರೆತಿಲ್ಲವೆಂಬುದು ನಿಜ. ಆದರೆ ರೋಗದ ಸ್ವರೂಪ ಅರ್ಥವಾಗುತ್ತ ಬಂದಿದೆ. ಉಗ್ರ ರಕ್ತದ ಒತ್ತಡದ ಕಾರಣಗಳಲ್ಲಿ ಮೂತ್ರಪಿಂಡ ವಿಕಾರಕ್ಕಿರುವ ಮಹತ್ವದ ಅರಿವಾದುದು ದೊಡ್ಡ ಪ್ರಗತಿಯೆಂದು ಭಾವಿಸಲ್ಪಟ್ಟಿದೆ. ಮೂತ್ರಪಿಂಡವನ್ನು ರೋಗಾಣುಗಳು ಮುತ್ತುವುದು ಎಲ್ಲಿಂದ, ಹೇಗೆ ಎಂದು ತಿಳಿದರೆ ಅದನ್ನು ತಡೆದು ರೋಗವನ್ನು ಗುಣಪಡಿಸುವ, ಅಥವಾ ಅದು ಬಾರದಂತೆ ಮಾಡುವ ಆಸೆ ಬಲಗೊಳ್ಳುತ್ತದೆ. *

* ಈ ಔಷಧಿಗಳು ಭಾರತದಲ್ಲಿ ಇನ್ನೂ ಪೇಟೆಗೆ ಬರಬೇಕಷ್ಟೆ.



ಕತ್ತೆಯೊಂದನ್ನು ಹಿಡಿದುಕೊಂಡು ಒಬ್ಬ ಹುಡುಗ ಒಂದು ಸೈನಿಕ ಶಿಬಿರದ ಬಳಿ ಹೋಗುತ್ತಿದ್ದಾಗ ಅವನನ್ನು ಗೇಲಿ ಮಾಡಲೆಂದು ಒಬ್ಬ ಸೈನಿಕ "ಯಾಕೊ, ನಿನ್ನ ತಮ್ಮನ ಕುತ್ತಿಗೆಗೆ ಅಷ್ಟು ಬಿಗಿಯಾಗಿ ಹಗ್ಗ ಬಿಗಿದಿರುವಿ ?" ಎಂದು ಕೇಳಿದ.

"ಅವನು ಸೈನ್ಯವನ್ನು ಸೇರದಿರಲೆಂದು" ಹುಡುಗ ಉತ್ತರವಿತ್ತ.

ಶಾಲೆಯಲ್ಲಿರುವಾಗಲೇ
ಹುಡುಗ-ಹುಡುಗಿಯರ
ಏಕಾಂತವಿಹಾರ ಪ್ರಾರಂಭವಾಗುತ್ತದೆ

# ಅಮೇರಿಕದಲ್ಲಿ 'ಡೇಟಿಂಗ್'

ಕುಮಾರಿ ರೇವಾ ದತ್ತ

ನಮ್ಮ ದೇಶದಲ್ಲಿ ಪ್ರೇಮ ವಿವಾಹಗಳು ತೀರ ಅಪರೂಪವಾಗಿದ್ದರೆ ಪಾಶ್ಚಾತ್ಯ ದೇಶಗಳಲ್ಲಿ ಅವು ತೀರ ಸಾಮಾನ್ಯವಾದವು. ತಂದೆ-ತಾಯಿಗಳು ಅಲ್ಲಿ ಮಕ್ಕಳ ಲಗ್ನವನ್ನು ನಿಶ್ಚಯಿಸುವುದೆ ಇಲ್ಲ. ಅಲ್ಲಿಯ ಸಮಾಜದ ರೀತಿ ಈ ಪದ್ಧತಿಗೆ ಅನುಕೂಲವಿದೆ. ನಮ್ಮಲ್ಲಿಯಂತೆ ತರುಣ-ತರುಣಿಯರು ಒಂದೆಡೆ ಸೇರಿದೊಡನೆ ಅವರ ಬಗ್ಗೆ ಕೆಟ್ಟ ಕಲ್ಪನೆ ಮಾಡಿಕೊಳ್ಳುವ ಪರಿಪಾಠ ಅಲ್ಲಿಲ್ಲ.

ಪ್ರೇಮ ವಿವಾಹ ಒದಗಿ ಬರಲು ಪರಸ್ಪರ ಪರಿಚಯ, ಸ್ನೇಹ, ಸಹವಾಸಗಳು ಅಗತ್ಯವಾಗಿವೆ. ಇವನ್ನು ತರುಣ-ತರುಣಿಯರಿಗೆ ಒದಗಿಸುವ, ಅವರು ಪರಸ್ಪರ ಮನಬಂದವರನ್ನು ಆರಿಸಿಕೊಂಡು ವಿವಾಹವಾಗಲು ಅನುಕೂಲ ಮಾಡಿಕೊಡುವ ಒಂದು ಪದ್ಧತಿ ಇದೆ. ಅದಕ್ಕೆ "ಡೇಟಿಂಗ್" ಎನ್ನುತ್ತಾರೆ. ಮೊದಮೊದಲು ಪರಸ್ಪರ ಭೆಟ್ಟಿ, ಮಾತುಕಥೆ, ಯಾವುದಾದರೊಂದು ಕಾರಣದಿಂದ ಕೆಲ ಹೊತ್ತು ಒಟ್ಟಿಗಿರುವುದು ಇವೇ ಮುಂತಾದ ರೂಪದಲ್ಲಿ ಪ್ರಾರಂಭವಾದ "ಡೇಟಿಂಗ್" ಮುಂದೆ ಅವರಲ್ಲಿ ಸಲಿಗೆ ಬೆಳೆದಂತೆ, ಪರಸ್ಪರ ಆಕರ್ಷಣೆ ಹೆಚ್ಚಾದಂತೆ "ಕೋರ್ಟ್‌ಶಿಪ್"ನಲ್ಲಿ ಪರಿಣಮಿಸಿ ಮದುವೆಗೆ ನಾಂದಿಯಾಗುವುದು. ಅಮೇರಿಕೆಯಲ್ಲಿ ಈ 'ಡೇಟಿಂಗ್' ಸ್ವರೂಪವೆಂತಿದೆ ಎಂದು ಇಲ್ಲಿ ಹೇಳಿದೆ.

ತರುಣ-ತರುಣಿಯರು ಪರಿಚಿತರಿರಲಿ, ಅಪರಿಚಿತರಿರಲಿ, ಮೊದಲೇ ಸಮಯ ನಿಶ್ಚಯ ಮಾಡಿಕೊಂಡು ಪರಸ್ಪರರ ಸಹವಾಸಕ್ಕೆ ಅನುಕೂಲ ಮಾಡಿಕೊಡುವ ಯಾವುದೊಂದು ಕಾರ್ಯಕ್ರಮದ ಏರ್ಪಾಡು ಮಾಡಿಕೊಳ್ಳುವುದೇ 'ಡೇಟಿಂಗ್'



ಎನಿಸುವುದು. ತರುಣನೊಬ್ಬ ತರುಣಿಯನ್ನು ಪ್ರತ್ಯಕ್ಷದಲ್ಲಿ, ಇಲ್ಲವೆ ಫೋನಿನ ಮೂಲಕ ತನ್ನೊಂದಿಗೆ ಅಡ್ಡಾಡಲು ಬರುವಂತೆ ಕೇಳಿಕೊಳ್ಳುತ್ತಾನೆ. ಹುಡುಗಿ ಒಪ್ಪಿದ ಮೇಲೆ ಆತ ಅವಳೊಂದಿಗೆ ವಾಯುವಿಹಾರಕ್ಕೆ ಹೋಗಬಹುದು, ಇಲ್ಲವೆ ದೇವಾಲಯಕ್ಕೆ ಹೋಗಬಹುದು, ಈಜಲು ಅಥವಾ ಸಿನೇಮಾ ನೋಡಲು ಇಲ್ಲವೆ ಸಂಗೀತ ಕೇಳಲು ಹೋಗಬಹುದು. ಅವಳನ್ನು ನೃತ್ಯಮಂದಿರಕ್ಕೋ ಯಾವುದಾದರೊಂದು ಪಂದ್ಯಾಟ ನಿರೀಕ್ಷಿಸಲೋ ಉಪಾಹಾರಕ್ಕೆಂದು ಹೋಟೆಲ್ಲಿಗೂ ಆತ ಕರೆದೊಯ್ಯಬಹುದು.

ಒಮ್ಮೆ ಒಬ್ಬಳೊಂದಿಗೆ 'ಡೇಟಿಂಗ್' ಆದ ನಂತರ ಇನ್ನೊಬ್ಬಳನ್ನು 'ಡೇಟಿಂಗಿ'ಗಾಗಿ ಕೇಳಿಕೊಳ್ಳಬಾರದು ಎಂದೇನೂ ಇಲ್ಲ. ಯುವಕ ಯುವತಿಯರು ಬೇರೆ ಬೇರೆಯವರೊಂದಿಗೆ 'ಡೇಟಿಂಗ್' ಏರ್ಪಡಿಸಿಕೊಳ್ಳಬಹುದು. ತರುಣ ಕೇಳಿದೊಡನೆ ತರುಣಿ ಒಪ್ಪಿಕೊಳ್ಳಬೇಕೆಂದೂ ಇಲ್ಲ. ವಿದ್ಯಾರ್ಥಿ ತರುಣರು ತಮ್ಮ ಸ್ತ್ರೀಸಹಪಾಠಿಗಳನ್ನು ಇಲ್ಲವೆ ಅವರ ಸ್ನೇಹಿತೆಯರನ್ನು, ಅಥವಾ ತಮ್ಮ ಸೋದರಿಯರ ಸ್ನೇಹಿತೆಯರನ್ನು 'ಡೇಟಿಂಗ್'ಗಾಗಿ ಕೇಳಿಕೊಳ್ಳುತ್ತಾರೆ.

ಒಂದೇ ದಿನದಲ್ಲಿ ಮೂರು ನಾಲ್ಕು ತರುಣರೊಂದಿಗೆ 'ಡೇಟಿಂಗ್' ನಿಶ್ಚಯಿಸಿಕೊಳ್ಳುವ ತರುಣಿಯರಿರುವರಾದರೂ ಅಂಥವರು ಅಪರೂಪ. ತಾವು 'ಡೇಟಿಂಗ್'ಗೆ ಒಪ್ಪಿದ ಯುವಕರ ಹೆಸರನ್ನು ತರುಣಿಯರು ಗುಪ್ತವಾಗಿಡುವರು. 'ಡೇಟಿಂಗ್' ಮೂಲಕ ಬೇರೆ ಬೇರೆ ತರುಣರೊಂದಿಗೆ ಒಡನಾಟ ಬರುವುದರಿಂದ ತರುಣಿಯರಿಗೆ ತಮಗೆ ಬೇಕಾದಂಥ ವರನನ್ನು ಆಯ್ದುಕೊಳ್ಳಲು ಅನುಕೂಲವಾಗುವುದು. ತರುಣರೇ 'ಡೇಟಿಂಗ್'ಗಾಗಿ ತರುಣಿಯರನ್ನು ಕೇಳಿಕೊಳ್ಳುತ್ತಾರೆಯೆ ವಿನಾ ತರುಣಿಯರು ತರುಣರನ್ನು ಕೇಳಿಕೊಳ್ಳುವುದಿಲ್ಲ. ಅದು ಸಂಪ್ರದಾಯವಿರುದ್ಧವಾದದ್ದು.

ಯಾವ ಹುಡುಗಿಯರಿಗೆ 'ಡೇಟಿಂಗ್' ಕರೆ ಬರುವುದಿಲ್ಲವೊ ಅಂಥ ಹುಡುಗಿಯರಲ್ಲಿ ಏನೋ ಕೊರತೆಯಿದೆಯೆಂದೇ ಅಲ್ಲಿ ಭಾವಿಸುತ್ತಾರೆ. ಅಂಥ ಹುಡುಗಿಯರು ಕೂಡ ತರುಣರ ಸಹವಾಸದ ಅವಕಾಶ ದೊರೆಯದಿರುವುದರಿಂದ ದುಃಖಿಗಳಾಗಿರುವರು. ಅಮೇರಿಕನ್ ತರುಣರಿಗೆ ಸಾಮಾನ್ಯವಾಗಿ ದಪ್ಪ ಹುಡುಗಿಯರೆಂದರೆ ಇಷ್ಟವಿಲ್ಲ. ಆದ್ದರಿಂದ ಅಲ್ಲಿ ಹುಡುಗಿಯರು ಕೃಶಾಂಗಿಯರಾಗಿರಲು ಪ್ರಯತ್ನಿಸುತ್ತಿರುತ್ತಾರೆ.

ಹುಡುಗ - ಹುಡುಗಿಯರ ಪರಿಚಯ "ಡೇಟಿಂಗ್" ಮೂಲಕ ಸಾಮಾನ್ಯವಾಗಿ ಅವರು ಹಾಯ್‌ಸ್ಕೂಲುಗಳಲ್ಲಿರುವಾಗಲೇ ಆರಂಭವಾಗುವುದು. ತಂದೆ-ತಾಯಿಗಳ ಅನುಮತಿಯಿಂದ ಹುಡುಗಿ ತನ್ನ ಮನ ಬಂದ ವರ ದೊರೆಯುವವರಿಗೆ ಬೇಕಾದಷ್ಟು ಯುವಕರ ಪರಿಚಯ ಮಾಡಿಕೊಳ್ಳಬಹುದು. ತರುಣರ ವಿಚಾರವೂ ಅಷ್ಟೆ.

ಅಮೇರಿಕೆಯ ತರುಣ - ತರುಣಿಯರಿಗೆ "ಡೇಟಿಂಗ್", ಜೀವನ ಸಂಗಾತಿಯನ್ನು ಆರಿಸಿಕೊಳ್ಳುವ ಸಾಧನಮಾತ್ರವಾಗಿರದೆ ಮನೋರಂಜನೆಯ ಮುಖ್ಯ ಸಾಧನವೂ ಆಗಿದೆ. ಇಪ್ಪತ್ತರ ಒಳಗಿನ ಹುಡುಗ ಹುಡುಗಿಯರ ಮಟ್ಟಿಗಂತೂ ಮನೋರಂಜನೆಯೆ "ಡೇಟಿಂಗ್" ನ ಮುಖ್ಯ ಉದ್ದೇಶವಾಗಿರುತ್ತದೆನ್ನಬಹುದು. ಅಂದರೆ ಈ ವಯಸ್ಸಿನವರು ಲಗ್ನವಾಗುವುದಿಲ್ಲವೆಂದಲ್ಲ. ಅಪರೂಪವಾಗಿ ಹಾಗೆ ಆಗುವುದೂ ಉಂಟು. ಆದರೆ ಸಾಮಾನ್ಯವಾಗಿ ಮದುವೆಯ ದೃಷ್ಟಿ 'ಡೇಟಿಂಗ್'ಗೆ ಬರುವುದು ಇಪ್ಪತ್ತರ ವಯಸ್ಸು ದಾಟಿದ ಮೇಲೆಯೆ.

'ಡೇಟಿಂಗ್' ನಲ್ಲಿ ಸಾಧಾರಣ ಡೇಟಿಂಗ್, ಕುರುಡು ಡೇಟಿಂಗ್, ಜೋಡಿ ಡೇಟಿಂಗ್, ಸ್ಥಿರ ಡೇಟಿಂಗ್, ಡಚ್ ಡೇಟಿಂಗ್ ಎಂದು ಮುಂತಾಗಿ ವಿವಿಧ ಪ್ರಕಾರಗಳಿವೆ.

ಸಾಧಾರಣ ಡೇಟಿಂಗ್ 'ಡೇಟಿಂಗ್' ವ್ಯವ

ಹಾರದಲ್ಲಿ ಮೊದಲನೆಯ ಘಟ್ಟ. ತರುಣ-ತರುಣಿಯರು ಒಟ್ಟಾಗಿ ಅಡ್ಡಾಡುವುದಕ್ಕಷ್ಟೆ ಇದು ಸೀಮಿತವಾಗಿದೆ.

'ಕುರುಡು' ಡೇಟಿಂಗ್ ಕುತೂಹಲಕಾರಿಯಾದುದು. ಪರಸ್ಪರ ಪರಿಚಯವಿಲ್ಲದವರು 'ಡೇಟಿಂಗ್' ನಿಶ್ಚಯಿಸಿಕೊಳ್ಳುವುದಕ್ಕೆ ಕುರುಡು ಡೇಟಿಂಗ್ ಎಂದು ಹೆಸರು. ಜಾನ್ ತನ್ನ ಸ್ನೇಹಿತ ಡೇವಿಡ್‌ಗೆ ಡೇಟಿಂಗ್ ಏರ್ಪಡಿಸಲೆಂದು ತನ್ನ ಸ್ನೇಹಿತೆ ಮೇರಿಗೆ "ಡೆವಿಡ್‌ನಿಗೆ ಡೇಟ್ ಬೇಕಾಗಿದೆ. ನಿನ್ನ ಸ್ನೇಹಿತೆ ಜೇನ್‌ಳಿಗೆ ಹೇಳಿ ಒಪ್ಪಿಸುವಿಯಾ?" ಎಂದು ಕೇಳುತ್ತಾನೆ. ಮೇರಿ ಒಪ್ಪಿ ಏರ್ಪಾಡು ಮಾಡಿಕೊಡುತ್ತಾಳೆ. ಪರಸ್ಪರ ಪರಿಚಯವಿಲ್ಲದ ಡೇವಿಡ್ ಮತ್ತು ಜೇನ್ ಒಂದೆಡೆ ಬರುತ್ತಾರೆ.

ಎರಡು ಜೊತೆಗಳು ಕೂಡಿಕೊಂಡು ಒಂದೇ ಕಾರ್ಯಕ್ರಮಕ್ಕೆ ಹೋಗುವುದೇ "ಜೋಡಿ ಡೇಟಿಂಗ್" ಎನಿಸುವುದು. ತರುಣ ತರುಣಿಯರು 'ಡೇಟಿಂಗ್' ಗಾಗಿ ಹೊರಟಾಗ ತಮ್ಮ ತಮ್ಮ ತಿಕೀಟುಗಳಿಗೆ ತಾವೇ ಹಣ ಕೊಟ್ಟರೆ ಅದು 'ಡಚ್ ಟ್ರೀಟ್ ಡೇಟಿಂಗ್' ಎನಿಸುವುದು. ತರುಣ ತರುಣಿಯರು ಗುಂಪಾಗಿ ಒಂದು ಕಾರ್ಯಕ್ರಮಕ್ಕೆ ಹೋಗುವುದಕ್ಕೆ 'ಗುಂಪು ಡೇಟಿಂಗ್' ಎಂದು ಹೆಸರು. ಆಗವರು ಜೊತೆಯಾಗಿ ಬಂದಿರುವುದಿಲ್ಲ. ಆದರೆ ಪ್ರತಿಯೊಬ್ಬ ಯುವಕನೂ ಒಬ್ಬ ಯುವತಿಯೊಂದಿಗೆ ನರ್ತಿಸಲು ಇಲ್ಲವೆ ಸಂಭಾಷಣೆ ನಡೆಸಲು ಅವಕಾಶವಿರುತ್ತದೆ.

ಮದುವೆಯ ವಿಚಾರ ಮೂಡಿದಾಗ, ಪರಸ್ಪರರ ಬಗ್ಗೆ ಆಕರ್ಷಣೆ ಮೂಡಿದಾಗ ಅಂಥ ಜೊತೆ ಮೇಲಿಂದ ಮೇಲೆ 'ಡೇಟಿಂಗ್' ಏರ್ಪಡಿಸಿಕೊಳ್ಳುತ್ತಾರೆ. ಹೀಗೆ ಒಂದೇ ಜೊತೆಯು ಮೇಲಿಂದ ಮೇಲೆ 'ಡೇಟಿಂಗ್' ನಿಶ್ಚಯಿಸುವುದು 'ಸ್ಥಿರ ಡೇಟಿಂಗ್' ಅನಿಸಿಕೊಳ್ಳುವುದು. ಈ ಸ್ಥಿರ ಡೇಟಿಂಗೇ ಮದುವೆಗೆ ಮಾರ್ಗವಾಗುವುದು.

ಪ್ರಥಮ ಡೇಟಿಂಗ್ ದಿನ ತರುಣ ತರುಣಿಯನ್ನು ಚುಂಬಿಸಬಾರದೆಂಬ ಸಂಪ್ರದಾಯವಿದೆ. ಇದಕ್ಕೆ ಅಪವಾದವಿಲ್ಲವೆಂದಿಲ್ಲ. ಆದರೆ ಸಹಸಾ ಪ್ರಥಮ ಡೇಟಿಂಗ್ ದಿನ ತರುಣ-ತರುಣಿಯರಲ್ಲಿ ಚುಂಬನ ವಿನಿಯೋಗ ನಡೆಯುವುದಿಲ್ಲ. ಅವರು ಪರಸ್ಪರ ಮೆಚ್ಚಿಕೊಂಡರೆ ಮೂರನೆ ಅಥವಾ ನಾಲ್ಕನೆಯ 'ಡೇಟಿಂಗ್'ನಲ್ಲಿ ಚುಂಬನ ವಿನಿಯೋಗ ನಡೆಯುತ್ತದೆ. ಎಷ್ಟೋ ಡೇಟಿಂಗ್‌ಗಳ ನಂತರವೂ ಪರಸ್ಪರರನ್ನು ಚುಂಬಿಸದಿರುವ ಹುಡುಗ ಹುಡುಗಿಯರೂ ಇರುತ್ತಾರೆ.

ಡೇಟಿಂಗಿನ ಸಮಯ ಸಾಧಾರಣವಾಗಿ ರಾತ್ರಿ ೮ ರಿಂದ ೧೧ ರ ವರೆಗಿನ ಅವಧಿಯಾಗಿದೆ. ಈ ಅವಧಿ ರಾತ್ರಿ ೨ ರ ವರೆಗೂ ಬೆಳೆಯುವುದೂ ಉಂಟು.

ಡೇಟಿಂಗ್‌ನಲ್ಲಿ ಆಸ್ಥೆ ತೋರಿಸದ ಹುಡುಗಿಯರಿಗೆ ಅವರ ತಂದೆ ತಾಯಿಗಳೇ ಪ್ರೋತ್ಸಾಹನ ಕೊಡುತ್ತಾರೆ.

ನಮ್ಮ ದೇಶದಲ್ಲಿಯಂತೆ ಅಮೇರಿಕೆಯಲ್ಲಿ ವಿವಾಹ ನಿಶ್ಚಿತಾರ್ಥಕ್ಕೆ ವಿಶೇಷ ಮಹತ್ವವಿಲ್ಲ. ಅಮೇರಿಕೆಯಲ್ಲಿ ಯುವತಿಯರೇ ನಿಶ್ಚಿತ ವಿವಾಹವನ್ನು ಮುರಿದುಕೊಳ್ಳುವರು. ಮದುವೆಯ ಮೊದಲು ತರುಣಿ ತನ್ನ ಭಾವೀ ಪತಿಯ ಮನೆಗೆ ಆಗಾಗ ಹೋಗುವಳಲ್ಲದೆ ಅಲ್ಲಿ ಅವನ ತಂದೆ ತಾಯಿಗಳ ಪರಿಚಯಮಾಡಿಕೊಳ್ಳುವಳು. ಸಂದರ್ಭಾನುಸಾರ ಅಲ್ಲಿ ಒಂದೆರಡು ದಿನ ಇರುವುದೂ ಉಂಟು. ಹುಡುಗನೂ ಹಾಗೆಯೆ ಭಾವೀ ಪತ್ನಿಯ ಮನೆಯವರ ಪರಿಚಯವನ್ನು ಮಾಡಿಕೊಂಡಿರುತ್ತಾನೆ.

ತಾವು ಮದುವೆಯಾಗಲು ನಿಶ್ಚಯಿಸಿದ ಹುಡುಗಿಯ ಮದುವೆ ಮೊದಲೇನಾದರೂ ಬೇರೆಯವರೊಡನೆ ನಿಶ್ಚಿತವಾಗಿತ್ತೆ, ಆ ಮೇಲೆ ಅದು ಮುರಿದಿತ್ತೆ, ಎಷ್ಟು ಸಲ ಹೀಗಾಗಿದೆ ಎಂಬಿತ್ಯಾದಿ ವಿಚಾರಗಳನ್ನೇನೂ ತರುಣರು ಮಾಡುವುದಿಲ್ಲವಾದ್ದರಿಂದ ನಿಶ್ಚಿತವಾದ ವಿವಾಹವನ್ನು

ಮುರಿದುಕೊಂಡಿದ್ದ ಹುಡುಗಿಯರ ಲಗ್ನಕ್ಕೂ ಆತಂಕವುಂಟಾಗುವುದಿಲ್ಲ. ವಿವಾಹ ನಿಶ್ಚಿತವಾದ ನಂತರ ಮದುವೆ ಬೇಗನೆ ನಡೆಯಬಹುದು, ಒಂದು ವರ್ಷದ ನಂತರವೂ ಆಗಬಹುದು. ತರುಣ ತಾನು ಪ್ರೀತಿಸಿ ಬಯಸಿದ ತರುಣಿಗೆ ನಿಶ್ಚಯದ ಉಂಗುರವನ್ನು ಕೊಟ್ಟನೆಂದರೆ ಲಗ್ನ ನಿಶ್ಚಯವಾದಂತಾಗುವುದು. ಉಂಗುರ ಸಿಕ್ಕೊಡನೆ ತರುಣಿಯರು ಸಂಭ್ರಮದಿಂದ ಈ ಸುದ್ದಿಯನ್ನು ಸ್ನೇಹಿತರಿಗೆ, ಪರಿಚಿತರಿಗೆ—ಎಲ್ಲರಿಗೂ ತಿಳಿಸುವರು. ವರನಿಗಿಂತ ವಧುವಿನ ವಯಸ್ಸು ಸಾಮಾನ್ಯವಾಗಿ ಕಡಿಮೆಯಿರುವುದಾದರೂ ಕೆಲ ಸಂದರ್ಭಗಳಲ್ಲಿ ವಧುವಿನ ವಯಸ್ಸು ಹೆಚ್ಚಾಗಿರುವುದೂ ಇದೆ.

ಚರ್ಚಿನಲ್ಲಿ ಧಾರ್ಮಿಕ ಪದ್ಧತಿಯಿಂದ ಮದುವೆ ನಡೆಯಬೇಕೆಂದೇ ಅಮೇರಿಕೆಯಲ್ಲಿ ತಂದೆತಾಯಿಗಳು ಬಯಸುತ್ತಾರೆ. ವಿವಾಹವಾದ ಬಳಿಕ ಕೆಲದಿನ ಯಾವ ಹೊಣೆ ಬಂಧನಗಳಿಲ್ಲದೆ ಸುಖಾನುಭವ ಹೊಂದಲೆಂದು ನವ ದಂಪತಿಗಳು 'ಹನಿಮೂನ್'ಗೆ ಹೋಗುತ್ತಾರೆ. ಮರಳಿದ ನಂತರ ಸ್ವತಂತ್ರ ಸಂಸಾರ ಹೂಡುತ್ತಾರೆ.

ಈಚೆಗೆ ಕಾಲೇಜಿನಲ್ಲಿರುವಾಗಲೇ ಅಮೇರಿಕನ್ ತರುಣ ತರುಣಿಯರು ಲಗ್ನವಾಗುವುದು ಹೆಚ್ಚಾಗಿದೆ. ದಿನದಲ್ಲಿ ಕೆಲ ಹೊತ್ತು ದುಡಿದು ಸಂಸಾರದ ಮತ್ತು ಶಿಕ್ಷಣದ ವೆಚ್ಚಕ್ಕೆ ಹಣ ಸಂಪಾದಿಸುತ್ತಾರೆ. ಈ ಅವಧಿಯಲ್ಲಿ ಮಕ್ಕಳಾದರೆ ಗಂಡ ಹೆಂಡರು ತಮ್ಮ ಕೆಲಸದ ವೇಳೆಯನ್ನು ಪ್ರತ್ಯೇಕ ಪ್ರತ್ಯೇಕ ಮಾಡಿಕೊಂಡು ಒಬ್ಬರಿಲ್ಲದಾಗ ಇನ್ನೊಬ್ಬರು ಮನೆಯ ಕೆಲಸ ಮತ್ತು ಮಕ್ಕಳನ್ನು ನೋಡಿಕೊಳ್ಳುತ್ತಾರೆ.

ಗಂಡಂದಿರು ಮನೆಯಲ್ಲೂ ಮನೆಯ ಹೊರಗೂ ಅವರ ಕೆಲಸದಲ್ಲಿ ಸಹಾಯ ಮಾಡುವರು. ಹೆಂಡತಿ ಅಡಿಗೆ ಮಾಡುತ್ತಿದ್ದರೆ ಗಂಡ ಪಾತ್ರೆ ತೊಳೆಯುತ್ತಾನೆ. ಇಬ್ಬರಿಗೂ ಮನೆಯ ಕೆಲಸಕ್ಕಾಗಿ ಸಮಯವಿರದಿದ್ದರೆ ಆಳನ್ನಿಟ್ಟುಕೊಳ್ಳುತ್ತಾರೆ. ಮಗುವನ್ನು ನೋಡಿಕೊಳ್ಳುವವರಿಗೆ ತಾಸಿಗೆ ಎರಡೂವರೆ ರೂಪಾಯಿ ಕೊಡಬೇಕಾಗುತ್ತದೆ.

೨೩ ವರ್ಷವಾದರೂ ಲಗ್ನವಾಗದೆ ಹೋದರೆ ಅಮೇರಿಕನ್ ಯುವತಿ ತುಂಬ ನಿರಾಶಳಾಗುತ್ತಾಳೆ. ಬೇಗ ಮದುವೆಯಾಗಿ ಸುಖ ಸಂಸಾರ ನಡೆಸಬೇಕೆಂಬ ಹಂಬಲವುಳ್ಳವರು ಅವರು. *

"ಅಮೃತ ಬಜಾರ" ಪತ್ರಿಕೆಯಿಂದ




"ನೆಹ್ರು ಹೇಳಿದಂತೆ ನೀವು ಹಳೇ ಯುಗದ ಮಂಕರೇ ಸರಿ ! ಸಹಕಾರಿ ತತ್ವಾನ ಜಾರಿಗೆ ತರದೇ ಇದ್ರೆ ಮನೇಲಿ ಅಡಿಗೆ ಹೇಗಾಗುತ್ತೆ ಅನ್ನೋ ಜ್ಞಾನ ಬೇಡ!"

—ಶ್ರೀಕಾಂತ ನಾಡಿಗ

ಬೇಟೆಗಾರರಿಗೆ
ಇಷ್ಟು ಉತ್ತಮವಾದದ್ದು
ಇನ್ನೊಂದು
ಸಿಗಲಾರದು

# ಪರ್ಡಿ ಬಂದೂಕು

ಬೇಟೆಗಾಗಿ ಉಪಯೋಗಿಸುವ ಬಂದೂಕುಗಳ ಮಾತು ಬಂದರೆ 'ಜೇಮ್ಸ್ ಪರ್ಡಿ' ಸಂಸ್ಥೆಗಿರುವಷ್ಟು ಖ್ಯಾತಿ ಬೇರಾವುದಕ್ಕೂ ಇಲ್ಲ. ನೂರೈವತ್ತು ವರ್ಷಗಳ ಹಿಂದಿನಿಂದಲೂ ಅತ್ಯುತ್ತಮ ಬಂದೂಕು, ಶಾಟ್‌ಗನ್ ಮತ್ತು ರಾಯಫಲ್‌ಗಳನ್ನು ಈ ಸಂಸ್ಥೆ ತಯಾರಿಸುತ್ತಿದೆ. ತಮ್ಮ ಕೋವಿಗಳು ಬೇಟೆಗಾರರಿಗೆ ಎಂದೂ ಅಪಾಯಕಾರಕವಾಗಲಾರವೆಂದಿಷ್ಟೇ ಅಲ್ಲ; ಎಂದೂ ನಿರುಪಯೋಗಿ ಎಂದು ಒಗೆಯುವ ಹೊತ್ತು ಬರಲಾರದೆಂದು ಈ ಸಂಸ್ಥೆ ಹೆಮ್ಮೆಯಿಂದ ಹೇಳುತ್ತದೆ. ಶಿಕಾರಿಗಳ ಜಗತ್ತಿನಲ್ಲಿ 'ಪರ್ಡಿ' ಎಂಬ ಹೆಸರಿಗೆ ಗೌರವದ ಸ್ಥಾನವಿದೆ. ಇದನ್ನು ಗಳಿಸಲು ಸಂಸ್ಥೆ ತುಂಬ ತಪಸ್ಸನ್ನು ಗೈಯಬೇಕಾಯಿತು.

ಇಂಗ್ಲಂಡಿನ ಮೂರನೆ ಜಾರ್ಜನ ಕಾಲದ ಕೋವಿಗಳು ಅಷ್ಟು ಚೆನ್ನಾಗಿರುತ್ತಿದ್ದಿಲ್ಲ. ಬೇಟೆಯ ಕಾಲಕ್ಕೆ ಒಡೆದು ಬೇಟೆಯವನೇ ಮೃತ್ಯುವಿಗೆ ತುತ್ತಾಗುವ ಸಂಭವವಿರುತ್ತಿತ್ತು. ಆಗ 'ಪರ್ಡಿ' ಎಂಬ ಕಮ್ಮಾರನು ಈ ದೋಷಗಳಿಲ್ಲದಂತೆ ಬಂದೂಕುಗಳನ್ನು ತಯಾರಿಸಲು ಪ್ರಯೋಗ ನಡೆಸಿದ. ಪ್ರಯೋಗದ ಕಾಲಕ್ಕೆ ಅನೇಕ ಮರಣಾಂತಿಕ ಪ್ರಸಂಗಗಳು ಒದಗಿದವು. ಅವುಗಳಿಂದಲೂ ಪಾರಾಗಿ ಆತ ಸುಲಭ ರಚನೆ ಇರುವ ಸುರಕ್ಷಿತ ಕೋವಿಯನ್ನು ನಿರ್ಮಿಸಿದ. 'ಜೇಮ್ಸ್ ಪರ್ಡಿ' ಸಂಸ್ಥೆ ಇಂದಿಗೂ ಅವನ ಪರಂಪರೆಯನ್ನೇ ಅನುಸರಿಸಿ ಕೋವಿಗಳನ್ನು ನಿರ್ಮಿಸುತ್ತದೆ.

ಲಂಡನ್ ನಗರದ ಪೂರ್ವಭಾಗದಲ್ಲಿರುವ ಈ ಕಾರಖಾನೆಯಲ್ಲಿ ಐವತ್ತು-ಅರುವತ್ತರಷ್ಟು ತಜ್ಞರಿದ್ದಾರೆ. ಪ್ರತಿವರ್ಷ ಈ ಕಾರಖಾನೆ ನೂರೈವತ್ತು ಶಾಟ್‌ಗನ್ ಮತ್ತು ರಾಯಫಲ್‌ಗಳನ್ನು ತಯಾರಿಸುತ್ತದೆ. ಡ್ರಾಯಿಟ್‌ವಿಚ್‌ನ ಬಳಿಯಿರುವ ಫೌಂಡ್ರಿಯಲ್ಲಿ ಇಂದಿಗೂ ಇಬ್ಬರು ಕುಶಲ ಕೆಲಸಗಾರರು ಕೈಯಿಂದಲೇ ಉಕ್ಕನ್ನು ತಯಾರಿಸುತ್ತಿರುವುದು ಕಾಣಸಿಗುತ್ತದೆ. ಈ ಉಕ್ಕು ಅತಿ ಉತ್ತಮವಿರುತ್ತದೆಂದು ಸಿದ್ಧವಾಗಿದೆ.

ಒಂದು ಪರ್ಡಿ ಶಾಟ್‌ಗನ್ ತಯಾರಿಸಲು ಒಂದು ವರ್ಷ ಬೇಕು. ಬಂದೂಕಿನ ಹಿಡಿಕೆಯ ಕಟ್ಟಿಗೆಯನ್ನು ಹುಡುಕಲಿಕ್ಕೆ ಕಾಷ್ಠತಜ್ಞರು ಸಾಕಷ್ಟು ಪರೀಕ್ಷೆ ನಡೆಸುತ್ತಾರೆ. ಫ್ರಾನ್ಸಿನ ಡಾರ್ಡೊರ್ನ್ ಪ್ರದೇಶದಲ್ಲಿರುವ ಕಟ್ಟಿಗೆಯ ಕಾರಖಾನೆಗಳಲ್ಲಿ ಸಾವಿರಾರು ಉತ್ತಮ ಹಲಗೆಗಳನ್ನು ಪರೀಕ್ಷಿಸಿ ಅರುವತ್ತು ಎಪ್ಪತ್ತು ಹಲಗೆಗಳನ್ನು ಮಾತ್ರ ಆರಿಸುತ್ತಾರೆ. ಒಂದೊಂದು ಹಲಗೆಯ ಬೆಲೆ ಸುಮಾರು ಎರಡು ಸಾವಿರ ರೂಪಾಯಿ ಇರುತ್ತದೆ. ಕೊರೆದ ಮೇಲೆ ಐದಾರು ವರ್ಷ ಬಯಲಲ್ಲಿ ಬಿದ್ದಿರುವುದರಿಂದ ಈ ಕಟ್ಟಿಗೆ ನುರಿತದ್ದಿರುತ್ತದೆ (seasoned). ಮತ್ತೆ ಐದಾರು ವರ್ಷ ಹಾಗೇ ಇಟ್ಟು ಈ ಹಲಗೆಗಳಿಂದ ಹಿಡಿಕೆಗಳನ್ನು ಕುಶಲ ಕಲೆಗಾರರಿಂದ ಮಾಡಿಸುತ್ತಾರೆ. ಕಟ್ಟಿಗೆಯ ಬಣ್ಣ ಮಿಂಚಬೇಕೆಂದು ವಿಶಿಷ್ಟ ಬಗೆಯಲ್ಲಿ ನಿರ್ಮಿಸಿದ ಎಣ್ಣೆಯನ್ನು ದಿನಾಲೂ ಮುಂಜಾನೆ, ಸಂಜೆಗೆ ಹಚ್ಚುತ್ತಾರೆ. ಪ್ರತಿಸಲ ಹಿಂದಿನ ಸಲ ಹಚ್ಚಿದ ಎಣ್ಣೆಯನ್ನು ಒರೆಸುತ್ತಾರೆ. ತಜ್ಞರು ಯೋಗ್ಯ ಬಣ್ಣ

ಆಧಾರದಿಂದ

ಬಂದಿದೆ ಎಂದು ಹೇಳುವ ವರೆಗೆ ಈ ತೈಲ ಸಂಸ್ಕಾರವನ್ನು ನಡೆಸುತ್ತಾರೆ.

ಈ ಸಂಸ್ಥೆಯ ಗ್ರಾಹಕರೆಲ್ಲರೂ ಷೋಕಿ ಜನರು. ಇಂಗ್ಲೆಂಡಿನ ರಾಣಿ ಎಲಿಜಾಬೇಥರ ಪತಿ ಫಿಲಿಪ್‌ರೂ ಪರ್ಡಿಯ ಗ್ರಾಹಕರು. ಅವರ ಹತ್ತಿರ ಪರ್ಡಿಯ ನಾಲ್ಕು ಬಂದೂಕುಗಳಿವೆ. ಐಸೆನ್ ಹಾವರ್, ವಿನಸ್ಟನ್ ಚರ್ಚಿಲ್, ಮಾರ್ಶಲ್ ಝುಕೊವ್, ರಾಕ್‌ಫೆಲರ್ ಇವರೆಲ್ಲರೂ ಗ್ರಾಹಕರು. ಅಲ್ಲದೆ ಸ್ಪೇನ್ ಮತ್ತು ಬ್ರಿಟನ್ನಿನ ಸರದಾರರೆಲ್ಲ ಪರ್ಡಿ ಬಂದೂಕುಗಳನ್ನೇ ಉಪಯೋಗಿಸುತ್ತಾರೆ. ಜರ್ಮನಿಯ ಕೈಸರ್ ದೊರೆ ಮತ್ತು ರಷಿಯದ ಝಾರ್ ದೊರೆ ಇವರೆಲ್ಲರು "ಪರ್ಡಿ"ಯ ಕೋವಿಗಳನ್ನೇ ಉಪಯೋಗಿಸುತ್ತಿದ್ದರು. ಆರನೆ ಜಾರ್ಜರು ಪರ್ಡಿ ಬಂದೂಕುಗಳಿಂದ ಸಂತುಷ್ಟರಾಗಿ ಒಮ್ಮೆ ಬೇಟೆ ಮಾಡಿದ ಒಂದು ಕಾಡುಕೋಣದ ರುಂಡವನ್ನೇ ಪರ್ಡಿ ಕಾರಖಾನೆಗೆ ಕಳಿಸಿದ್ದರು.

ಈ ಸಂಸ್ಥೆಯ ಪ್ರದರ್ಶನ ಗ್ರಹದಲ್ಲಿ ಇಂಥ ಅನೇಕ ಬೇಟೆಗಳ ಸಂಗ್ರಹವಿದೆ. ಬೇಟೆಗಾರರು ಸಂಪ್ರೀತರಾಗಿ ಕಳಿಸಿದ ಬೇರೆ ಬೇರೆ ಪ್ರಾಣಿಗಳ ತಲೆಗಳು, ಚರ್ಮಗಳು ಇಲ್ಲಿ ಇವೆ. ಅಲ್ಲದೆ ಗ್ರಾಹಕರ ಪ್ರಶಂಸಾ ಪತ್ರಗಳಂತೂ ಪ್ರತಿದಿನ ಬಂದೇ ಬರುತ್ತವೆ. ಪರ್ಡಿಯವರ ಸಂಗ್ರಹದಲ್ಲಿ ಎಲ್ಲ ಬಗೆಯ ಗುಂಡುಗಳನ್ನೂ ಇಟ್ಟಿದ್ದಾರೆ. ಬೇರೆ ಬೇರೆ ಬೇಟೆಗಳ ವಿವರಗಳಿರುವ ಪುಸ್ತಕಗಳಿವೆ.

ಜಗತ್ತಿನಲ್ಲಿ ಈಗ ೧,೧೨,೦೦೦ 'ಪರ್ಡಿ' ಬಂದೂಕುಗಳನ್ನು ಶಿಕಾರಿಗಳು ಉಪಯೋಗಿಸುತ್ತಾರೆ.

'ಪರ್ಡಿ' ಬಂದೂಕುಗಳನ್ನು ಸಂಸ್ಥೆಯ ತಜ್ಞರು ಸೂಕ್ಷ್ಮವಾಗಿ ಪರೀಕ್ಷಿಸಿಯಾದ ಮೇಲೆ ಸರಕಾರಿ ತಜ್ಞರು ಮಗುದೊಮ್ಮೆ ಪರೀಕ್ಷಿಸುತ್ತಾರೆ ಆ ಮೇಲೆ "ಯೋಗ್ಯ"ವೆಂಬ ಅಂಕಿತ ಬಿದ್ದೇ ಈ ಕೋವಿಗಳು ಗ್ರಾಹಕರ ಕೈಸೇರುತ್ತವೆ. ೧೬೭೦ ರಿಂದಲೂ ಈ ಪರಂಪರೆ ನಡೆದು ಬಂದಿದೆ. ಮೊದಲನೆ ಚಾರ್ಲಸ್‌ನಿಗೆ ಲಂಡನ್ನಿನ ಕಮ್ಮಾರರೆಲ್ಲ ಕೂಡಿ ಒಂದು ಅರ್ಜಿ ಮಾಡಿ ಅಸುರಕ್ಷಿತ ಬಂದೂಕುಗಳ ನಿರ್ಮಾಣವನ್ನು ತಡೆಯಲು ಬೇಡಿಕೊಂಡರು. ಆತನೂ ಶಿಕಾರಿಯಾಗಿದ್ದರಿಂದ ಬಂದೂಕುಗಳ ಯೋಗ್ಯ ಪರೀಕ್ಷೆ ನಡೆಸಲೆಂದು ಒಂದು ಅಧಿಕಾರಿ ವರ್ಗವನ್ನು ನಿರ್ಮಿಸಿದ. ಇಂಗ್ಲಂಡಿನಲ್ಲಿ ಈ ಬಗೆಯ ಮೂರು ಪರೀಕ್ಷಕ ಸಂಸ್ಥೆಗಳಿವೆ ಅವುಗಳಿಂದ ಮಾನ್ಯತೆ ದೊರೆತಹೊರತು ಯಾವ ಬಂದೂಕೂ ಗ್ರಾಹಕರ ಕೈಸೇರದು.

ಗ್ರಾಹಕರ ಇಚ್ಛೆಯಂತೆ ಅವರಿಗೆ ಅನುಕೂಲವಾಗುವಂತೆ ಕೋವಿಗಳನ್ನು ನಿರ್ಮಿಸುವುದು 'ಪರ್ಡಿ' ಸಂಸ್ಥೆಯ ರೂಢಿಯಾಗಿದೆ. ಗ್ರಾಹಕನ ಹೆಗಲಿನ ಉದ್ದ, ಕುತ್ತಿಗೆಯ ಉದ್ದ, ಕೆಳದವಡೆಯ ಎಲುಬಿನ ಕೋನ, ಕೈಗಳ ಉದ್ದ ಮುಂತಾದ ವಿವರಗಳನ್ನು ಇವರು ಬರೆದುಕೊಳ್ಳುತ್ತಾರೆ.

ಬೇಟೆಯಲ್ಲಿ ಬಲಗಣ್ಣು ಕಳೆದುಕೊಂಡ ಶಿಕಾರಿಯೊಬ್ಬ ಒಮ್ಮೆ ತಾನಿನ್ನು ಎಂದಿಗೂ ಬೇಟೆಯಾಡಲಾರೆನೆಂದು ನೊಂದುಕೊಂಡಿದ್ದ. ಅವನ ಸ್ನೇಹಿತರು ಅವನಿಗೆ "ಪರ್ಡಿ ಸಂಸ್ಥೆಗೆ ನಿನ್ನ ಸೂಚನೆ ತಿಳಿಸೆಂ"ದು ಹೇಳಿದರು ಮುಂದೆ ಬರಿಯ ಎಡಗಣ್ಣಿನಿಂದ ನೋಡಿಯೂ ಗುಂಡು ಹಾಕಲು ಬರಬಹುದಾದ ರೀತಿಯಲ್ಲಿ ಒಂದು ಬಂದೂಕನ್ನು 'ಪರ್ಡಿ' ಸಂಸ್ಥೆ ಅವನಿಗೆ ನಿರ್ಮಿಸಿ ಕೊಟ್ಟಿತು.

'ಪರ್ಡಿ' ಶಾಟ್‌ಗನ್ನನ್ನೆ ಉಪಯೋಗಿಸುತ್ತಿದ್ದ ಗ್ರಾಹಕನೊಬ್ಬನು ವೃದ್ಧಾಪ್ಯದಿಂದ ಕಣ್ಣು ಕಳೆದುಕೊಂಡು ತಾನಿನ್ನು ಬರಿಯ ಹಿಂದಿನ ಕತೆಗಳನ್ನು ನೆನಸಿಕೊಂಡೇ ಸಮಾಧಾನ ಪಡಬೇಕಲ್ಲ ಎಂದು ನೊಂದುಕೊಂಡಿದ್ದ. ಸಾಯುವ ಮುಂಚೆ ತಾನು ಮತ್ತೆ ಒಮ್ಮೆಯಾದರೂ ಗಂಡು ಚಿಗರಿಯ ಬೇಟೆಯಾಡಬೇಕೆಂದು

ಆತ ಆಶಿಸಿದ್ದರಿಂದ "ಪರ್ಡಿ" ಸಂಸ್ಥೆಯ ಎಲ್ಲ ತಜ್ಞರೂ ಸೇರಿ ಒಂದು ಬಂದೂಕನ್ನು ಆ ವೃದ್ಧನಿಗಾಗಿ ನಿರ್ಮಿಸಿದರು. ಆ ಬಂದೂಕಿಗೆ ಪರಿದರ್ಶಕ ( periscope ) ವನ್ನು ಕೂಡಿಸಿದ್ದರು.

ಒಬ್ಬ ಸಹಾಯಕನೊಂದಿಗೆ ಆ ಮುದುಕ ಬೇಟೆಗೆ ಹೋದ. ಸಹಾಯಕ ಪರಿದರ್ಶಕದ ಸಹಾಯದಿಂದ ಬೇಟೆ ಸಮೀಪಿಸಿರುವುದನ್ನು ಸೂಚಿಸಿದ. ಕ್ಷಣಾರ್ಧದಲ್ಲಿ ಮುದುಕ ತನ್ನ ಇಚ್ಛೆಯನ್ನು ಪೂರ್ಣಗೊಳಿಸಿಕೊಂಡ.

ಪ್ರತಿ ಗ್ರಾಹಕನ ಅಪೇಕ್ಷೆ ಬೇರೆ ಬೇರೆ ಇರುವುದರಿಂದ ಈ ಸಂಸ್ಥೆ ಬಂದೂಕುಗಳನ್ನು ಅವರವರ ಇಚ್ಛೆಯಂತೆಯೇ ತಯಾರಿಸುತ್ತದೆ. ಉಳಿದವರಂತೆ ತಮ್ಮ ಬಂದೂಕುಗಳಿವೆಂದು ಎಂದೂ ಮಾರುಕಟ್ಟೆಗೆ ಕಳಿಸಿಕೊಡುವುದಿಲ್ಲ. ಆರ್ಡರ್ ಕೊಟ್ಟಮೇಲೆ ನಿರ್ದಿಷ್ಟ ಕಾಲಾವಧಿ ಮುಗಿದ ಮೇಲೇ ಗ್ರಾಹಕನಿಗೆ ಬಂದೂಕು ದೊರೆಯುತ್ತದೆ. ಒಂದು ಜತೆ ಶಾಟ್‌ಗನ್ನಿನ ಬೆಲೆ ೮೦೦೦ ದಿಂದ ೧೦,೦೦೦ ರೂಪಾಯಿಗಳವರೆಗಿರುತ್ತದೆ. ಬಂಗಾರದ ಕೌಶಲ್ಯಪೂರ್ಣ ಕವಚವಿರುವ ಒಂದು ಜತೆ ಬಂದೂಕು ಸುಮಾರು ೨೦,೦೦೦ ರೂ. ಬೆಲೆ ಬಾಳುತ್ತದೆ. ಬೇಟೆಯ ಚಿತ್ರಗಳನ್ನು ಈ ಕವಚದ ತಗಡಿನಲ್ಲಿ ತೆಗೆದಿಡುತ್ತಾರೆ. ಒಬ್ಬ ಅರಬ ಸಾಹುಕಾರ ಕವಚವಿರುವ ಒಂದು ಬಂದೂಕನ್ನು ೧೬,೫೦೦ ರೂಪಾಯಿಗೆ ಕೆಲದಿನಗಳ ಹಿಂದೆ ಕೊಂಡ.

ಬ್ರಿಟನ್ನಿನಲ್ಲಿ ತಯಾರಾಗುವ ಶಾಟ್‌ಗನ್‌ಗಳ ಉಕ್ಕನ್ನು ಪರಿಕ್ಷಿಸಿದಾಗ 'ಪರ್ಡಿ' ಕಂಪನಿಯ ಉಕ್ಕೇ ಸರ್ವೋತ್ತಮವೆಂದು ಸಿದ್ಧವಾಯಿತು. ಯಂತ್ರದ ಸಹಾಯವಿಲ್ಲದೆ ಇವು ತಯಾರಾಗುವುದರಿಂದ ಎಲ್ಲ ಭಾಗಗಳನ್ನು ಸೂಕ್ಷ್ಮವಾಗಿ ನಿರ್ಮಿಸಲಾಗುತ್ತದೆ. 'ಪರ್ಡಿ'ಯ ೦.೩೬೯ ಎಂಬ ಅಂಕಿತವಿರುವ ಬಂದೂಕು ಬಹು ಲೋಕಪ್ರಿಯವಾದದು.

ಪರ್ಡಿ ಕಂಪನಿಯವರು ನಿರ್ಮಿಸಿದ ಬಂದೂಕನ್ನು ಗ್ರಾಹಕರು ಮರಳಿ ಮಾರಬಯಸಿದರೆ ಸ್ವತಃ ಪರ್ಡಿ ಕಂಪನಿಯವರು ಮಾರ್ಕೆಟಿನ ಬೆಲೆಗಿಂತ ಹೆಚ್ಚು ಬೆಲೆಕೊಟ್ಟು ಕೊಳ್ಳಲು ಸಿದ್ಧರಿರುತ್ತಾರೆ. ಆದರೆ ಈ ವರೆಗೂ ಮರಳಿ ಮಾರಲು ಹೋದ ಗ್ರಾಹಕ ಮಾತ್ರ ಒಬ್ಬನೂ ಹುಟ್ಟಿಲ್ಲ ! — ★



ಸಜ್ಜನರ ಸ್ನೇಹದಲ್ಲಿ ದುರ್ಜನರೂ ಸಜ್ಜನರಾಗಬಹುದು. ಆದರೆ ದುರ್ಜನರ ಸ್ನೇಹದಲ್ಲಿ ಸಜ್ಜನರು ಮಾತ್ರ ದುರ್ಜನರಾಗಲಾರರು. ಏಕೆಂದರೆ ಹೂ ನೆಲದ ಮೇಲೆ ಬಿದ್ದರೆ ನೆಲದ ಗಂಧವನ್ನು ತಾನು ಗ್ರಹಿಸುವದಿಲ್ಲ; ನೆಲದ ಮೇಲೆ ತನ್ನ ಸುಗಂಧವನ್ನು ಬಿಡುತ್ತದೆ.

— ಸುಭಾಷಿತ.

ಕಷ್ಟದ ಕಾಲ ಮುಗಿದ ಮೇಲೆ ಸುಖ ಬರುವುದು ಒಳಿತು; ಕಗ್ಗತ್ತಲೆಯಲ್ಲಿ ಬೆಳಕಿನ ಉದಯವಾದಂತೆ ಇರುತ್ತದೆ. ಆದರೆ ಸುಖದ ತರುವಾಯ ಕಷ್ಟ ಬರುವುದು ಮಾತ್ರ ಜೀವನ್ಮರಣವಿದ್ದಂತೆ.

— ಶೂದ್ರಕ.

ಅವರು ಪಿತ್ರಾರ್ಜಿತ ಆಸ್ತಿಯಲ್ಲಿ
ರಾಮಮೂರ್ತಿಯೊಂದನ್ನೇ
ಸ್ವೀಕರಿಸಿದರು

# ಸಂಗೀತ ಸಮ್ರಾಟ್ ತ್ಯಾಗರಾಜರು



ಜಿ. ಜಿ. ಹೆಗಡೆ

ಪರಮ ಸಾಧುವೂ ಒಳ್ಳೆಯ ಗಾಯಕಭಕ್ತರೂ ಆಗಿದ್ದ ರಾಮಬ್ರಹ್ಮರು ಮೃತ್ಯುಶಯ್ಯೆಯಲ್ಲಿ ಮಲಗಿದ್ದರು. ತಮ್ಮ ಕಿರಿಯ ಮಗ ತ್ಯಾಗರಾಜನನ್ನು ಬಳಿಗೆ ಕರೆದು ಅವರು "ಮಗೂ ತ್ಯಾಗೂ, ನಾನು ನಿನಗೆ ಐಹಿಕ ಸಂಪತ್ತನ್ನೇನೂ ಬಿಟ್ಟು ಹೋಗುತ್ತಿರುವುದಿಲ್ಲ. ಆದರೆ ಎಂದೆಂದಿಗೂ ವ್ಯಯವಾಗದ ರಾಮ ಮತ್ತು ರಾಮನಾಮ ಸಂಪತ್ತನ್ನು ಕೊಟ್ಟು ಹೋಗುತ್ತಿದ್ದೇನೆ. ರಾಮನ ಹಿರಿಮೆಯಲ್ಲಿ ಶ್ರದ್ಧೆಯಿಡು. ಆತನಿಗಾಗಿ ಬದುಕು" ಎಂದು ಉಸುರಿದರು.

ತ್ಯಾಗರಾಜರಿಗೆ ಬೇಕಾದದ್ದೂ ಅದೇ. ತಂದೆಯ ಮರಣಾನಂತರ ಆತ ಪಿತ್ರಾರ್ಜಿತ ಆಸ್ತಿಯಲ್ಲಿ ಕುಟುಂಬ ದೈವತವಾದ ರಾಮನ ಮೂರ್ತಿಯೊಂದನ್ನು ಮಾತ್ರ ತೆಗೆದುಕೊಂಡು ತನ್ನ ಪಾಲಿಗೆ ಬರುವ ಉಳಿದೆಲ್ಲವನ್ನೂ ತನ್ನ ಅಣ್ಣಂದಿರಿಗೆ ಕೊಟ್ಟುಬಿಟ್ಟ.

ಕರ್ನಾಟಕ ಸಂಗೀತದ ಮಾತು ಬಂತು ಎಂದರೆ ತ್ಯಾಗರಾಜರ ಮಾತು ಬರುತ್ತದೆ. ಅವರ ಕೀರ್ತನೆಗಳೇ ಕರ್ನಾಟಕ ಸಂಗೀತ ಎನ್ನುವಂತಿದೆ. ಹೀಗಿದ್ದರೂ ತ್ಯಾಗರಾಜರು ಕೇವಲ ಗಾಯಕ ವಿದ್ವಾಂಸರಲ್ಲ. ಅವರಿಗೆ ಸಂಗೀತವು ಪರಮಾತ್ಮನನ್ನು ಒಲಿಸಿಕೊಳ್ಳುವ ಒಂದು ಸಾಧನವಾಗಿತ್ತು. ತಮ್ಮ ಸಂಗೀತ ಕಲೆಯನ್ನು ಅವರು ಶ್ರೀರಾಮನಿಗೆ ಧಾರೆಯೆರೆದಿದ್ದರು. ಅವರ ಮಂತ್ರವೆಂದರೆ ರಾಮನಾಮ. ಅವರ ದೃಷ್ಟಿಯಲ್ಲಿ ಪುಸ್ತಕವೆಂದರೆ ರಾಮಾಯಣ. ರಾಮಧ್ಯಾನದಲ್ಲೆ, ರಾಮನಾಮ ಜಪದ ಸಂಭ್ರಮದಲ್ಲಿಯೆ ಅವರ ಜೀವನ ಸವೆಯಿತು.

೧೭೬೭ ರ ಮೇ ತಿಂಗಳ ೪ ರಂದು ಮಧ್ಯಾಹ್ನ ತ್ಯಾಗರಾಜರು ಹುಟ್ಟಿದರು. ತಂದೆ ರಾಮಬ್ರಹ್ಮರು ದೇವಭಕ್ತರೂ ಗಾಯಕರೂ ಆಗಿದ್ದರೆ ತಾಯಿ ದೈವಭಕ್ತಿಯುಳ್ಳ ಸತಿಶಿರೋಮಣಿಯಾಗಿದ್ದಳು. ಇವರ ಮೂರು ಮಕ್ಕಳಲ್ಲಿ ತ್ಯಾಗರಾಜರೇ ಕಿರಿಯವರು. ಬಾಲ್ಯದಲ್ಲಿಯೆ ತ್ಯಾಗರಾಜರು ತಂದೆಯ ದೈವಭಕ್ತಿಯನ್ನು ಮೈಗೂಡಿಸಿಕೊಂಡರು. ತಂದೆ ಹಾಡುತ್ತಿದ್ದ ಭಕ್ತಿಗೀತೆಗಳನ್ನು ಕಲಿತು ಹಾಡತೊಡಗಿದರು.

ತಂಜಾವೂರಿನ ಅರಸು ಅಚ್ಯುತಪ್ಪ ನಾಯಕನ ಮಂತ್ರಿ ಗೋವಿಂದ ದೀಕ್ಷಿತರು ಸ್ಥಾಪಿಸಿದ್ದ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸಂಸ್ಕೃತ ವನ್ನೂ ದರಬಾರಿನ ಗಾಯಕ ಸೊಂಟಿ ವೆಂಕಟ ರಮಣಯ್ಯನವರಿಂದ ಸಂಗೀತವನ್ನೂ ತ್ಯಾಗ-ರಾಜರು ಕಲಿತರು.

ತ್ಯಾಗರಾಜರು ಭಕ್ತಿಪೂರ್ಣವಾದ ಭಾವ ಗೀತೆಗಳ ಮೂಲಕ ರಾಮನ ಆರಾಧನೆಗೆ ತೊಡ ಗಿದರು. ಅವರು ರಚಿಸಿದ ಮೊದಲನೆಯ ಗೀತೆ ಯಲ್ಲಿ ಅವರು "ತ್ಯಾಗರಾಜನು ಹಗಲು ರಾತ್ರಿ ರಾಘವನ ಸ್ಮರಣೆ ಮಾಡುತ್ತಾನೆ. ತನ್ನ ಜೀವನ ವನ್ನು ಗೀತೆಯ ರೂಪದಲ್ಲಿ ಅವನಿಗೆ ಅರ್ಪಿಸು ತ್ತಾನೆ. ರಾಮನೇ ಜಗತ್ತಿನ ತಾರಕ, ದೀನ ದಲಿತರಿಗೆ ಆಧಾರ. ಭಕ್ತರ ಇಷ್ಟವನ್ನು ಪೂರೈ ಸುವ ದಾತ. ಕತ್ತಲನ್ನು ನುಂಗುವ ಸೂರ್ಯ. ಗಜೇಂದ್ರನನ್ನು ಮೊಸಳೆಯಿಂದ ಪಾರುಮಾಡುವ ಆಪದ್ಬಾಂಧವ. ಮುನಿ ಶ್ರೇಷ್ಠರಿಂದ ಪೂಜಿಸಲ್ಪ ಡುವ ಸರ್ವಶಕ್ತ. ಆತನಿಗೆ ತ್ಯಾಗರಾಜ ಶರಣು ಹೋಗುತ್ತಾನೆ" ಎಂದು ರಾಮನ ಮಹಿಮೆ ಯನ್ನು ಕೊಂಡಾಡಿದ್ದಾರೆ.

ತ್ಯಾಗರಾಜರು ಸಂಗೀತವನ್ನು ಮನಮುಟ್ಟಿ ಅಭ್ಯಾಸ ಮಾಡಿದರು. ಸಾಧನೆಯಿಂದ ಅದರಲ್ಲಿ ಪ್ರಾವೀಣ್ಯ ಪಡೆದರು ಅವರಿಗೆ ಹಳೆಯ ರಾಗ ಗಳಿಂದ ತೃಪ್ತಿಯಾಗದೆ ಹರಿ ಕಾಂಭೋಜಿ, ಖರ ಹರ ಪ್ರಿಯ ಮುಂತಾದ ನೂತನ ರಾಗಗಳನ್ನು ಸೃಷ್ಟಿಸಿದರು. 'ರಾಗ ಸುಧಾರಕ' ರಾಗದಲ್ಲಿ ಅವರು ರಾಗದ ಸೌಂದರ್ಯ ಮಾಧುರ್ಯಗಳನ್ನು ಅನುಭವಿಸುವುದೆಂದರೆ ಯಾಗ, ಯೋಗ, ತ್ಯಾಗ, ಭೋಗಗಳೆಲ್ಲ ಕೊಡಬಹುದಾದೆಲ್ಲವನ್ನೂ ಅನು ಭವಿಸಿದಂತೆ ಎಂದಿದ್ದಾರೆ ಸಂಗೀತ ಶಾಸ್ತ್ರದ ಗುಟ್ಟನ್ನು ತಿಳಿಸುವ ಕೃತಿಗಳನ್ನೂ ಅವರು ಸೃಷ್ಟಿಸಿದ್ದಾರೆ.

ತೊಂಬತ್ತಾರು ಕೋಟಿ ರಾಮನಾಮ ಜಪ ವನ್ನು ಮಾಡುವ ಕಠಿಣ ತಪಸ್ಸನ್ನು ಅವರು ಆಚ ರಿಸಿದರು. ಅವರ ಅಣ್ಣ ಅವರನ್ನು ಸದಾ ಪೀಡಿ ಸುತ್ತಿದ್ದ. ಈತ ಕೆಲಸಕ್ಕೆ ಬಾರದವ, ಮೂರ್ಖ, ಕಪಟಿ, ಗೃಹಸ್ಥ ಜೀವನಕ್ಕೆ ಅಯೋಗ್ಯ ಎಂದಿ ತ್ಯಾದಿಯಾಗಿ ಆತ ತ್ಯಾಗರಾಜರನ್ನು ಜರೆಯು ತ್ತಿದ್ದ. ಆದರೆ ತ್ಯಾಗರಾಜರು ಅದಾವುದನ್ನೂ ಗಮನಿಸದೆ ತಮ್ಮ ಭಕ್ತಿ ಜೀವನವನ್ನು ಸಾಗಿ ಸಿದರು.

ಎತ್ತರವಾದ ಬಡಕಲ ಶರೀರ ತ್ಯಾಗರಾಜ ರದು. ಕಂದು ಬಣ್ಣ. ತೇಜಸ್ವಿ ಮುಖ. ಉಬ್ಬಿ ಅಗಲವಾಗಿದ್ದ ಹಣೆ. ಅವರ ಕಣ್ಣುಗಳಲ್ಲಿ ಆಂತರಿಕ ತೇಜಸ್ಸು ಚಿಮ್ಮುತ್ತಿತ್ತು. ಅವರ ಕಂಠ ಅತಿ ಮಧುರವಾಗಿತ್ತು. ತುಲಸಿ ಮಾಲೆ ಯನ್ನು ಅವರು ಕೊರಳಲ್ಲಿ ಧರಿಸುತ್ತಿದ್ದರು. ಕೈಯ್ಯಲ್ಲಿ ಜಪಮಾಲೆ ಸದಾ ತಿರುಗುತ್ತಿತ್ತು. ದಕ್ಷಿಣ ಭಾರತದ ವೈದಿಕ ಬ್ರಾಹ್ಮಣನಂತೆ ಅವರು ಉಡುಪು ತೊಡುತ್ತಿದ್ದರು. ವಾರಕ್ಕೆ ರಡು ಸಲ ಅವರು ಭಿಕ್ಷವೆತ್ತುತ್ತಿದ್ದರು. ಮನದಲ್ಲಿ ಗೀತೆ ಮೂಡಿ ಬಂದೊಡನೆ ಹಾಡಲು ಅನು ಕೂಲವಾಗಬೇಕೆಂದು ಅವರು ತಂಬೂರಿಯನ್ನು ಸದಾ ಹಿಡಿದುಕೊಂಡೇ ಇರುತ್ತಿದ್ದರು ನಸುಕಿ ನಲ್ಲಿ ನಾಲ್ಕು ಗಂಟೆಗೇ ಎದ್ದು ಕಾವೇರಿ ನದಿ ಯಲ್ಲಿ ಮಿಂದು ಸಂಧ್ಯಾವಂದನೆ ಮುಂತಾದ ವನ್ನು ಮುಗಿಸಿ ಹೂಗಳನ್ನಾರಿಸಿಕೊಂಡು ತಮ್ಮ ಗಾನಪೂಜೆಯಲ್ಲಿ ಮಗ್ನರಾಗುತ್ತಿದ್ದರು. ಮಧ್ಯಾಹ್ನ ೧೨ ಗಂಟೆಗೆ ಭೋಜನ ಆ ಮೇಲೆ ತುಸು ವಿಶ್ರಾಂತಿ ಪಡೆದು ತನ್ನ ಕೆಲವೇ ಶಿಷ್ಯರಿಗೆ ಸಂಗೀತದ ಪಾಠ ಹೇಳಿಕೊಡುತ್ತಿದ್ದರು.

ಐಹಿಕ ಸುಖಾಪೇಕ್ಷೆ ಮಾಡಲು, ದೇವರ ನಾಮವನ್ನೊಳಗೊಳ್ಳದ ಹಾಡುಗಳನ್ನು ಹಾಡಲು ತ್ಯಾಗ ರಾಜರು ತಮ್ಮ ಅನುಯಾಯಿ ಗಳಿಗೆ ಅವಕಾಶ ಕೊಡುತ್ತಿರಲಿಲ್ಲ. ಪ್ರತಿ ಏಕಾ ದಶಿಯ ದಿನ ಅವರು ಉಪವಾಸ ಮಾಡುತ್ತಿ ದ್ದರು. ಅಂದು ಅವರಿಗೆ ಆಹಾರವೆಂದರೆ ಅವರ ಕೀರ್ತನೆಗಳು ಮಾತ್ರವಾಗಿರುತ್ತಿದ್ದವು.

ಮೊದಲನೆಯ ಹೆಂಡತಿಯ ನಿಧನಾನಂತರ ಅವರು ಲಗ್ನವಾದ ಕಮಲಾಂಬಾ ಕರ್ತವ್ಯ ಪರಾಯಣಳೂ ಸಾಧ್ವಿಯೂ ಆಗಿದ್ದಳು. ಅವರಿಗೆ ಹುಟ್ಟಿದ ಒಬ್ಬಳೇ ಒಬ್ಬ ಮಗಳು ಸೀತಾಲಕ್ಷ್ಮಿಯನ್ನು ಕುಪ್ಪುಸ್ವಾಮಿ ಎಂಬವನಿಗೆ ಲಗ್ನ ಮಾಡಿಕೊಟ್ಟರು. ಈ ಅಳಿಯ ಕೂಡ ಮಾವನ ಹೆಜ್ಜೆಯಲ್ಲಿ ನಡೆಯುವವನಾಗಿದ್ದ. ವಿವಾಹ ಸಮಯದಲ್ಲಿ ಬಂದ ಬೆಲೆ ಬಾಳುವ ಉಡುಗರೆಗಳನ್ನೆಲ್ಲ ಈತ ತಿರಸ್ಕರಿಸಿ ಒಂದೇ ಒಂದು ಸುಂದರವಾದ ರಾಮನ ಚಿತ್ರವನ್ನು ಇಟ್ಟುಕೊಂಡ. ಆ ಚಿತ್ರ ಇಂದಿಗೂ ಆತನ ವಂಶಜರ ಮನೆಯಲ್ಲಿದೆ. ಸೀತಾಲಕ್ಷ್ಮಿಗೆ ಹುಟ್ಟಿದ ಒಬ್ಬನೇ ಮಗ ತನ್ನ ಮೂವತ್ತನೆಯ ವಯಸ್ಸಿನಲ್ಲಿ ತೀರಿಕೊಂಡಿದ್ದರಿಂದ ತ್ಯಾಗರಾಜರ ಹೆಸರು ಹೇಳಲು ಇಂದು ಚಿರಂಜೀವಿಗಳಾದ ಅವರ ಕೀರ್ತನೆಗಳ ಹೊರತು ಮತ್ತೇನೂ ಉಳಿಯಲಿಲ್ಲ.

ತ್ಯಾಗರಾಜರ ಅಣ್ಣ ಅವರ ಕವಿತೆಗಳನ್ನು ಸುಟ್ಟು ಹಾಕಿ ಅವರನ್ನು ಬಯ್ಯುತ್ತಿದ್ದ. ಒಮ್ಮೆಯಂತೂ ಆತ ತ್ಯಾಗರಾಜರು ಪೂಜಿಸುತ್ತಿದ್ದ ರಾಮನ ಮೂರ್ತಿಯನ್ನು ಕಾವೇರಿಯಲ್ಲಿ ಚೆಲ್ಲಿಕೊಟ್ಟುಬಿಟ್ಟ. ಆಗ ತ್ಯಾಗರಾಜರು ಒಂದು ಕೀರ್ತನೆಯಲ್ಲಿ ತಮ್ಮ ದುಃಖವನ್ನು ತೋಡಿಕೊಂಡರು. "ರಾಮಾ, ಎಲ್ಲಿ ಅಡಗಿದೆ? ಈ ಅಪನಂಬಿಗೆಯ ಜಗತ್ತಿನಲ್ಲಿ ನನ್ನನ್ನು ಏಕಾಕಿಯಾಗಿ ಮಾಡಿ ಹೊರಟುಹೋಗಬೇಡ. ನಿನ್ನನ್ನುಳಿದು ನನಗಿನ್ನಾರೂ ಇಲ್ಲ. ನನ್ನ ಬಂಧು ಬಳಗದವರು ನನ್ನನ್ನು ವಂಚಿಸಿದ್ದಾರೆ. ಜನ ನನಗೆ ದ್ರೋಹವೆಸಗಿದ್ದಾರೆ. ನನ್ನ ದುಃಖಾಶ್ರುಗಳನ್ನು ಅಳಿಸಲು ಬಾ. ನಿನ್ನ ಮುಗುಳ್ನಗೆಯಿಂದ ನನ್ನ ನಿರಾಶೆಯ ಕಾರ್ಗತ್ತಲನ್ನು ತೊಲಗಿಸು. ರಾಮಾ, ಎಲ್ಲಿರುವೆ?"

ಪರಮಾತ್ಮ ಭಕ್ತನ ಮೊರೆ ಕೇಳಿದ. ಒಂದು ಮುಂಜಾನೆ ತ್ಯಾಗರಾಜರಿಗೆ ಅವರ ರಾಮನ ಮೂರ್ತಿ ಸಿಕ್ಕಿತು. ಆನಂದಾಶ್ರುಗಳಿಂದ ಅದಕ್ಕೆ ಅಭಿಷೇಕ ಮಾಡಿ ಸುಮಧುರ ಗೀತೆಗಳಿಂದ ಈ ಪುನರ್ಮಿಲನದ ಸಂಭ್ರಮವನ್ನು ಅವರು ಆಚರಿಸಿದರು.

ತ್ಯಾಗರಾಜರ ಕೀರ್ತಿಯನ್ನು ಕೇಳಿದ ರಾಜಮಹಾರಾಜರು ಅವರನ್ನು ಕಂಡು ಗೌರವಿಸ ಬಯಸುತ್ತಿದ್ದರು. ತಂಜಾವೂರಿನ ರಾಜ ಸರಫೋಜಿ ಅವರನ್ನು ತನ್ನಲ್ಲಿಗೆ ಆಮಂತ್ರಿಸಿದ. ರಾಜನ ದೂತ ರಾಜನಲ್ಲಿ ದೊರೆಯಬಹುದಾದ ಸಂಪತ್ತಿನ ವರ್ಣನೆಯನ್ನು ಮಾಡಿದಾಗ ತ್ಯಾಗರಾಜರು ಕಣ್ಮುಚ್ಚಿಕೊಂಡು ಕಲ್ಯಾಣಿ ರಾಗದಲ್ಲಿ ಹಾಡಿದ ಹಾಡು ಅಮರ ಕೀರ್ತಿಯನ್ನು ಸಂಪಾದಿಸಿದೆ. ಐಶ್ವರ್ಯಕ್ಕಿಂತಲೂ ಪರಮಾತ್ಮನ ಭಕ್ತಿಯೆ ಶ್ರೇಷ್ಠವೆಂದಿದ್ದಾರೆ ಅವರು ಅದರಲ್ಲಿ.

ತ್ಯಾಗರಾಜರು ಬರಲು ಒಪ್ಪದ್ದನ್ನು ಕಂಡು ಸಿಟ್ಟಿಗೆದ್ದ ರಾಜ ಅವರನ್ನು ಹಿಡಿತರಲು ಭಟರನ್ನು ಕಳಿಸಿದ. ಆದರೆ ಆಗಲೇ ಆತನಿಗೆ ಬೇನೆ ಬಂತು. ಯಾರಿಂದಲೂ ಅದು ಗುಣವಾಗದೆ ಹೋಗಲು ರಾಜನಿಗೆ ಜ್ಞಾನೋದಯವಾಗಿ ಆತ ತ್ಯಾಗರಾಜರಲ್ಲಿ ಬಂದು ಕ್ಷಮೆ ಕೋರಿದ. ಪಶ್ಚಾತ್ತಾಪ ಮತ್ತು ಭಕ್ತಿ ಸಾಧನೆಯಿಂದ ಗುಣಹೊಂದಿದ. ತ್ಯಾಗರಾಜರ ಸಂಗೀತ ಶಾಲೆಗಾಗಿ ಒಂದು ಕಟ್ಟಡ ಕಟ್ಟಿಸಲು ಆತ ಯೋಚಿಸಿದ. ಆದರೆ ಅಷ್ಟರಲ್ಲಿ ತ್ಯಾಗರಾಜರ ಶಿಷ್ಯರಲ್ಲೊಬ್ಬನಾದ ವೆಂಕಟರಮಣ ಎಂಬಾತ ಕಟ್ಟಡವನ್ನು ಕಟ್ಟಿಸಿ ಮುಗಿಸಿದ್ದರಿಂದ ರಾಜ "ತ್ಯಾಗರಾಜರು ಸ್ವೀಕರಿಸುವವರಲ್ಲ, ಕೊಡುವವರು" ಎನ್ನುವಂತಾಯಿತು.

ತ್ಯಾಗರಾಜರು ತೀರ್ಥಾಟನೆ ಮಾಡಿ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದರು. ಯಾರಿಂದಲೂ ಅವರು ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಜೀವನದಲ್ಲಿ ಅವರಿಗೆ ಸಂಗೀತ ಮತ್ತು ಭಕ್ತಿಗಳನ್ನು ಬಿಟ್ಟರೆ ಮತ್ತಾವುದರಲ್ಲೂ ಆಸ್ಥೆಯಿರಲಿಲ್ಲ.

ತ್ಯಾಗರಾಜರು ತಮಿಳು ನಾಡಿನಲ್ಲಿ ಬಾಳಿದರೂ ತೆಲುಗಿನಲ್ಲಿ ತಮ್ಮ ಕೃತಿಗಳನ್ನು ಬರೆದರು. ಅದು ಆ ಕಾಲದ ಸಂಗೀತ ಭಾಷೆಯಾಗಿತ್ತು. ಅವರ ಹಾಡುಗಳನ್ನು ಕೃತಿಗಳೆಂದು ಕರೆಯುವದು ರೂಢಿ. ಹೆಚ್ಚಾಗಿ ಅವುಗಳಲ್ಲಿ ಪಲ್ಲವಿ, ಅನುಪಲ್ಲವಿ, ಒಂದು ನುಡಿ ಹೀಗಿದ್ದು ಕೊನೆಗೆ "ತ್ಯಾಗರಾಜನುತ" ಎಂದು ಮುದ್ರಿಕೆ ಇದೆ. ಹಾಡುಗಳಲ್ಲದೆ ಹರಿಕಥೆಯಂಥ ಪ್ರಬಂಧಗಳನ್ನೂ ಅವರು ಬರೆದಿದ್ದಾರೆ. ಅವರ "ಪ್ರಹ್ಲಾದ ಚರಿತ"ದಲ್ಲಿ ಪುರಂದರ ದಾಸರನ್ನು ಗೌರವದಿಂದ ಸ್ತುತಿಸಿದ್ದಾರೆ.

ತ್ಯಾಗರಾಜರು ೭೦ ವರ್ಷ ಕಾಲ ಜೀವಿಸಿದರು. ೧೮೪೭, ಜೂನ ತಿಂಗಳಲ್ಲಿ ಅವರು ಸಂನ್ಯಾಸ ಸ್ವೀಕರಿಸಿದರು. ತಮ್ಮ ಕೊನೆಯ ದಿನಗಳನ್ನವರು ಭಜನೆ, ಕೀರ್ತನೆ, ಚಿಂತನೆಗಳಲ್ಲಿ ಕಳೆದರು. ತಮ್ಮ ಕೊನೆಯ ಹಾಡಿನಲ್ಲಿ ಅವರು "ರಾಮಾ, ನನಗಿನ್ನೂ ಮೋಕ್ಷಪ್ರಾಪ್ತಿಯಾಗುವುದಿಲ್ಲವೇಕೆ ?" ಎಂದು ಹೇಳುತ್ತಿದ್ದಂತೆ ಅವರ ಆತ್ಮ ಇಹಲೋಕವನ್ನು ತ್ಯಜಿಸಿತು.

ತ್ಯಾಗರಾಜರು ರಾಮಭಕ್ತರಾದ್ದರಿಂದ ವೈಷ್ಣವರೆನ್ನಬೇಕು. ಆದರೆ ಅವರು ಮತಭ್ರಾಂತರಲ್ಲ. ಅವರಿಗೆ ಭಕ್ತಿಯೆ ಮುಖ್ಯ. ಒಣ ವಾದವಿವಾದಗಳಿಗೆ ಅವರು ಇಂಬುಗೊಡುತ್ತಿರಲಿಲ್ಲ. "ದ್ವೈತಮು ಸುಖಮಾ ಅದ್ವೈತಮು ಸುಖಮಾ?" ಎಂಬ ಗೀತದಲ್ಲಿ ಅವರು ತಮ್ಮ ಈ ವಿಶಾಲ ಮನೋಭಾವವನ್ನೇ ವ್ಯಕ್ತಪಡಿಸಿದ್ದಾರೆ.

ಅವರ ಊರಾದ ತಿರುವೈಯಾರಿನಲ್ಲಿ ಪ್ರತಿ ವರ್ಷ ಜನವರಿ ತಿಂಗಳಲ್ಲಿ ದಕ್ಷಿಣ ಭಾರತದ ನಾನಾ ಕಡೆಗಳ ಸಂಗೀತಗಾರರು ಕಲೆತು ತ್ಯಾಗರಾಜರಿಗೆ ತಮ್ಮ ಶ್ರದ್ಧಾಂಜಲಿಯನ್ನರ್ಪಿಸುತ್ತಾರೆ. ಈ ವರ್ಷ ತ್ಯಾಗರಾಜರ ೧೧೪ ನೆಯ ಪುಣ್ಯತಿಥಿ ದಿನಾಚರಣೆಯ ಸಂದರ್ಭದಲ್ಲಿ ಸರಕಾರವು ವಿಶೇಷ ಅಂಚೆ ತಿಕೀಟೊಂದನ್ನು ಹೊರಡಿಸಿದೆ. ಈ ವರ್ಷ ತ್ಯಾಗರಾಜರ ಸಮಾಧಿಸ್ಥಾನದಲ್ಲಿ ಕಟ್ಟಲಾಗುತ್ತಿರುವ ವಾಲ್ಮೀಕಿ ಮಂಟಪದಲ್ಲಿ ತ್ಯಾಗರಾಜರ ೮೦೦ ಕೀರ್ತನೆಗಳನ್ನು ಕೆತ್ತಿರುವ ಹಾಸುಗಲ್ಲುಗಳನ್ನು ಇಡಲಾಗುವುದು. ಸುಮಾರು ೪೦೦ ಕೀರ್ತನೆಗಳನ್ನು ಕೆತ್ತಿರುವ ೨೦೦ ಕಲ್ಲುಗಳನ್ನು ಈಗಾಗಲೇ ಅಲ್ಲಿ ಇಡಲಾಗಿದೆ.

ಅತ್ಯಂತ ಭಾವಪೂರ್ಣವಾಗಿ ಮಾನವತೆಯ ಸಾರವನ್ನೂ ಹೊಂದಿರುವ ತ್ಯಾಗರಾಜರ ಕೀರ್ತನೆಗಳು ಅಮರವಾಗಿರುವವು ಎನ್ನುವುದರಲ್ಲಿ ಸಂದೇಹವೇ ಇಲ್ಲ. *



ಎಂದೂ ಬಾರದಿದ್ದ ಆ ಗೃಹಸ್ಥರು ತಮ್ಮ ಪ್ರವಚನ ಕೇಳಲು ನಿತ್ಯ ಬರತೊಡಗಿದ್ದನ್ನು ಕಂಡು ಪ್ರವಚನಕಾರರು ಹೇಳಿದರು. "ಏನು ಸ್ವಾಮಿ, ತಮ್ಮಲ್ಲಾಗಿರುವ ಪರಿವರ್ತನೆ ಶ್ಲಾಘನೀಯವಾದದ್ದು"

ಆಗ ಆ ಗೃಹಸ್ಥ "ಪರಿವರ್ತನೆಯೇನು ಬಂತು ಸ್ವಾಮಿ, ಮನೆಯಾಕೆಯ ಉಪದೇಶ ಕೇಳುವುದಕ್ಕಿಂತ ನಿಮ್ಮ ಉಪದೇಶ ಕೇಳುವುದೇ ಸುಖವೆಂದು ಭಾವಿಸಿ ಬರುತ್ತಿದ್ದೇನೆ." ಎಂದರು.

ಜೇನ್ನೊಣದ ರಾಜ್ಯ ಕೂಲಿಕಾರರ ಸರ್ವಾಧಿಕಾರ. ಅದು ಆದ್ಯಂತ ಕಮ್ಯುನಿಸ್ಟ್. ಈ ರಾಜ್ಯದ ಅಧಿಪತಿ ರಾಣಿ ಜೇನ್ನೊಣ. ಆದರೆ ರಾಣಿಯನ್ನು ಅಧಿಪತಿಯೆನ್ನುವುದಕ್ಕಿಂತಲೂ ಸರ್ವಾಧಿಕಾರಿ ಎನ್ನಬಹುದು. ಏಕೆಂದರೆ ರಾಣಿ ಹುಟ್ಟು ರಾಣಿಯಲ್ಲ— ಕೂಲಿಕಾರರಿಂದ ನಿರ್ಮಿಸಲ್ಪಟ್ಟ ಅಧಿಪತಿ. ರಾಣಿಯ ಜೀವನ ಯಾವನೊಬ್ಬ ಕಮ್ಯುನಿಸ್ಟ್ ಸರ್ವಾಧಿಕಾರಿಯ ಜೀವನದಂತೆಯೆ ಹಿಂಸಾತ್ಮಕವಾಗಿ ಪ್ರಾರಂಭವಾಗುತ್ತದೆ.



ವಸಂತ ಗ್ರೀಷ್ಮ ಕಾಲಗಳಲ್ಲಿ ರಾಣಿ ಜೇನ್ನೊಣ ದಿನಕ್ಕೆ ೧,೫೦೦ ರಂತೆ ಇಡಬಹುದಾದ ತತ್ತಿಗಳು ಒಡೆದು ಹುಳ ಹೊರಬಂದಾಗ ಕೂಲಿಕಾರ ಹುಳಗಳು ಕೆಲವಕ್ಕೆ ಮಾತ್ರ ನಿರಂತರವಾಗಿ "ರಾಜಮಧು" ಎಂಬ ವಿಶಿಷ್ಟ ಜೇನನ್ನುಣಿಸುತ್ತವೆ. ಅವೇ ರಾಣಿ ನೊಣಗಳಾಗತಕ್ಕವು. ಹೀಗೆ ಒಂದು ಹುಟ್ಟಿನಲ್ಲಿ ಒಮ್ಮೆಗೆ ಅನೇಕ ರಾಣಿ ಹುಳಗಳು ಬೇರೆ ಬೇರೆ ಕಣಗಳಲ್ಲಿ ಬೆಳೆಯುತ್ತಿರುತ್ತವೆ. ಆದರೆ ಯಾವುದಾದರೊಂದು ರಾಣಿ ಹುಳ ಪ್ರಬುದ್ಧವಾಗಿ ಕಣವನ್ನು ಬಗಿದು ಹೊರ ಬಂದೊಡನೆ ಮೊಟ್ಟ-ಮೊದಲು ಇತರ ರಾಣಿ ಕಣಗಳನ್ನು ಹರಿದು ಅಲ್ಲಿ ಬೆಳೆಯುತ್ತಿರುವ ತನ್ನ ಸೋದರಿಯರನ್ನು ಕೊಲೆ ಮಾಡಿಬಿಡುತ್ತದೆ. ಎರಡು ರಾಣಿಯರು ಏಕಕಾಲದಲ್ಲಿ ಪ್ರಬುದ್ಧರಾದರೆ ತತ್‍ಕ್ಷಣ ಅತ್ಯಂತ ಕ್ರೂರವಾದ ಸ್ಟಾಲಿನ್-ಟ್ರಾಟ್ಸ್ಕಿ ಕದನ ಪ್ರಾರಂಭವಾಗುತ್ತದೆ. ಎರಡರಲ್ಲೊಂದು, ಟ್ರಾಟ್ಸ್ಕಿಯಂತೆ, ನಾಶವಾದ ಹೊರತು ರಣಾಗ್ರ ನಿಲ್ಲುವುದಿಲ್ಲ. ಕೆಲವೊಮ್ಮೆ ಹೋರಾಟದ ಕೊನೆಯಲ್ಲಿ ಎರಡೂ ಸತ್ತು ಹೋಗುವುದುಂಟು.

ರಾಣಿಯ ಕೆಲಸ ಕೇವಲ ತತ್ತಿಗಳನ್ನಿಡುವುದಾದರೂ ರಾಣಿಯಿಲ್ಲದೆ ಈ ಕೂಲಿಕಾರ ರಾಜ್ಯ ಸಾಗದು. ರಾಣಿಯೇ ಜೇನ್ನೊಣಗಳ ವಸತಿಯ ಭಾವನಾತ್ಮಕ ಕೇಂದ್ರ. ಅವಳ ಸೇವೆಗಾಗಿ ಯಾವಾಗಲೂ ಅನುಚರಿಯರ ಬಳಗವೇ ಬೆಂಬತ್ತಿರುತ್ತದೆ. ಕೂಲಿಕಾರ ಹುಳಗಳು ತಮ್ಮ ಮೀಸೆಗಳಿಂದ ಅವಳನ್ನು ಸ್ಪರ್ಶಿಸಿ ರಾಜ ಭಕ್ತಿಯಿಂದುಂಟಾಗುವ ಸಮಾಧಾನವನ್ನು ಪಡೆಯುತ್ತವೆ. ಯಾವುದಾದರೊಂದು ವಸತಿಯಲ್ಲಿ ಆಹಾರದ ಕೊರತೆಯಾದರೆ ಉಳಿದವೆಲ್ಲ ಉಪವಾಸ ಬಿದ್ದರೂ ಕೊನೆಯ ವರೆಗೆ ರಾಣಿಗೆ ಜೇನು ಸಿಗುವುದು. ರಾಣಿ ನಾಶ ಹೊಂದಿದರೆ ಇಡೀ ವಸತಿಯೇ ಗೊಂದಲಕ್ಕೆ ಪಕ್ಕಾಗುವುದು.

ಆದರೂ ಒಮ್ಮೊಮ್ಮೆ ರಾಣಿಯ ಪ್ರಜೆಗಳು ಅವಳ ಮೇಲೆ ಅಸಂತೋಷಗೊಳ್ಳುವುದುಂಟು. ಹಾಗಾದರೆ ಕೂಲಿಕಾರರು ರಾಣಿಯನ್ನು ಸುತ್ತಲೂ ಮುತ್ತಿ ಚೆಂಡಿನಂತಾಗಿ ಉಸಿರು ಕಟ್ಟಿಸಿ ಕೊಂದುಹಾಕುತ್ತವೆ. ಸರ್ವಾಧಿಕಾರಿಗಳು ಕೂಡ ಜನಾಗ್ರಹಕ್ಕೆ ಅಂಜಬೇಕಾಗುತ್ತದೆ!

ಭಾರತೀಯ ಕವಿಗಳು ಎಲ್ಲಾದರೂ ಶುದ್ಧ ತಪ್ಪು ಮಾಡಿದ್ದರೆ ಅದು ಜೇನ್ನೊಣಗಳ

...ದೊಂದು ಕಮ್ಯುನಿಸ್ಟ್
...ರ್ವಾಧಿಕಾರ !

# ಜೇನ್ನೊಣದ ಪ್ರಪಂಚ

ಆರ್. ಕೆ. ನಾಯಕ

ವಿಷಯದಲ್ಲಿ. ಅವರು ಮಕರಂದವನ್ನು ಕೂಡಿಸುವ ನೊಣ ಗಂಡೆಂದು ವರ್ಣಿಸಿದ್ದಾರೆ. ನಿಜವಾಗಿ ಜೇನನ್ನುಸಂಗ್ರಹಿಸುವುದು ಹೆಣ್ಣು ತುಂಬಿಗಳು. ಕೆಲಸಗಾರ ಜೇನ್ನೊಣಗಳೆಲ್ಲ ಹೆಣ್ಣೇ. ಆದರೆ ಅವು ಸಾಮಾನ್ಯವಾಗಿ ತತ್ತಿಯಿಡುವುದಿಲ್ಲ. ರಾಣಿ ಸತ್ತು ಹುಟ್ಟು ಅರಾಜಕವಾದಾಗ ಅವುಗಳಲ್ಲಿ ಕೆಲವು ರಾಜಮಧುವನ್ನು ಸೇವಿಸಿ ತತ್ತಿ ಇಡಲು ಪ್ರಾರಂಭಿಸಿದರೂ ಹುಟ್ಟುವ ಮರಿಗಳೆಲ್ಲ ಗಂಡು ಜೇನ್ನೊಣಗಳೇ ಆಗಿರುತ್ತವೆ.

ಜೇನ್ನೊಣಗಳ ಲೈಂಗಿಕ ಜೀವನದ ವೈಚಿತ್ರ್ಯ ಇದೇ. ಮುಂದೆ ಕೆಲಸಗಾರ ಹೆಣ್ಣುಗಳಾಗಿ ಅಥವಾ ರಾಣಿಯಾಗಿ ರೂಪುಗೊಳ್ಳಲಿರುವ ತತ್ತಿಗಳನ್ನಿಡಬೇಕಾದರೆ ಮಾತ್ರ ರಾಣಿ ನೊಣಕ್ಕೆ ಪುರುಷ ಸಂಪರ್ಕ ಬೇಕು. ಗಂಡು ತುಂಬಿಯಾಗಲಿರುವ ತತ್ತಿಗಳನ್ನಾದರೆ ರಾಣಿ—ಕೆಲವೇಳೆ ಕೆಲಸಗಾರರು ಕೂಡ — ಪುರುಷ ಸಂಪರ್ಕವಿಲ್ಲದೆ ಇಡಬಲ್ಲವು.

ಜೇನು ಹುಟ್ಟಿನ ರಾಜ್ಯದಲ್ಲಿ ಗಂಡು ಜೇನ್ನೊಣದ ಬಾಳು ಮಾತ್ರ ಅತಿ ಕರುಣಾಜನಕವಾದುದು. ಅದು ಹರಕೆಗೆಂದೇ ಕೊಬ್ಬಿಸಿದ ಕುರಿ. ಜೇನು ಹುಟ್ಟಿನಲ್ಲಿ ನೂರಕ್ಕಿಪ್ಪತ್ತರಷ್ಟು ಕಣಗಳು ಗಂಡು ಹುಳಗಳಿಗಾಗಿ ರಚಿಸಿದ ದೊಡ್ಡ ಕೋಶಗಳಾಗಿರುತ್ತವೆ. ಅಲ್ಲಿ ರಾಣಿಯ ಕುಮಾರಿ ಮಾತೃತ್ವದಿಂದ ಅವು ಹುಟ್ಟುತ್ತವೆ. ತತ್ತಿಯಿಂದ ನೊಣವಾಗಿ ತನ್ನ ಕಣಗೂಡಿನ ಬಾಗಿಲು ಹರಿದು ಹೊರಗೆ ಬರಲು ಗಂಡು ನೊಣಕ್ಕೆ ೨೪ ದಿನ ಹಿಡಿಯುತ್ತದೆ. ತಮ್ಮ ಜೀವಮಾನದಲ್ಲಿ ಅವು ಮಾಡುವ ಕೆಲಸವೆಂದರೆ ಇದೊಂದೇ. ಅಂದಿನಿಂದ ಅವು ಕೆಲಸಗಾರ ನೊಣಗಳಿಂದ ಪೋಷಿತವಾಗಿ ಕಡೆತನಕ ಬದುಕಬೇಕು.

ಅವುಗಳನ್ನು ದೂರಿ ಫಲವಿಲ್ಲ. ಪಾಪ! ಜೇನಿನ ಲೋಕದಲ್ಲಿ ಕೆಲಸಕ್ಕೆ ಬೀಳುವ ಯಾವ ಆಯುಧೋಪಕರಣವನ್ನೂ ಗಂಡು ಪಡೆದು ಬರುವುದಿಲ್ಲ. ರಾಜಮಧುವನ್ನಾಗಲಿ ಮೇಣವನ್ನಾಗಲಿ ತಯಾರಿಸುವ ಗ್ರಂಥಿಗಳು ಅವುಗಳಿಗಿಲ್ಲ. ಅವುಗಳ ನಾಲಗೆ ಮಕರಂದವನ್ನು ಸಂಗ್ರಹಿಸಲು ಅನುಕೂಲವಾಗಿಲ್ಲ. ಅವುಗಳ ಕಾಲಿಗೆ ಪರಾಗ ಚೀಲಗಳಿಲ್ಲ.

ಹೌದು, ಗಂಡು ಜೇನ್ನೊಣದ ಶೌರ್ಯ ನೋಡಿ ನೀವು ಗಾಬರಿಯಾಗಬಹುದು. ತೊಂದರೆ ಕೊಟ್ಟಾಗ ಅದು ತನ್ನ ಸ್ಥೂಲ ದೇಹವನ್ನೆತ್ತಿ ಹಾರುತ್ತ ಭಯಂಕರವಾಗಿ ಗುಂಯ್ಗುಡುತ್ತದೆ. ಆದರೆ ಅದರ ಮೂತಿಗೆ ಕೊಂಡಿಯೇ ಇಲ್ಲದ್ದರಿಂದ ಅದು ನಿಮಗೇನೂ ಮಾಡಲಾರದು.

ಗಂಡು ನೊಣದ ಬಾಳೆಲ್ಲ ರಾಣಿಗೆ ಗರ್ಭಾಧಾನ ಮಾಡುವುದಕ್ಕಾಗಿದೆ. ಚಿಕ್ಕಂದಿನಿಂದಲೇ ಅದು ಶುಭ್ರ ದಿನಗಳಲ್ಲಿ ಬೆಚ್ಚನ್ನ ಬಿಸಿಲಲ್ಲಿ ಎತ್ತರ ಎತ್ತರಕ್ಕೆ ಹಾರುವ ಅಭ್ಯಾಸ ಮಾಡುತ್ತದೆ. ಅದು ಮರಗಳಿಗಿಂತಲೂ ಮೇಲಕ್ಕೆ ಹಾರಬಹುದು. ರಾಣಿಯೊಡನೆ ಅದರ ಸಂಗಮ ಎಂದೂ ಹುಟ್ಟಿನೊಳಗಾಗುವುದಿಲ್ಲ. ಪ್ರಣಯಾರಾಧನೆ ಉನ್ನತ ಅಂತರಿಕ್ಷದಲ್ಲೇ ಆಗಬೇಕು. ರಾಣಿ ನೊಣಕ್ಕೆ ಕಾಮೋತ್ತೇಜನೆಯಾದಾಗ

ಅದು ಗಗನಕ್ಕೆ ಹಾರುತ್ತದೆ. ಸಂಗಡಲೇ ಗಂಡು ನೊಣಗಳ ಗಡಣ ಬೆಂಬತ್ತುತ್ತದೆ. ರಾಣಿಯೊಡನೆ ಅತಿ ಎತ್ತರಕ್ಕೆ ಹಾರಬಲ್ಲ ಗಂಡಿಗೆ ಅದರ ಪ್ರಣಯ ಮೀಸಲು. ರಾಣಿಯ ಪ್ರೇಮಾನುಗ್ರಹವಾಗಲಿ ಬಿಡಲಿ, ಗಂಡು ಜೀವದ ಬೆಲೆಯನ್ನು ತೆರಬೇಕಾಗುತ್ತದೆ. ಸಂಭೋಗವಾದ ಮೇಲೆ ಬಸವಳಿದ ರಾಣಿ ಮತ್ತು ಅವಳ ಪ್ರಿಯ ಕೆಳಗುರುಳುತ್ತಾರೆ ರಾಣಿ ಚೇತರಿಸಿಕೊಂಡು ಎದ್ದು ಹಾರುತ್ತಾಳೆ; ಅವಳ ಸಫಲ ಪ್ರಣಯಿ ಮಾದ್ರಿಯನ್ನು ಕೂಡಿದ ಪಾಂಡುವಿನಂತೆ ಪರಂಧಾಮ ಸೇರುತ್ತಾನೆ. ಪ್ರಣಯದ ಹಾರಾಟದಲ್ಲಿ ಭಾಗವಹಿಸಿದ ಇತರ ಅಸಫಲ ಹುರಿಯಾಳುಗಳಲ್ಲಿ ಕೂಡ ಬಹುಭಾಗ ಹಾರುವ ಹಕ್ಕಿಗಳಿಗೋ ಡ್ರಾಗನ್ ಕೀಟಕ್ಕೋ ತುತ್ತಾಗುತ್ತವೆ. ತುಂಬ ಪ್ರಣಯಿಗಳ ಬಳಗವಿರುವುದರಿಂದ ರಾಣಿಗೆ ಪಕ್ಷಿ–ಕೀಟ ಶತ್ರುಗಳಿಂದ ಪಾರಾಗಲು ಅವಕಾಶ ಹೆಚ್ಚಾಗುತ್ತದೆ.

ಒಮ್ಮೆ ಸಂಯೋಗವಾದರೆ ಲಕ್ಷಾಂತರ ವೀರ್ಯಾಣುಗಳನ್ನು ತನ್ನ ಚೀಲದಲ್ಲಿ ಧರಿಸಿ ರಾಣಿ ದಿನಕ್ಕೆ ಸಾವಿರಾರಂತೆ ಲಕ್ಷಾಂತರ ತತ್ತಿಗಳನ್ನಿಡುತ್ತ ಹೋಗಬಲ್ಲದು. ಒಂದು ರಾಣಿ ಒಂದು ಜೀವಮಾನದಲ್ಲಿ ಹತ್ತು ಲಕ್ಷ ತತ್ತಿಗಳನ್ನಿಟ್ಟೀತು.

ಹೂವಿನ ಋತು ಮುಗಿದು ಮಕರಂದದ ಕೊರತೆಯೆನಿಸತೊಡಗಿದಾಗ ಬಡ ಗಂಡು ತುಂಬಿಗಳ ಕ್ಲೇಶ ಮೊದಲಿಡುತ್ತದೆ. ಕೆಲಸಗಾರರು ಅವುಗಳ ಮೇಲೆ ಕೆರಳುತ್ತವೆ. ಗಂಡುಗಳ ಮೇಲೆ ದಬ್ಬಾಳಿಕೆ ತೊಡಗಿದಾಗ ಒಮ್ಮೆಲೇ ಹೀಗೇಕೆ ಎಂದು ತಿಳಿಯದೆ ಅವು ಪೆಚ್ಚಾಗುತ್ತವೆ. ಅವುಗಳ ಆಟೋಪವೆಲ್ಲ ಇಳಿಯುತ್ತದೆ. ಕೆಲವು ಹುಟ್ಟು ಬಿಟ್ಟು ಹೊರಹಾರುತ್ತವೆ. ಒಮ್ಮೆ ಹೊರಹಾರಿದವುಗಳಿಗೆ ಮರಳಿ ಒಳಗೆ ಪ್ರವೇಶ ಸಿಗುವುದಿಲ್ಲ ಅವು ಚಳಿಗಲ್ಲದಿದ್ದರೆ ಉಪವಾಸಕ್ಕೆ ಬಲಿಯಾಗುತ್ತವೆ. ಒಳಗೇ ಉಳಿದವು ಒಂದು ಕಡೆ ತೆಪ್ಪಗೆ ಬಿದ್ದಿದ್ದು ನಿರಾಹಾರದಿಂದ ಸಾಯುತ್ತವೆ. ಆ ಮೇಲೆ ಗಂಡು ತತ್ತಿಗಳನ್ನೂ ಎಳೆಯ ಹುಳಗಳನ್ನೂ ಅವುಗಳ ಕಣಗಳಿಂದ ಕ್ರೂರವಾಗಿ ಹೊರಗಳೆದು ಕೆಲಸಗಾರ ನೊಣಗಳು ಹತ್ಯಾಕಾಂಡ ಕೈಕೊಳ್ಳುತ್ತವೆ. ಗಂಡುನೊಣವಾಗಲಿರುವ ತತ್ತಿಗೆ ತಂದೆಯೇ ಬೇಕಾಗಿಲ್ಲವಾದ್ದರಿಂದ ತಳಿ ಕಾಪಾಡುವುದಕ್ಕಾಗಿ ಕೂಡ ಒಂದೂ ಗಂಡು ಜೇನ್ನೊಣವನ್ನುಳಿಸುವ ಅಗತ್ಯವಿಲ್ಲ !

ಜೇನ್ನೊಣಗಳ ರಾಜ್ಯದಲ್ಲಿ ಎಲ್ಲವೂ ಶ್ರಮವಿಭಾಗದಿಂದ ನಡೆಯುತ್ತದೆ. ಕೆಲಸಗಾರ ನೊಣಗಳ ಆಯುಷ್ಯ ಸುಮಾರು ಎಂಟು ವಾರ. ಈ ಅವಧಿಯಲ್ಲಿ ಅವು ಹಲವು ತರಗತಿಗಳಲ್ಲಿ ತೇರ್ಗಡೆ ಹೊಂದಿ ಕೊನೆಗೆ ಮಕರಂದ ಸಂಗ್ರಹದ ಹಾರಾಟದ ಪದವಿಯನ್ನು ಪಡೆಯುತ್ತವೆ. ಕೀಟಾವಸ್ಥೆಯನ್ನು ಮುಗಿಸಿ ರೆಕ್ಕೆಯೊಡೆದು ಮರಿದುಂಬಿಯಾದ ಮೊದಲ ಕೆಲ ದಿನಗಳವರೆಗೆ ಅವು ಕೋಶಗಳನ್ನು ನೆಕ್ಕಿ ಸ್ವಚ್ಛಗೊಳಿಸಿ ಅವುಗಳನ್ನು ರಾಣಿಗೆ ತತ್ತಿಯಿಡಲು ಯೋಗ್ಯವಾಗಿ ಮಾಡುತ್ತವೆ. ಆ ಮೇಲೆ ಒಂದು ವಾರ ಕೀಟಾವಸ್ಥೆಯಲ್ಲಿರುವ ಮರಿಗಳಿಗೆ ಆಹಾರ ಕೊಡುವ ತರಬೇತಿ; ಅನಂತರ "ಪದವೀಧರ" ನೊಣಗಳು ತಂದ ಪರಾಗವನ್ನು ಹುಟ್ಟಿನೊಳಗೆ ಒಟ್ಟಿಡುವುದು, ಮೇಣವನ್ನು ಜಿನುಗಿಸಿ ಹುಟ್ಟು ಕಟ್ಟುವುದು, ಹೊರಗಿಂದ ಬಂದ ಮಕರಂದವನ್ನು ತೆಗೆದುಕೊಂಡು ಕೂಡಿಡುವುದು, ಹುಟ್ಟಿನ ಬಾಗಿಲಲ್ಲಿ ಕಾವಲು ನಿಲ್ಲುವುದು ಈ ಹೊಣೆಗಳನ್ನು ಒಂದೊಂದಾಗಿ ನಿರ್ವಹಿಸಲು ಕಲಿತು ಕೊನೆಗೆ ಹೊರಗೆ ಹೋಗಿ ಮಕರಂದವನ್ನರಸಿ ತರುವ ಗುರುತರ ಕರ್ತವ್ಯವನ್ನು ಸ್ವೀಕರಿಸಬೇಕು. ಈ ಕಾರ್ಯದಲ್ಲಿ ಜೀವವನ್ನು ಸವೆಸುತ್ತ ಸವೆಸುತ್ತ ಅದರ ರೆಕ್ಕೆಗಳು ಹರಿದು ಮಕರಂದವನ್ನು ಹೊತ್ತು ತರಲು ಅಸಾಧ್ಯವಾಗುವವರೆಗೂ ದುಡಿದು ದುರ್ಬಲಾವಸ್ಥೆಯಲ್ಲಿ ಯಾವುದಾದರೂ

ಹಕ್ಕಿಗೋ ಕೀಟಕ್ಕೋ ಆಹಾರವಾಗಿ ಅದು ಜೀವನವನ್ನು ಸಮಾಪ್ತಿಗೊಳಿಸುತ್ತದೆ.

ಜೇನ್ನೊಣಗಳ ಲೋಕ ಕ್ರೂರವೆನ್ನುವಿರಾ ? ಹಾಗೆನ್ನುವುದು ಕಷ್ಟ. ಕೆಲಸಗಾರ ನೊಣಗಳಲ್ಲಿ ತಾವು ತತ್ತಿಯಿಡದಿದ್ದರೂ ಮಾತೃತ್ವ ಭಾವನೆ ಧಾರಾಳವಾಗಿದೆ. ತತ್ತಿಗಳನ್ನಿಡುವುದೊಂದೇ ರಾಣಿಯ ಕೆಲಸ. ಅವುಗಳ ಆರೈಕೆ ಮಾಡಿ, ಮರಿಗಳನ್ನು ಪೋಷಿಸಿ ಕಾಪಾಡುವುದೆಲ್ಲ ಕೆಲಸಗಾರ ನೊಣಗಳೇ.

ಅವುಗಳ ಸಮಷ್ಟಿಬುದ್ಧಿಯೂ ಪ್ರಶಂಸನೀಯವಾಗಿದೆ. ಆಹಾರದ ಕೊರತೆಯಾದಾಗ ಇದನ್ನು ಕಾಣಬಹುದು. ಹಸಿದ ನೊಣಗಳ ಹುಟ್ಟಿನೊಳಗೆ ಸ್ವಲ್ಪ ಆಹಾರವನ್ನು ಯಾರಾದರೂ ಸುರಿದರೆ ಮೊದಲು ಬಂದವರಿಗೆ ಮೊದಲು ಎಂದು ಅವು ಕಬಳಿಸುವುದಿಲ್ಲ. ಒಟ್ಟಾಗಿ ಹಂಚಿಕೊಂಡು ಉಂಡು ಒಟ್ಟಾಗಿಯೆ ಹಸಿದು ಸಾಯುತ್ತವೆ.

ಸ್ವಜಾತಿಯ ದೀನ ದುರ್ಬಲರ ಮೇಲೆ ಅವುಗಳ ಕರುಣೆಯೂ ನಿರೀಕ್ಷಕರನ್ನು ಬೆರಗುಗೊಳಿಸಿದೆ. ಒಬ್ಬ ನಿರೀಕ್ಷಕನು ಬೆಳಕಿನತ್ತ ಹಾರುವ ಅಭ್ಯಾಸದಿಂದಾಗಿ ತನ್ನ ಕನ್ನಡಿಯ ಕಿಡಿಕಿಗೆ ಬಡಿದು ಸೋತು ಕೆಳಗುರುಳಿ ಸತ್ತಂತಿದ್ದ ಅನೇಕ ಜೇನ್ನೊಣಗಳನ್ನು ಗುಡಿಸಿ ಹೊರಹಾಕಿದ. ತುಸು ಹೊತ್ತಿನಲ್ಲಿ ಆ ದಾರಿಯಲ್ಲಿ ಬಂದ ಒಂದು ಕೆಲಸಗಾರ ಜೇನ್ನೊಣ ಅಲ್ಲೆ ಇಳಿದು, ಬಿದ್ದಿದ್ದ ನೊಣವನ್ನು ತನ್ನ ಮೀಸೆಗಳಿಂದ ಪರೀಕ್ಷಿಸತೊಡಗಿತು. ಆ ಮೇಲೆ ತನ್ನ ನಾಲಿಗೆ ತೆರೆದು ಆ ಪ್ರಜ್ಞಾಹೀನ ನೊಣದ ಬಾಯಲ್ಲಿ ಒಂದು ತಟುಕು ಮಕರಂದವನ್ನಿಕ್ಕಿತು. ತತ್ಕ್ಷಣ ಆ ನೊಣಕ್ಕೆ ಪ್ರಜ್ಞೆ ಬಂತು. ಇನ್ನೂ ಕೆಲ ಬಿಂದು ಮಕರಂದವನ್ನು ಕೊಟ್ಟು ಆಗಂತುಕ ಜೇನ್ನೊಣ ಮೂರ್ಛಿತ ನೊಣವನ್ನು ಬದುಕಿಸಿತು.

ಜೇನ್ನೊಣಗಳು ನಿಷ್ಕರುಣಿಗಳೆಂದು ಯಾರು ಹೇಳಬಲ್ಲರು ? *



## ಹಾಸ್ಯ–ಜೀವನ

ಕಾರು ನಿರ್ಮಾಪಕರ ಕಂಪನಿಯಿಂದ ಓರ್ವ ಶ್ರೇಷ್ಠ ಕಲಾಕಾರನಿಗೆ ಈ ಪತ್ರ ಬಂದಿತು :

"ಸ್ವಾಮಿ, ನಾವು ದೇಶದ ಎಲ್ಲ ಕಲಾಕಾರರ ಕೃತಿಗಳ ಪ್ರದರ್ಶನ ಒಂದನ್ನು ನಮ್ಮ ಕಂಪೆನಿಯ ಪರವಾಗಿ ನಡೆಸಲಿದ್ದೇವೆ. ಅದಕ್ಕೆ ತಮ್ಮ ಕೃತಿಗಳನ್ನು ಕಳಿಸಬೇಕಾಗಿ ಬಿನ್ನಹ. ಸ್ವೀಕೃತವಾದ ಕೃತಿಗಳಿಗೆ ರೋಖು ಬಹುಮಾನ ಕೊಡಲಾಗುವುದು. ಅಸ್ವೀಕೃತವಾದವುಗಳು ಕಂಪನಿಯ ಸೊತ್ತಾಗುವವು."

ಕಲಾಕಾರ ಈ ರೀತಿ ಉತ್ತರಿಸಿದ :

"ತಮ್ಮ ಪತ್ರ ತಲುಪಿತು. ಧನ್ಯವಾದಗಳು.

"ನಾನು ಪ್ರಸಿದ್ಧ ಕಾರುಗಳ ಪ್ರದರ್ಶನ ಒಂದನ್ನು ಏರ್ಪಡಿಸಲಿದ್ದೇನೆ. ಅದಕ್ಕೆ ತಮ್ಮ ಕಂಪನಿಯ ಕಾರನ್ನು ಕೊಟ್ಟು ಕಳಿಸಬೇಕಾಗಿ ವಿನಂತಿ. ಪ್ರದರ್ಶನದಲ್ಲಿ ಅರ್ಹತೆ ಪಡೆದವುಗಳಿಗೆ ಬಹುಮಾನ ಕೊಡಲಾಗುವುದು. ಉಳಿದವುಗಳು ನನ್ನ ಸೊತ್ತಾಗುವವು."

— ಸಿ. ಡಿ. ಅಂಗಡಿ

# ಜೊತೆಗಾರ್ತಿ

ನೀರಸ ವಿವಾಹ ಜೀವನ
ಪಾಪ ಬುದ್ಧಿಯನ್ನು
ಪ್ರಚೋದಿಸಿದ ಕಥೆ

ಶ್ರೀನಿವಾಸ ಹಾವನೂರ

ಅಂದು ಸಂಜೆ ನಾನು ಮುಂಬಯಿಯ ವಿ. ಟಿ. ಸ್ಟೇಶನ್ನಿನಲ್ಲಿ, ಡೆಕ್ಕನ್ ಕ್ವೀನ್ ಗಾಡಿಯಲ್ಲಿ ಕುಳಿತಿದ್ದೆ. ನನ್ನ ಪತ್ನಿ ತನ್ನ ಕೈಗಡಿಯಾರವನ್ನು ನೋಡಿಕೊಳ್ಳುತ್ತ, "ಹಾಗಿದ್ದರೆ ಬುಧವಾರ ಬೆಳಿಗ್ಗೆ ನಾನು ಸ್ಟೇಶನ್ನಿಗೆ ಬಂದಿರುತ್ತೇನೆ" ಎಂದಳು.

ವೇಳೆ ಐದು ಗಂಟೆಯಾಗಿತ್ತು. ದೊಡ್ಡ ಗಡಿಯಾರದ ಢಣ್, ಢಣ್ ನೊಡನೆ, ಗಾರ್ಡನ ಸೀಟಿಯೂ ಅನಂತರ ಡ್ರೈವರನ ತುತ್ತೂ ರಿಯೂ ಏಕಕಾಲಕ್ಕೆ ಸದ್ದು ಮಾಡಿದವು.

ಗಾಡಿ ಹೊರಟಿತು. ನನ್ನ ಪತ್ನಿ ನಿಂತಲ್ಲಿಯೇ ಕರವಸ್ತ್ರವನ್ನು ಬೀಸುತ್ತಲಿದ್ದಳು. ಒಂದೂವರೆ ದಿನ ಬಿಟ್ಟಿರುವ ಭಾವನೆಯಿಂದ ಯುಕ್ತವಾದ ಅವಳ ಮುಖವು ಸುಂದರವಾಗಿ ಕಂಡಿತು. ಆಕೆ ಹಸನ್ಮುಖಿಯಾಗಿದ್ದಳು. ಅದಕ್ಕೆ ಪ್ರತಿಯಾಗಿ ನಾನೂ ನಗಬೇಕೆಂದು ನಕ್ಕೆ. ಒಳಗೆ ನನ್ನ



ಆಸನದಲ್ಲಿ ಕುಳಿತುಕೊಂಡೆ.

"ಹಾಗಿದ್ದರೆ ಬುಧವಾರ ಬೆಳಿಗ್ಗೆ ನಾನು ಸ್ಟೇಶನ್ನಿಗೆ ಬಂದಿರುತ್ತೇನೆ."

ಬುಧವಾರ ಬೆಳಿಗ್ಗೆ ನಾನು ಇದೇ ಗಾಡಿಯಿಂದ ಪುಣೆಯಿಂದ ಹಿಂತಿರುಗಬೇಕು. ಯಾವ ಹೆಚ್ಚು ಕಡಿಮೆಯೂ ಇಲ್ಲದ ನನ್ನ ದೈನಂದಿನ ಜೀವನದಲ್ಲಿ ಈ ಪುಣೆಯ ಯಾತ್ರೆಯೊಂದು ಬದಲಾವಣೆಯಾಗಿದ್ದಿತು. ಆದರೆ ಇದೇನೂ ಅಪೂರ್ವವಲ್ಲ. ರೇಲ್ವೆಯಲ್ಲಿ ಲೆಕ್ಕತಪಾಸಣೆಯ ಕಾರ್ಯಕ್ಕಾಗಿ ತಿಂಗಳೆರಡು ತಿಂಗಳಿಗೊಮ್ಮೆ ಹೀಗೆ ಒಂದು ದಿನ ಹೋಗಿ ಬರಬೇಕಾಗುತ್ತಿತ್ತು. ಇದೇ ಸಂಜೆಯ ಗಾಡಿ ಹಿಡಿಯುವುದು, ಒಂದು ದಿನದ ವಾಸ್ತವ್ಯ, ಅದೇ "ಹೋಟೆಲ್ ಇಲ್ಯೈಟ್" ನಲ್ಲಿ ಕಳೆಯುವುದು, ಮರುದಿನ ಬೆಳಿಗ್ಗೆ ಮತ್ತೆ ಹೊರಡುವುದು. ಬದಲಾಗದ ಈ ಬದಲಾವಣೆಯಲ್ಲಿ ಹೆಚ್ಚು ಕಡಿಮೆಯೆಂದರೆ, ಒಮ್ಮೊಮ್ಮೆ ನನ್ನ ಜೊತೆಗೆ ನನ್ನ ಹೆಂಡತಿ ಬಂದಿರುತ್ತಿದ್ದಳು.

ಈ ವಿಚಾರಗಳನ್ನು ಬದಿಗಿರಿಸಿ, ಕೈಯಲ್ಲಿ ಹಿಡಿದಿದ್ದ "ಇಲಸ್ಟ್ರೇಟೆಡ್ ವೀಕ್ಲಿ"ಯ ಪುಟಗಳನ್ನು ತಿರುವಿ ಹಾಕತೊಡಗಿದೆ. ಬುಧವಾರ ಬೆಳಿಗ್ಗೆ ಬಂದರೆ ಸುಖಾವಹವಾದ ನನ್ನ ಮನೆಯ ವಾತಾವರಣವಿದೆಯೆಂಬ ಮಂದಗಾಳಿ ಮನದ ತುಂಬ ಆವರಿಸಿದ್ದಾಗ, ಗವಿಗಳಲ್ಲಿ ಗಾಡಿಯು ಹಾಯ್ದು ಹೋಗುತ್ತಿದ್ದ ಮಬ್ಬುಗತ್ತಲೆಯಲ್ಲಿ ನನಗೆ ಸಣ್ಣ ಜಂಪು ಹತ್ತಿತು. ಕುಳಿತಲ್ಲಿಯೆ ತುಸು ನಿದ್ರೆಯನ್ನೂ ಮುಗಿಸಿದೆ.

ಪುಣೆ ಸ್ಟೇಶನ್ ಬಂತು. ಹಮಾಲನು ಬಂದು ನನ್ನ ಸಾಮಾನನ್ನು-ಒಂದು ಸೂಟ್ ಕೇಸ್-ಕೈಗೆತ್ತಿಕೊಂಡನು. ಅವನಿಗೂ ನಾನು ಹೊಸಬನಲ್ಲ. ಹಿಂದೆ ಒಂದಿಲ್ಲೊಂದು ಬಾರಿ ಹೀಗೆ ನನ್ನ ಸೂಟ್‌ಕೇಸನ್ನು ಎತ್ತಿ ರಿಕ್ಷಾದಲ್ಲಿ ತಂದು ಇಟ್ಟಿದ್ದ ನಾನು ನಿಶ್ಚಿಂತೆಯಿಂದ ಹೊರಗೆ ಬಂದೆ. ಒಂದೈದು ನಿಮಿಷ ಅವನಿಗಾಗಿ ಕಾಯಬೇಕಾಯಿತು. ಇತರರ ಸಾಮಾನುಗಳಿಂದ ತುಂಬಿದ ತನ್ನ ಕೈಗಾಡಿಯನ್ನು ದೂಡಿಕೊಂಡು ಬಂದವನೇ ಒಬ್ಬ ರಿಕ್ಷಾದವನನ್ನು ತಾನಾಗಿ ಕರೆದು, ನನ್ನ ಸೂಟ್ ಕೇಸನ್ನು ಅದರಲ್ಲಿ ಇಟ್ಟನು.

ಅದೇ ಇಲ್ಯೈಟ್ ಹೋಟೆಲ್. ಅಲ್ಲಿಗೆ ನಾನು ಯಾವಾಗೇ ಹೋಗಲಿ, ದೊಡ್ಡ ಕೋಣೆಯೊಂದನ್ನು ಹಿಡಿಯುತ್ತಿದ್ದೆ. ಅದರಿಂದ ನನ್ನ ಹೆಂಡತಿ – ಬಂದಿದ್ದಾಗ ತೊಂದರೆಯಾಗುತ್ತಿರಲಿಲ್ಲ. ಹೋಟೆಲ್ಲಿನ ಒಳಗೆ ಹೋದ ಕೂಡಲೇ ಮ್ಯಾನೇಜರನು ನಗುಮೊಗದಿಂದ ಸ್ವಾಗತಿಸಿದನು. ಕೆಲಸದಾಳು ನನ್ನ ಸೂಟ್‌ಕೇಸನ್ನು ಕೈಗೆತ್ತಿಕೊಂಡನು. ಮೇಲಿನ ಮಹಡಿಯ ಮೇಲಿನ ನನ್ನ ದೊಡ್ಡ ಕೋಣೆ ನನಗಾಗಿ ಕಾದಿತ್ತು.

ಗಂಟೆ ಆಗಲೇ ೮-೩೦ ಆಗಿದ್ದಿತು ಕೋಟನ್ನು ಬಿಚ್ಚಿ ನನ್ನ ಸೂಟ್‌ಕೇಸನ್ನು ತೆರೆದೆ. ಅನರ್ಥ ! ಅದು ನನ್ನದಾಗಿರಲಿಲ್ಲ. ಅನ್ಯರದಿತ್ತು. ನನ್ನ ಸೂಟ್‌ಕೇಸಿನಲ್ಲಿ ಮೇಲ್ಗಡೆ ನನ್ನ ನೈಟ್ ಪಾಯಿಜಮಾ ಇಟ್ಟಿದ್ದೆ. ಅದರ ಬದಲಾಗಿ ಒಂದು ಮಡಿಚಿಟ್ಟ ಜಾರ್ಜೆಟ್ ಸೀರೆ ಅದರಲ್ಲಿ ಕಾಣಿಸಿತು.

ಕೂಡಲೇ ಅದನ್ನು ಮುಚ್ಚಿ ಸೂಟ್ ಕೇಸಿನ ಹೊರಮೈಯ ಬಣ್ಣವನ್ನು ನೋಡಿದೆ. ಕಂದು ಬಣ್ಣದ ತೊಗಲಿನ ಚೀಲ. ನನ್ನದರ ಬಣ್ಣವೂ ಅದೇ ಆಗಿದ್ದಿತು. ಆಕಾರವೂ ಒಂದೇ! ಈ ಅದಲು ಬದಲಿಗೆ ಸ್ಟೇಶನ್ನಿನ ಪೋರ್ಟರನನ್ನು ಬೈಯುವುದರ ಅಗತ್ಯವುಳಿಯಲಿಲ್ಲ.

ಮುಂದೇನು ? ವಿಶೇಷವೇನೂ ಅನರ್ಥವಾಗಿರಲಿಲ್ಲ. ನನ್ನದರ ಮೇಲಂತೂ ನನ್ನ ಹೆಸರಿದ್ದಿತು. ಅದನ್ನು ಒಯ್ದಿದ್ದ ಮಹಿಳೆ ನಾಳೆಗೆ ಸ್ಟೇಶನ್ನಿನಲ್ಲಿ ಒಯ್ದು ಕೊಡುವಳು. ನಾನೂ ಇದನ್ನು ಪರತು ಮುಟ್ಟಿಸಬೇಕಾಗುವುದು. ಇಷ್ಟೇ.

ಆದರೆ ಇದಾರ ಚೀಲವಿರಬಹುದು ? ನಾನು ಮತ್ತೆ ಅದರ ಬಾಯಿ ತೆರೆದೆ. ದಟ್ಟವಾದ ನೀಲಿ ಬಣ್ಣದ ಆ ಜಾರ್ಜೆಟ್ ಸೀರೆಯನ್ನು ಕೈಗೆತ್ತಿ

ಕೊಂಡೆ. ಅದರ ಮುಡಿಕೆಯು ನನ್ನ ಕೈಯಿಂದ ಇಳಿದು ಬೀಳುತ್ತಿರುವುದನ್ನು ಕಂಡು, ಅದನ್ನು ಹಾಗೆಯೆ ಹಾಸಿಗೆಯ ಮೇಲಿರಿಸಿದೆ.

ಆ ಬ್ಯಾಗಿನಲ್ಲಿ ಏನೇನು ಇದೆಯೊ ನೋಡುವ ಆಸೆಯಾಯಿತು. ಛೇ, ಇದು ಸಭ್ಯತನದ ಲಕ್ಷಣ ವಲ್ಲ ಎಂದು ಮರುದನಿ ಒಳಗೆ ನುಡಿಯಿತು. ಊಂಹು. ಅವಳ ಹೆಸರು ದೆಸೆಗಳು ತಿಳಿಯು ವಂತಿದ್ದರೆ, ಇದನ್ನೇಕೆ ಪೂರ್ಣ ತೆಗೆದು ನೋಡ ಬಾರದು? ಆ ಹೆಣ್ಣುಮಗಳೇ ಸ್ಟೇಶನ್ನಿಗ ಬಂದು ತನ್ನ ಚೀಲಕ್ಕಾಗಿ ಕಾಯುವುದಕ್ಕಿಂತ ಅವಳಿಗೇ ಇದನ್ನು ಕಳಿಸಲು ಬರುವಂತಿದ್ದರೆ ಹೆಚ್ಚು ಉತ್ತಮವಲ್ಲವೆ? ಏನಿದ್ದರೂ ಚೀಲದಲ್ಲಿ ಏನೇನು ಇವೆಯೆಂದು ನೋಡಬೇಕೆನ್ನುವ ಅಸಂಸ್ಕೃತ ಆತುರ ಹೆಚ್ಚೆಚ್ಚಾಗಿ ಪುಟಿಯು ತ್ತಿರುವಾಗ ನನ್ನ ಲಕ್ಷ್ಯಕ್ಕೆ ಬಂತು— ಕೋ- ಣೆಯ ಬಾಗಿಲಿಗೆ ಕೊಂಡಿಯನ್ನು ಹಾಕಿಲ್ಲ ವೆಂದು.

ಮೇಲೆದ್ದು ಬಾಗಿಲನ್ನು ಭದ್ರಪಡಿಸಿ ಬಂದು ಆ ಚೀಲದಲ್ಲಿಯ ಸಾಮಾನುಗಳನ್ನು ಒಂದೊಂ- ದಾಗಿ ಹೊರ ತೆಗೆದೆ. ಮೊದಲಿಗೆ ಕಾಣಿಸಿದು ಒಂದು ತಗಡಿನ ಸುಂದರವಾದ ಪೆಟ್ಟಿಗೆ. ಅದನ್ನು ನೋಡಿ, ನನ್ನ ದಾಡಿಯ ತಗಡಿನ ಪೆಟ್ಟಿಗೆ ನೆನ ಪಾಯಿತು. ಅವಳೂ ನನ್ನ ಚೀಲದ ಬಾಯಿ ಯನ್ನು ತೆರೆದಾಗ, ಅದರಲ್ಲಿಯ ಅರ್ಧ ಸವೆದ ಬ್ರಶ್ಶು, ಸಾಬೂನಿನ ಕಲೆಬಿದ್ದ ಡಬ್ಬಿಯ ತಳ, ಇವನ್ನೆಲ್ಲ ಆಕೆ ನೋಡಿ ನನ್ನ ಬಗ್ಗೆ, ನಾನು ಅಷ್ಟು ಅಚ್ಚುಕಟ್ಟಿನ ಸೊಗಸುಗಾರನಲ್ಲವೆಂದು ಭಾವನೆ ತಳೆದಿರಬಹುದು. ಹೌದು, ಖಂಡಿತ ಹಾಗೇ ಭಾವಿಸುವಳು. ಊರಿಗೆ ಹೋದ ಕೂಡಲೇ ಮೊದಲು ಹೊಸ ಬ್ರಶ್ ಒಂದನ್ನು ಕೊಳ್ಳಬೇಕು. ಇಷ್ಟು ದಿನ ಬಿಟ್ಟಿದ್ದೇ ತಪ್ಪಾ ಯಿತು.

ಅವಳ ಡಬ್ಬಿಯಲ್ಲಿ ಮುತ್ತಿನ ಬೆಂಡೋಲೆಯು ಒಂದು ಜೊತೆಯೂ ಕಾಜಿನ ಬಳೆಗಳೂ ಇದ್ದು ವಲ್ಲದೆ, ಚಿಕ್ಕದಾದ ಕುಟಿಕುರಾ ಪೌಡರ್ ಡಬ್ಬಿ, ಉತ್ತಮ ದರ್ಜೆಯ ಹಣಿಗೆ, ಉಗುರಿನ ಲೇಪ, ಇವೆಲ್ಲ ಕಂಡವು. ಬಟ್ಟೆ ಬರೆಗಳನ್ನು ಬಿಟ್ಟರೆ, 'ಸ್ತ್ರೀ' ಮಾಸಿಕವೂ ಒಂದು ಕಾದಂಬ ರಿಯೂ ಇದ್ದಿತು. ಬಟ್ಟೆಗಳಲ್ಲಿ ಒಂದು ಸೊಗ ಸಾದ ಕಾಶ್ಮೀರಿ ಶಾಲು ಕಾಣಿಸಿತು. ನನ್ನ ಲಗ್ನದ ಮರು ತಿಂಗಳಲ್ಲಿ ನನ್ನ ಹೆಂಡತಿ ಹಾಗೂ ನಾನು ಆಗ್ರಾ, ದಿಲ್ಲಿಗಳನ್ನು ಸಂದರ್ಶಿಸಲು ಹೋದಾಗ, ದಿಲ್ಲಿಯಲ್ಲಿ ನಾನು ಅಂಥದೇ ಶಾಲನ್ನು ಕೊಂಡಿದ್ದ ನೆನಪು ಮರುಕಳಿಸಿತು. ಆ ಶಾಲನ್ನು ಅದರಲ್ಲಿ ಹಾಕಿದ್ದುದರಿಂದ, ಅವಳು ಬೇರೆ ಸಾಮಾನನ್ನು ತಂದಿರದೇ, ಆ ಸೂಟ್- ಕೇಸ್ ಒಂದರ ಮೇಲೆಯೇ ಪುಣೆಗೆ ಬಂದಿರ ಬೇಕೆಂದೂ ಕಂಡಿತು. ಬಾಗಿಲಿನ ಕೊಂಡಿಯನ್ನು ಹಾಕಿದ್ದುದು ಖಾತ್ರಿ ಎಂಬುದನ್ನು ಮನದಂದು ಆ ಚೀಲದಲ್ಲಿಯ ಅವಳ ಇತರ ಬಟ್ಟೆ ಬರೆ ಗಳನ್ನೂ ಒಂದೊಂದಾಗಿ ಹೊರತೆಗೆದೆ. ಅವು ಗಳ ಮೇಲಿಂದ ಆಕೆ ಸಿರಿವಂತರ ಮಗಳೆಂದೂ ಹೊಸದಾಗಿ ಮದುವೆಯಾದ ಮಹಿಳೆಯಾಗಿರಬ- ಹುದಲ್ಲದೆ ಕುಮಾರಿಯೇನಲ್ಲವೆಂದೂ ಧ್ವನಿಸಿದೆ. ಆಕೃತಿಯು ಸ್ಥೂಲವಾದುದಲ್ಲವೆಂದೂ ಆದರೂ ಅತಿ ತೆಳ್ಳಗಿರುವ ನನ್ನ ಹೆಂಡತಿಗಿಂತ ತುಸುವಾ ದರೂ ಮೈಕೈ ತುಂಬಿಕೊಂಡಿರುವಳೆಂದೂ ಅವಳ ವೈಮಾಟವನ್ನು ನನ್ನ ಮನದಲ್ಲಿ ಮೂರ್ತೀಕರಿಸಿ ಕೊಂಡೆ. ಸೀರೆಯನ್ನುಳಿದು ಧರಿಸುವ ಇತರ ಬಟ್ಟೆಗಳಲ್ಲಿ ಕೆಲವು ಬಳಸಿದ್ದುವೆಂದು ಕಂಡರೂ ಸ್ವಲ್ಪವೂ ಹೊಲಸಾಗಿರಲಿಲ್ಲ. ಆಗ ನನ್ನ ನೈಟ್ ಪಾಯಿಜಮಾ ನೆನಪಾಯಿತು. ಒಗೆದು ಇಟ್ಟಿ ದ್ದರೂ ಅದರ ಮಾಸಲು ಬಣ್ಣವನ್ನು ನೋಡಿ ಆಕೆ ನಾನೊಬ್ಬ ಬಡ ಮಧ್ಯಮ ವರ್ಗದ ಕಾರಕೂನ ನೆಂದು ಖಂಡಿತ ತಿಳಿಯುವಂತಾಯಿತಲ್ಲ ಎಂದು ಕಳವಳಿಸಿದೆ. ನಾಲ್ಕೇ ಜನರಿರುವ ಸಂಸಾರಕ್ಕೆ ೬೦೦ಕ್ಕೆ ಮೇಲ್ಪಟ್ಟು ಸಂಬಳ ಬರುವಾಗ ನನ- ಗೇನು ಹಣದ ಕೊರತೆಯೆ? ಸಂಸಾರದಲ್ಲಿ ಸಹಜ

ಬೇಸರ ಬಂದುದರ ಲಕ್ಷಣವಿದು. ಊಂಹು. ಹಾಗೆ ಮಾಡಬಾರದು. ಜೀವನದಿಂದ ಶಕ್ಯವಿದ್ದಷ್ಟು ಸುಖ, ಸೊಗಸುಗಳನ್ನು ಹೀರಿಕೊಳ್ಳುವ ವೃತ್ತಿ ನಮಗೆ ಬರಬೇಕು. . . . .

"ಟ್ರಣ್, ಟ್ರಣ್" - ಬಾಗಿಲು ಗಂಟೆಯ ಸದ್ದಾಯಿತು. ಗಡಬಡಿಸಿ "ಯಾರವರು ?" ಎಂದು ನಾನು ಕೇಳುವಾಗಲೇ "ಸಾಹೇಬ, ಜೇವಣ?" ಎಂಬ ವೇಟರನ ಧ್ವನಿ ಕೇಳಬಂತು "ಆಲೊ" ಎಂದವನೇ ಹೊರಟೆ. ನೈಟ್‌ಪಾಯಿಜಮಾ ಇರಲಿಲ್ಲ. ಅದೇ ಪ್ಯಾಂಟಿನ ಮೇಲೆ ಊಟದ ಮನೆಗೆ ಹೋದೆ. ಊಟಕ್ಕೆ ಕುಳಿತಾಗ ನನಗೆ ಅದೇ ಚಿಂತೆ. ನನ್ನೆಲ್ಲ ಸಾಮಾನುಗಳನ್ನು ನೋಡಿ, ನಾನೊಬ್ಬ ಅಚ್ಚುಕಟ್ಟುತನವಿಲ್ಲದ, ಸೊಗಸುಗಾರನಲ್ಲದ ಸಾದಾ 'ಮುದುಕ' ಎಂದೇ ಆಕೆ ಭಾವಿಸುವಂತಾಯಿತಲ್ಲ, ಎಂಬ ಕಳವಳವೇ ತುಂಬಿದ್ದಿತು.

ಊಟ ಮುಗಿಸಿ ಮೇಲೆ ಬಂದೆ. ಅವೆಲ್ಲ ಸರಿ. ಅವಳೇ ಒಬ್ಬ ಮಧ್ಯವಯಸ್ಸಿನ ಹೆಣ್ಣುಮಗಳೇಕೆ ಇರಬಾರದು ? ಬರಿಯ ಬಟ್ಟೆಗಳ ಮೇಲಿಂದ ಇನ್ನೊಬ್ಬರ ಆಕಾರ, ವಯಸ್ಸು, ಜೀವನದ ರೀತಿಗಳನ್ನು ಹೇಳಲು ಸಾಧ್ಯವೆ ?

ಅವಳ ಸೂಟ್‌ಕೇಸಿನ ಬಾಯಿ ತೆರೆದೇ ಇದ್ದಿತು. ಅವಳ ಎಲ್ಲ ವಸ್ತುಗಳನ್ನೂ ಹಾಸಿಗೆಯ ಮೇಲೆ ಇಟ್ಟಿದ್ದೆ. ಅರ್ಧ ಗಂಟೆಯ ಅವಧಿಯಲ್ಲಿ ಅದರೊಳಗಿಂದ ಸುವಾಸಿತ ಪರಿಮಳವು ಹೊರಹೊಮ್ಮಿ ಶೀತಲ ಗಾಳಿಯಿಂದಾಗಿ, ಕೋಣೆಯನ್ನೆಲ್ಲ ವ್ಯಾಪಿಸಿದ್ದಿತು. ಒಂದು ಕ್ಷಣದಲ್ಲಿ ಅವಳೇ ಆ ಕೋಣೆಯಲ್ಲಿ ಸಜೀವವಾಗಿ, ಸಾಕಾರ ಮೂರ್ತಿಯಾಗಿ ಇದ್ದಂತೆ ಭಾಸವಾಯಿತು. ಆ ಪರಿಮಳದಂತೆ ಅವಳೂ ಹರಿದಾಡುತ್ತಿದ್ದಳು.

ಎಂದೂ ಕಂಡಿರದ ಹೆಣ್ಣಿನ ಕಲ್ಪನೆಯಲ್ಲಿ, ಸ್ವಂತದ ನಿಸ್ಸಾರ ಜೀವನದ ಬಗೆಗೆ ಆತ್ಮನಿರ್ಭರ್ತ್ಸನೆಯಿಂದ ಕೂಡಿದವನಾಗಿ ನಾನು ಬಲು ಹೊತ್ತು ಎಚ್ಚತ್ತು ಇದ್ದೆ. ಮಲಗಿದ್ದು ನಸುಕಿನಲ್ಲಿ — ಮೂರರ ಸುಮಾರಿಗೆ.

ಬೆಳಗಿನಲ್ಲಿ ಎದ್ದಾಗ ಮೈ ಜಡವಾಗಿದ್ದಿತು. ಕಣ್ಣು ಉರಿಯುತ್ತಿದ್ದವು ಬ್ರೇಕ್‌ಫಾಸ್ಟ್ ಎಂದು ಕಾಯದೆ, ಮಗ್ಗುಲಿನ ಸೆಲೂನಿನಲ್ಲಿ ದಾಡಿಯನ್ನು ಮುಗಿಸಿದೆನು. ಸ್ನಾನ ಮಾಡಬೇಕೆಂದರೆ ಸಾಬೂನು, ಟವಲ್ ಇರಲಿಲ್ಲ. ಹಲ್ಲುಜ್ಜುವ ಸಾಧನಗಳನ್ನೂ ಕೊಳ್ಳಬೇಕಾಯಿತು. ಇವೆಲ್ಲ ಸಾಮಾನುಗಳು ಅವಳ ಸೂಟ್‌ಕೇಸಿನಲ್ಲಿಯೂ ಇದ್ದುವು ಆದರೆ ಅವಳಿಗೇನು ತನ್ನಂತೆ ಅವನ್ನು ಕೊಳ್ಳುವ ಪ್ರಸಂಗ ಬಂದಿರಲಾರದು. ಯಾರ ಮನೆಯಲ್ಲಿ ( ತನ್ನದೇ ಇದ್ದರೂ ಇರಬಹುದು ) ಆಕೆ ಉಳಿದುಕೊಂಡಿದ್ದಳೊ, ಅಲ್ಲಿ ಎಲ್ಲವೂ ಅವಳಿಗೆ ದೊರೆತಿರಬಹುದು. ಅಥವಾ ಅನ್ಯರ ಮನೆಯಾಗಿದ್ದರೆ, ಆಕೆ ತನ್ನ ಸೂಟ್‌ಕೇಸ್ ಅದಲು ಬದಲು ಆದುದನ್ನು ಹೇಳಿರಬಹುದೆ ? ಸಂಕೋಚದಿಂದ ಬಿಟ್ಟಿರಲೂ ಬಹುದು ಹಾಗಿದ್ದರೆ ಇಂದು ಆಕೆ ಖಂಡಿತ ರೇಲ್ವೆ ಆಫೀಸಿಗೆ ಬರುವಳು. ಅವಳು ಎಂತಹಳೆಂಬುದನ್ನು ನಾನು ಕಣ್ಣಾರೆ ನೋಡಬಹುದು. ಈ ಉಲ್ಲಾಸದಲ್ಲಿಯೇ ಪ್ರಾತರ್ವಿಧಿಗಳನ್ನು ಮುಗಿಸಿದೆ.

ನಾನು ಸ್ನಾನ ಮುಗಿಸಿಕೊಂಡು ಮೇಲೆ ಬಂದಾಗ, ನನ್ನ ಕೋಣೆಯ ಸ್ವರೂಪವೇ ಬದಲಾಗಿದ್ದಿತು! ಹಾಟೆಲ್ಲಿನ ಸೇವಕನು, ಕಸಗುಡಿಸಿ ಎರಡು ಹಾಸಿಗೆಗಳನ್ನು ಸಿದ್ಧಪಡಿಸಿದ್ದನು. ಇನ್ನೊಂದು ಹಾಸಿಗೆಯ ಮೇಲೆ ನಾನು ಹರಡಿದ್ದ ಸಾಮಾನುಗಳನ್ನೆಲ್ಲ ವ್ಯವಸ್ಥಿತವಾಗಿ ಹೊಂದಿಸಿ ಇಟ್ಟಿದ್ದನು. ಅವಳ ಎರಡು ಸೀರೆಗಳಲ್ಲಿ ಜಾರ್ಜೆಟ್ಟಿನದು ಹ್ಯಾಂಗರಿನಲ್ಲಿ ನೇತಾಡುತಿತ್ತು. ಇನ್ನೊಂದು ಮಂಚದ ಮೇಲ್ಪಟ್ಟಿಗೆ ಇದ್ದಿತ್ತು. ಅವಳ ಶೃಂಗಾರದ ಸಾಧನಗಳೆಲ್ಲವೂ ಮೇಜಿನ ಮೇಲೆ ಕನ್ನಡಿಗೆ ಒರಗಿ ನಿಂತಿದ್ದುವು. ಮನೆಯಲ್ಲಿ ಉಪಯೋಗಿಸುವ ಅವಳ ರಬ್ಬರಿನ ಚಿಕ್ಕ ಸ್ಲಿಪರ್ಸ್ ಮಂಚದ ಕೆಳಗೆ ಅವಳ ಬರವನ್ನು

ಕಾಯುತ್ತಿದ್ದವು. ಯಾರು ಅವನಿಗೆ ಇದನ್ನೆಲ್ಲ ಮಾಡಹೇಳಿದ್ದರು? ಬಹುಶಃ ನನ್ನ ಹೆಂಡತಿಯೂ ನನ್ನ ಸಂಗಡ ಬಂದಿರಬೇಕೆಂದೂ ನಾವಿಬ್ಬರೂ ತಿರುಗಾಡಲು ಹೋಗಿರಬೇಕೆಂದೂ ತಿಳಿದು ಅಷ್ಟರಲ್ಲಿ ತನ್ನ ಕೆಲಸವನ್ನು ಪೂರೈಸಿದ್ದ.

ಅದೆಲ್ಲ ಸರಿ. ಆ ಹೆಣ್ಣುಮಗಳು ತನ್ನ ಸೂಟ್‌ಕೇಸನ್ನು ಕೇಳಲು ಬಂದರೆ, ಅವಳ ಸಲಕರಣೆಗಳನ್ನೆಲ್ಲ ಈ ರೀತಿ ಹರಡಿ ಇಟ್ಟದ್ದನ್ನು ಕಂಡರೆ ಆಕೆ ಏನೆಂದು ತಿಳಿಯಬಹುದು? ನಾನು ಅಸಭ್ಯನೂ ಅಹುದು ಎಂಬ ಭಾವನೆ ಬಂದು ಗಿಂದೀತು. ಇವನ್ನೆಲ್ಲ ಎತ್ತಿ ಇಡಲೇ ಎಂಬ ವಿಚಾರ ಬಂತು.

ಆ ಸೂಟ್‌ಕೇಸ್ ಆ ಸೀರೆಗಳು ಕುಪ್ಪಸ ಮೊದಲಾದ ಅರಿವೆಗಳು ಸ್ಲಿಪರ್ಸ್, ಬೆಂಡೋಲೆಗಳು ಓರ್ವ ಮೋಹಕಸ್ತ್ರೀಯ ಅಸ್ತಿತ್ವವನ್ನು,–ಅದೂ ಆ ಕೋಣೆಯಲ್ಲಿ—ಸೂಚಿಸುತ್ತಿದ್ದವು. ಬಂದದ್ದು ಬರಲಿ ಎಂದು ಹಾಗೇ ಬಿಟ್ಟೆ. ನನ್ನ ಹಾಸಿಗೆಯ ಮೇಲೆ ಒರಗಿಕೊಂಡೆ. ೯–೩೦ ಗಂಟೆಗೆ ನಾನು ನನ್ನ ಆಫೀಸ್ ಕೆಲಸಕ್ಕೆಂದು ಹೊರಡಬೇಕು. ಆದರೂ ನನಗೆ ಏಳುವ ಮನಸ್ಸಾಗಲಿಲ್ಲ. ನಿರ್ವಾಹವಿಲ್ಲದೇ ಹೋದೆ.

ಎರಡೂವರೆ ಗಂಟೆಯ ವರೆಗೂ ನಾನು ಅಲ್ಲಿಯೆ ಇದ್ದೆ. ಯಾರಾದರೂ ನನ್ನನ್ನು ಕೇಳುತ್ತ ಬಂದಿದ್ದರೇ ಎಂದು ವಿಚಾರಿಸಿದೆ. ಯಾರೂ ಬಂದಿದ್ದಿಲ್ಲ. ಊಟ ಅಲ್ಲಿಯೆ ಮುಗಿದಿದ್ದಿತು. ಸಂಜೆಯ ವರೆಗೂ ಇಲ್ಲಿಯೆ ಅವಳ ದಾರಿಯನ್ನು ಕಾಯುವ; ಟ್ಯಾಕ್ಸಿಯಲ್ಲಿ ಅವಳನ್ನು ಕರೆದೊಯ್ಯುವ.

ಆದರೆ ಅವಳ ಬದಲಿಗೆ, ನನ್ನದಾದ ಸೂಟ್‌ಕೇಸನ್ನು ಹಿಡಿದುಕೊಂಡು, ಅವಳ ಸಂಬಂಧಿಕರಾದ ಗಂಡಸರಾರಾದರೂ ಬಂದರೆ? ಛೀ, ಛೀ, ಕೂಡಲೇ ಕೋಣೆಗೆ ಹೋಗಿ, ಅವೆಲ್ಲ ವಸ್ತುಗಳನ್ನು ಅವಳ ಚೀಲದಲ್ಲಿ ಹಾಕಿ ಇಡಬೇಕು..... ಇಷ್ಟಕ್ಕೂ ಅವಳು ಇಲ್ಲಿ, ರೇಲ್ವೆ ಆಫೀಸಿನಲ್ಲಿ ನನ್ನನ್ನು ಕೇಳಿಕೊಂಡು, ಅಲ್ಲಿಂದ ನೇರವಾಗಿ ನನ್ನ ಕೋಣೆಗೆ ಬಂದರೆ ಅದೆಷ್ಟು ಸೊಗಸಾಗಬಹುದು?

ನಾನು ಮೂರು ಗಂಟೆಗೆ ಆಫೀಸಿನ ಕೆಲಸ ತೀರಿಸಿಕೊಂಡು ಹೋಟೆಲ್ಲಿನ ನನ್ನ ಕೋಣೆಗೆ ಮರಳಿದೆ. ನನ್ನ ಗುರುತಿನ ಸ್ನೇಹಿತರು ಪುಣೆಯಲ್ಲಿ ಇದ್ದರು. ಅವರಲ್ಲಿ ಇಬ್ಬರು-ಮೂವರನ್ನು ಫೋನಿನ ಮೇಲೆ ಕರೆಯಿಸಿಕೊಂಡೋ ಅವರ ಮನೆಗೆ ಹೋಗಿಯೋ ಸಂಜೆಯ ವೇಳೆಯನ್ನು ಕಳೆಯುತ್ತಿದ್ದೆ. ಆ ಸಂಜೆ ನಾನೆಲ್ಲಿಯೂ ಹೋಗಲಿಲ್ಲ.

ನನಗೆ ನನ್ನ ಮೇಲೆಯೆ ಸಿಟ್ಟು ಬಂದಿದ್ದಿತು. ನನ್ನ ಇರುವಿಕೆಯ ಬಗ್ಗೆ ಜುಗುಪ್ಸೆಯುಂಟಾಗಿದ್ದಿತು. ಯಾರಿಗಾಗಿ ದಾರಿ ಕಾಯುತ್ತಿದ್ದೇನೊ ಆ ಹೆಣ್ಣುಮಗಳ ಮೇಲೆ, ನನ್ನ ಹೆಂಡತಿಯ ಮೇಲೆ, ಇಡೀ ಸ್ತ್ರೀಸಮಾಜದ ಮೇಲೆ ತಿರಸ್ಕಾರವುಂಟಾಗಿದ್ದಿತು ನನ್ನ ದೈನಂದಿನ ಜೀವನದಿಂದ ತಪ್ಪಿಸಿಕೊಂಡು ಹೋಗಬೇಕು; ಕೆಲ ತಿಂಗಳುಗಳನ್ನಾದರೂ ಯಾವ ಸಾಮಾಜಿಕ ಕೌಟುಂಬಿಕ ನಿರ್ಬಂಧವಿಲ್ಲದೇ ಸ್ವಚ್ಛಂದವಾಗಿ ಕಳೆಯಬೇಕು ಎಂದು ಮನಸ್ಸು ಒಂದೇ ಸಮನೆ ಹೇಳುತ್ತಿತ್ತು.

ಮರುದಿನ ಬೆಳಿಗ್ಗೆ ನಾನು ಹೊರಡಬೇಕು. ಹೊರಡಬಾರದೆಂದು ನಾನು ಹಿಂದಿನ ರಾತ್ರಿಯೇ ನಿರ್ಧರಿಸಿದ್ದೆ. ನನ್ನ ಹೆಂಡತಿ ಸ್ಟೇಶನ್ನಿನ ವರೆಗೆ ಬಂದು, ನಿರಾಶಳಾಗಿ ಹೋಗಲಿ. ಮಕ್ಕಳಿಗೂ ಅಚ್ಚರಿಯಾಗಲಿ. ಒಂದು ವಾರದ ವರೆಗೂ ಅವಳಿಗೆ ಯಾವ ಸುದ್ದಿಯನ್ನೂ ಹತ್ತಗೊಡದೇ, ಉತ್ತರ ಹಿಂದುಸ್ಥಾನದತ್ತ ಸಂಚಾರಕ್ಕೆ ಹೊರಡಬೇಕು. ಸ್ವಾತಂತ್ರ್ಯ ಸ್ವಚ್ಛಂದತೆ ಇವುಗಳ ಉನ್ಮಾದದಲ್ಲಿ, ತನ್ನ ಸೂಟ್‌ಕೇಸನ್ನು ಕೇಳಲು ಇನ್ನೂ ಬರಲಿರುವ ಆ ಸ್ತ್ರೀಯ ಮಾದಕ ಕಲ್ಪನೆಯಲ್ಲಿ ನಾನು ನನ್ನ ಮುಂಬಯಿ ಮನೆ, ಹೆಂಡತಿ, ಕಚೇರಿ ಎಲ್ಲವನ್ನು ಮರೆತಿದ್ದೆ. ತಿಂಗಳ

ಮೇಲಾದರೂ ಏಕೆ ಮನೆಗೆ ಹೋಗಬೇಕು? ಸಂಸಾರದಲ್ಲಿ ಎಲ್ಲವನ್ನೂ ಕಂಡದ್ದಾಯಿತು. ಸರ್ವಿಸು ಹತ್ತು-ಹನ್ನೆರಡು ವರ್ಷಗಳಿದ್ದರೂ ಪೆನ್ಶನ್ ಪಡೆಯಬಹುದು. ಮನೆಯಲ್ಲಿ ದುಡ್ಡು ಬೇಕಾದಷ್ಟು ಇದೆ. ಹಳ್ಳಿಯಲ್ಲಿ ಆಸ್ತಿ ಇದೆ. ಎಲ್ಲವನ್ನು ಹೆಂಡತಿ ಮಕ್ಕಳಿಗೆ ಬಿಟ್ಟುಕೊಡುವೆ. ಮೂರು ನಾಲ್ಕು ವರ್ಷಕ್ಕೆ ಹಿರಿಯ ಮಗನ ಶಿಕ್ಷಣ ಮುಗಿದು ಅವನು ಕೈಗೆ ಬಂದನೆಂದರೆ ಹೆಂಡತಿಗೆ ಯಾವ ತೊಂದರೆಯೂ ಇಲ್ಲ. ನನಗೋ ನನ್ನ ಪೆನ್ಶನ್, ೫-೬ ಸಾವಿರದ ರೋಖು ಹಣ ಸಾಕಲ್ಲ . . .

ಮತ್ತೊಂದು ದಿನ ಉರುಳಿತು. ಅದರ ಮರುದಿನ ಬೆಳಿಗ್ಗೆ ಊಟ ಮುಗಿಸಿ ತಿರುಗಾಡಲು ಹೋದೆ ಬಿಸಿಲಲ್ಲಿ! ತಿರುಗಿ ನಾನು ಹೋಟೆಲಿಗೆ ಬಂದದ್ದು, ಸಂಜೆಗೇ. ಕಾಲು ಸೋತಿದ್ದುವು. ಮನಸ್ಸು ದಣಿದಿದ್ದಿತು. ನನ್ನ ಕೋಣೆಯ ಬಾಗಿಲನ್ನು ತೆರೆಯ ಹೋದೆ. ಈಗಾಗಲೇ ಅದನ್ನು ತೆರೆಯಲಾಗಿದ್ದಿತು. ಆಳು ಇರಬಹುದೆಂದು ತಿಳಿದು, ಬಾಗಿಲನ್ನು ದೂಡಿದೆ.

ಆ ಮಬ್ಬುಗತ್ತಲಿನಲ್ಲಿ, ಬದಿಯಲ್ಲಿನ ಪಲ್ಲಂಗದ ಮೇಲೆ ಓರ್ವ ಸ್ತ್ರೀಯ ಆಕೃತಿ ಕಂಡಿತು. ಜೊತೆಗೆ ನೀರವವಾಗಿ ಅಳುವ ಸದ್ದು. ದೀಪ ಹಚ್ಚಿದೆ.

ಬಂದವಳು ನನ್ನ ಹೆಂಡತಿ! ನಾನು ಬಂದದ್ದನ್ನು ಕಂಡುಕೊಂಡಿರಬೇಕು. ಆದರೂ ಮುಖ ಮುಚ್ಚಿ ಅಳುವುದನ್ನು ನಿಲ್ಲಿಸಿರಲಿಲ್ಲ. ನಾನು ಹತ್ತಿರ ಹೋದೆ. "ಯಾವಾಗ ಬಂದಿ?" ಎಂದು ಕೇಳಬೇಕೆನ್ನುವ ನಾಲಿಗೆ ತೊದಲಿತು.

ಅವಳು ಬಂದಿರುವ ಉದ್ದೇಶ ಸ್ಪಷ್ಟವಿತ್ತು. ಮರುದಿನ ಬರಬೇಕಾದ ತಾನು, ಎರಡು ದಿನಗಳು ಸಂದರೂ ಬಂದಿರಲಿಲ್ಲ. ಅದಕ್ಕಾಗಿ ಆಕೆ ತಪ್ಪು ತಿಳಿದಿರುವ ಸಂಭವವೂ ಇರಲಿಲ್ಲ. ಕಚೇರಿಯ ಕೆಲಸದ ಮೇಲೆ ನಿಂತಿರಬೇಕು. ತಾನು ಆಕಸ್ಮಿಕವಾಗಿ ಹೋಗಿ ಗಂಡನನ್ನು ಅಚ್ಚರಿಗೊಳಿಸಿ ಅವನೊಂದಿಗೆ ಮರಳಿ ಬರಬೇಕು ಎಂದು ಅವಳು ಆಶಿಸಿದ್ದಳೆಂದು ಸರಿಯಾಗಿಯೆ ಊಹಿಸಿದೆ. ಆದರೆ ಆಕೆ ಇಲ್ಲಿ ಕಂಡದ್ದೇನು? ಕೋಣೆಯಲ್ಲಿನ ವಿಶೇಷ ವ್ಯವಸ್ಥೆ, ಮೇಜಿನ ಮೇಲಿನ ಸೌಂದರ್ಯ ಸಾಧನಗಳು ಅವಳಿಗೆ ಆಘಾತವನ್ನುಂಟು ಮಾಡಿರಬೇಕು. ೧೦-೩೦ ಗಂಟೆಯ ತನಕ ನನ್ನ ದಾರಿಯನ್ನು ಕಾಯ್ದು, ೧೧-೩೦ ರ ಗಾಡಿಗೇ ಆಕೆ ಹೊರಟು ಬಂದಿರಬೇಕು. ಬಂದಾಗಿನಿಂದ ಅಷ್ಟು ಹೊತ್ತಿನವರೆಗೆ ಆಕೆ ಅಳುತ್ತಿದ್ದಿರಬೇಕು ಎಂಬ ವಿಚಾರ ನನ್ನನ್ನು ಬಹಳ ಗಾಸಿಗೊಳಿಸಿತು. ಆಕೆ, ಸೇವಕನನ್ನು ವಿಚಾರಿಸಿರಬಹುದೆ? ವಿಚಾರಿಸಿದ್ದರೆ ನಿಜ ಸಂಗತಿ ತಿಳಿಯಬಹುದು. ಆದರೆ ಇಲ್ಲಿ "ಇನ್ನಾವ ಸ್ತ್ರೀ ಬಂದು ಇದ್ದಳೆಂದು" ಆಕೆ ಅದೆಂತು ಕೇಳಿಯಾಳು?

"ಅಂತೂ ಓರ್ವ ಹೆಣ್ಣಿನೊಡನೆ ಇಲ್ಲಿ ಚಕ್ಕಂದ ಮಾಡಿದ್ದೀರಿ. ಅದಕ್ಕೆ ನಿಮಗೆ ಊರು ನೆನಪಾಗಲಿಲ್ಲ. ಅಲ್ಲವೆ?" ಎಂದಳು. ಎಷ್ಟೋ ಹೊತ್ತಿನ ಮೇಲೆ ಅವಳು ಮಾತನಾಡಿದ್ದಳು. ಅವಳಿಂದಲೇ ಮಾತು ಮೊದಲು ಬರಬೇಕಿದ್ದಿತು. ಅದರಲ್ಲಿ ಸಿಟ್ಟಂತೂ ಇರಲಿಲ್ಲ. ಗಂಡನ ವಿಶ್ವಾಸಘಾತಕತನದ ಪ್ರಜ್ಞೆ ಮಾತ್ರ ಇದ್ದಿತು.

ವಿಶ್ವಾಸಘಾತ ಹೌದು! ಬೇರೊಬ್ಬ ಸ್ತ್ರೀಯ ಸಂಗವನ್ನು ಮಾನಸಿಕವಾಗಿಯಾದರೂ ಬಯಸಿದ್ದು ವಿಶ್ವಾಸಘಾತದ ಒಂದು ಪ್ರಸಂಗವೇ ಆಗಿತ್ತು. ಈ ಸೂಟ್‌ಕೇಸ್ ಇನ್ನೊಬ್ಬರದಿತ್ತು ಎಂದು ಉತ್ತರ ಹೇಳಬಹುದಾದರೂ, ಅವನ್ನೆಲ್ಲ ಈ ರೀತಿಯಾಗಿ ಇರಿಸಿಕೊಂಡದ್ದಕ್ಕೆ ಯಾವ ಅನ್ಯವಿವರಣೆಯೂ ಸಮರ್ಪಕವಾಗುತ್ತಿರಲಿಲ್ಲ. ಅದಕ್ಕಿಂತ ಹೆಚ್ಚಿನ ವಿಶ್ವಾಸಘಾತವನ್ನು ನಾನು ಮಾಡಿದ್ದೆ. ನನ್ನನ್ನೇ ನಂಬಿದ ಹೆಂಡತಿಯನ್ನು ತೊರೆದು ಹೋಗುವ ವಿಚಾರವನ್ನು ಒಂದೇ ಸಮನೆ ಬೆಳೆಸಿಕೊಂಡಿದ್ದೆ.

"ನೀವು ನನಗೆ ಅದೆಂಥ ಮೋಸ ಮಾಡಿದಿರಿ? ವಿಶ್ವಾಸಘಾತ ಮಾಡಿದಿರಿ?" ಎಂದು ನನ್ನ ಹೆಂಡತಿ ನುಡಿದಿದ್ದರೆ ನನಗೆ ಉತ್ತರಿಸುವ

# ಕುಟುಂಬದ ಅಚ್ಚುಮೆಚ್ಚಿನದು



# ಬ್ರೂಕ್ ಬಾಂಡ್ ಚಹಾ

ತಾಜಾ ಮತ್ತು ಉತ್ತಮ

ಬ್ರೂಕ್ ಬಾಂಡ್ ಇಂಡಿಯಾ ಪ್ರೈವೇಟ್ ಲಿಮಿಟೆಡ್

JWTBB 363 K

ಬಾಯಿ ಉಳಿಯುತ್ತಿರಲಿಲ್ಲವೇನೋ. ಬದಲಾಗಿ "ಇನ್ನೊಬ್ಬ ಹೆಣ್ಣಿನೊಡನೆ ಸುಖವಾಗಿ ಇದ್ದೀರಿ" ಎಂದಿದ್ದಳಾದ್ದರಿಂದ ನನಗೆ ಮಾತಾಡುವ ಅವಕಾಶವೊದಗಿ ಬಂತು.

ಆಕೆಯೂ ನನ್ನ ಉತ್ತರಕ್ಕಾಗಿ ಕಾಯುತ್ತಿದ್ದಳೆಂದು ಕಾಣುತ್ತದೆ. ಮುಖವೆತ್ತಿದ್ದಳು. ನಿಃಶೂನ್ಯ ಭವಿತವ್ಯದ ಕಲ್ಪನೆಯಿಂದ ಕುಗ್ಗಿ, ಅಳುತ್ತಿರುವ ಹೆಂಗಸು ಯಾವ ಕಾಲಕ್ಕೂ ಚೆಲುವೆಯಲ್ಲ. ಅವಳ ಮುಖವು ವಿಕಾರಗೊಂಡಿತ್ತು. ಕೂದಲು ಕೆದರಿದ್ದವು.

"ಇಲ್ಲಿ ಯಾವ ಹೆಣ್ಣೂ ಬಂದು ನನ್ನ ಜೊತೆ ವಾಸವಾಗಿಲ್ಲ. ಆಣೆ ಮಾಡಿ ಹೇಳುವೆ. ಬೇಕಾದರೆ" ಎಂದೆ.

"ನಿಮ್ಮ ಜೊತೆಗೆ ಯಾರೂ ಇದ್ದಿಲ್ಲವೆ?"

"ಇಲ್ಲ. ಈ ಸಾಮಾನುಗಳು ಯಾರವೊ ಆಕೆಯ ಮುಖವನ್ನೂ ನಾನು ಕಂಡಿಲ್ಲ. ಹೆಸರೂ ಗೊತ್ತಿಲ್ಲ."

"ಹೌದೋ? ನಿಜವೆ?"

"ಹೌದು."

"ಓ ಹಾಗಿದ್ದರೆ ನಾನು, ಸುಮ್ಮನೆ ಅತ್ತೆ. ಮೊದಲೇ ಹೇಳಬಾರದಿತ್ತೆ?"

ಆಕೆ ನನ್ನ ಬಳಿಗೆ ದ್ರುತ-ಗತಿಯಿಂದ ಸರಿದಳು. ನನ್ನ ಬಲದೆದೆಗೆ ಆತುಕೊಂಡು ನಿಂತಳು. ೧೦-೧೫ ವರ್ಷಗಳ ಹಿಂದೆ ಇಂಥದೇ ಘಟನೆ ನಡೆದಿದ್ದರೆ ಆಕೆ ನನ್ನನ್ನು ಅಪ್ಪಿಕೊಂಡು, ಮುತ್ತಿಡುತ್ತಿದ್ದಳೇನೊ. ನಾವು ಆ ವಯಸ್ಸನ್ನು ದಾಟಿದ್ದೆವು. ಆದರೆ ವಿಕಾರಗೊಂಡಿದ್ದ ಅವಳ ಮುಖದಲ್ಲಾದ ಮಾರ್ಪಾಟಿನ ಚೆಲುವನ್ನು ಮಾತ್ರ ಕಾಣುವವನಾಗಿದ್ದೆ. ನಾನು ಅಷ್ಟು ಹೇಳಿದ ಮೇಲೆ ಯಾವ ಸಂದೇಹವನ್ನೂ ಅವಳು ಇಟ್ಟುಕೊಳ್ಳಲಿಲ್ಲ! ಅದ್ಭುತವೇ ಸರಿ. ಅದೇ ೧೫ ವರ್ಷದ ಹಿಂದಿನ ಮಾತಾಗಿದ್ದರೆ, ಅಷ್ಟು ಬೇಗ ವಿಶ್ವಾಸ ಕೊಡುತ್ತಿತ್ತೋ ಎಂಬುದನ್ನು ನಿಶ್ಚಿತವಾಗಿ ಹೇಳಲಾರೆ. ಆಕೆ ಸಂಪೂರ್ಣವಾಗಿ ನಂಬಿದಳು. ಮೂರು ನಾಲ್ಕು ತಾಸಿನ ವರೆಗೆ ಆ ಕೋಣೆಯಲ್ಲಿ ಅನ್ಯ ಸ್ತ್ರೀಯ ಅಸ್ತಿತ್ವವನ್ನು ಅವಳು ಊಹಿಸಿದ್ದಳು ಆ ಸೂಟ್‌ಕೇಸಿನ ವಸ್ತುಗಳಿಂದ ಖಾತ್ರಿ ಹಿಡಿದಿದ್ದಳು. ಆದರೆ ನನ್ನ ಮಾತಿನ ಮೇಲಿನ ವಿಶ್ವಾಸದಲ್ಲಿ ಅವೆಲ್ಲ ತೇಲಿ ಹೋದವು. ಅವಳು ಅದೇ ಭಾವದ ನಗೆಯಿಂದ ನನ್ನ ಕಡೆ ನೋಡಿದಾಗ ನನ್ನ ಜೀವನದಲ್ಲಿಯೇ ಹೊಸದೊಂದು ಅನುಭವವನ್ನು ಪಡೆದಂತಾಯಿತು.

*

(ಬ್ರನೊ ಫ್ರ್ಯಾಂಕ್ ಎಂಬ ಜರ್ಮನ್ ಸಾಹಿತಿಯ ಕತೆಯ ಆಧಾರದಿಂದ)



ಕಸ್ತೂರಬಾ ಹಿರಿಯರಿಗೆ ಶಿಸ್ತು, ಶುದ್ಧತೆ, ಪುಷ್ಟಿಯಾದ ಆಹಾರ, ಇವುಗಳ ವಿಷಯಗಳಲ್ಲಿ ಬೋಧಿಸತೊಡಗಿದ್ದರು. ಒಂದು ಹಳ್ಳಿಯಲ್ಲಿ ಬಾರವರು ಒಬ್ಬ ಹೆಂಗಸಿಗೆ ಸೀರೆಯನ್ನು ಚೆನ್ನಾಗಿ ಒಗೆದುಕೊಳ್ಳಲು ಹೇಳಿದಾಗ ಆಕೆ,

"ಗಾಂಧಿಯವರಿಗೆ ಹೇಳಿ, ನನಗೆ ಇರುವುದು ಒಂದೇ ಸೀರೆ. ಮತ್ತೊಂದು ಸೀರೆ ತಂದು ಕೊಡಲಿ, ಆಗ ನನ್ನ ಶುಚಿತ್ವ ನೋಡುವಿರಂತೆ" ಎಂದಳು.

— ರವೀಂದ್ರನಾಥ ಎಸ್. ಬಿ, ಶ್ರವಣಬೆಳ್ಗೊಳ.

ಈ ಉಪೇಕ್ಷಿತ ವಸ್ತುವಿನ ಸಾಮರ್ಥ್ಯ
ಕಲ್ಪನಾತೀತವಾಗಿದೆ

# ಕಾಮಧೇನುವಾಗಲಿರುವ ಕ್ಲೋರೆಲಾ

ಜಯಪ್ರಕಾಶ ಪಂಡಿತ

ಇಂದಿನಿಂದ ಕೆಲ ವರುಷಗಳ ನಂತರದ ಮಾತು. ಮಾನವನಿಗೆ ನಕ್ಷತ್ರಪ್ರಯಾಣ ಸಾಧ್ಯವಾಗಿದೆ-ಸ್ಪೇಸ್ ಸ್ಟೇಶನುಗಳು ನಿರ್ಮಾಣವಾಗಿವೆ. ಜನರೆಲ್ಲ ಸುಲಭವಾಗಿ ಆಕಾಶಪ್ರಯಾಣ ಮಾಡುವಂತಾಗಿದೆ. ಎಲ್ಲವೂ ಅದ್ಭುತವಾಗಿರುವ ಕಾಲವದು.

ಅದು ಸರಿ. ಆದರೆ ಇಲ್ಲಿ ಒಂದು ಪ್ರಶ್ನೆಯ ಉತ್ತರ ಹೇಳಬೇಕಾಗಿದೆ. ಈ ಸ್ಪೇಸ್ ಸ್ಟೇಶನುಗಳ ಮೇಲೆ ಮಾನವನಿಗೆ ಬದುಕಲು ಅತ್ಯಗತ್ಯವಾಗಿರುವ ಆಕ್ಸಿಜನ್ ಅವನಿಗೆ ಬೇಕಾಗುವಷ್ಟು ಪ್ರಮಾಣದಲ್ಲಿ ಎಲ್ಲಿಂದ ಬಂತು? ಸ್ಪೇಸ್ ಸ್ಟೇಶನುಗಳಲ್ಲಿರುವ ಕೆಲಸಗಾರರು ಆಕ್ಸಿಜನ್ ಇಲ್ಲದೆ ಎಂದೂ ಬದುಕಲಾರರಷ್ಟೆ. ಅಂದಮೇಲೆ ಅಲ್ಲಿ ಆಕ್ಸಿಜನ್ ಪೂರೈಕೆಯಿರಲೇಬೇಕು. ಈ ಆಕ್ಸಿಜನ್ ಬಂತು ಎಲ್ಲಿಂದ ?

ಸ್ಪೇಸ್ ಸ್ಟೇಶನುಗಳ ಮೇಲೆ ಆಕ್ಸಿಜನ್ ಇರುವುದೂ ನಿಜ, ಸಾಕಷ್ಟು ಪ್ರಮಾಣದಲ್ಲಿ ಅದು ಲಭ್ಯವಾಗಿರುವುದೂ ನಿಜ. ನಾವು ಸದಾ ಉಪೇಕ್ಷೆಯಿಂದಲೇ ಕಾಣುತ್ತ ಬಂದ ಚಿಕ್ಕ ವಸ್ತುವೊಂದು ಆಕ್ಸಿಜನ್ ಸಮಸ್ಯೆಗೆ ಪರಿಹಾರವನ್ನೊದಗಿಸಬಲ್ಲುದಾಗಿದೆ. ಆಶ್ಚರ್ಯಕಾರಕ ಗುಣಧರ್ಮಗಳುಳ್ಳ ಹಸಿರು ವರ್ಣದ ಈ ಪಾಚಿಯು ಜಲಾಶಯಗಳಲ್ಲಿ ಶಾಂತವಾಗಿ ತೇಲುತ್ತಿರುವುದನ್ನು ಸಾಮಾನ್ಯವಾಗಿ ಎಲ್ಲರೂ ಕಂಡಿರಬಹುದು. ಛಿ! ನೀರಿನಲ್ಲಿಯ ಹೊಲಸು ಎಂದು ಅದನ್ನು ಕಂಡು ಮೂಗು ಮುರಿದಿರಲೂಬಹುದು. ಆದರೆ ಈ ಉಪೇಕ್ಷಿತ, ತಿರಸ್ಕೃತ ಚಿಕ್ಕ ಪಾಚಿಯೇ ಸ್ಪೇಸ್ ಸ್ಟೇಶನುಗಳಲ್ಲಿ ಉದ್ಭವಿಸುವ ಆಕ್ಸಿಜನ್ ಸಮಸ್ಯೆಯನ್ನು ದೂರಮಾಡಲು ಅತ್ಯಂತ ಸಮರ್ಥವಾದ ವಸ್ತುವಾಗಿದೆ.

ಈ ಪಾಚಿಯಲ್ಲಿರುವ ಅದ್ಭುತ ಗುಣ ಇದೊಂದೇ ಅಲ್ಲ. ದಿನದಿನಕ್ಕೂ ಭೀಕರವಾಗುತ್ತಿರುವ ಜನರ ಆಹಾರ ಸಮಸ್ಯೆ, ಜ್ವಲನ ಸಾಮುಗ್ರಿಗಳ ಸಮಸ್ಯೆ ಮುಂತಾದ ಹಲವಾರು ಸಮಸ್ಯೆಗಳನ್ನು ಪರಿಹರಿಸುವ ಸಾಮರ್ಥ್ಯ ಜನ ಮೂಗು ಮುರಿಯುವ ಈ ಉಪೇಕ್ಷಿತ ವಸ್ತುವಿನಲ್ಲಿದೆ.

ಈ ವಿಶಿಷ್ಟ ಪಾಚಿಯ ವೈಜ್ಞಾನಿಕ ಹೆಸರು ಕ್ಲೋರೆಲಾ ಪಾಯರೆನ್ಯಾಡೋಸ್ ಎಂದು. ಇದು ಎಷ್ಟು ಸೂಕ್ಷ್ಮ ಆಕಾರದ್ದಾಗಿದೆಯೆಂದರೆ ಒಂದು ಗುಂಡುಸೂಜಿಯ ಮೇಲ್ಭಾಗದ ಗುಂಡಾದ ಭಾಗದ ಮೇಲೆ ಕಡಿಮೆಯೆಂದರೆ ಇದರ ನೂರು ಗಿಡಗಳು ಹಿಡಿಸಬಲ್ಲವು.

ಈಗ ಸುಮಾರು ಅರುವತ್ತೈದು ವರ್ಷಗಳಿಂ-

ದಲೂ ಹಿರಿಯ ಪ್ರಯೋಗ ಶಾಲೆಗಳು ಈ ಪಾಚಿಯ ಹೆಚ್ಚಿನ ಗುಣಧರ್ಮಗಳನ್ನರಿಯಲು ಪರಿಶ್ರಮಿಸುತ್ತಿವೆ.

ಇಲ್ಲಿಯವರೆಗಿನ ಪ್ರಯೋಗಗಳು ಇಂದಿನ ಆಹಾರ ಸಮಸ್ಯೆಯನ್ನು ಕ್ಲೊರೆಲಾ ಬಹು ಸುಲಭವಾಗಿ ಬಿಡಿಸಬಹುದೆಂಬುದನ್ನು ಸಿದ್ಧಪಡಿಸಿವೆ. ಮತ್ತು ಮುಂಬರುವ ವರ್ಷಗಳಲ್ಲಿ ಸಂಭವಿಸಬಹುದಾದ ಎಣ್ಣೆ, ಪೆಟ್ರೋಲ್ ಮತ್ತು ಕಲ್ಲಿದ್ದಲಿಗಳ ಅಭಾವವನ್ನು ಕೂಡ ಪರಿಹರಿಸುವ ಸಾಮರ್ಥ್ಯ ಇದಕ್ಕಿದೆ ಎಂದಾಗಿದೆ.

ಚಿಗುರಿನಿಂದ ಬೇರಿನ ವರೆಗೂ ಕ್ಲೊರೆಲಾ ಪೋಷಕಾಂಶಗಳಿಂದ ತುಂಬಿದೆಯೆನ್ನುವುದೇ ಅದರ ವಿಶೇಷ. ಇದರ ಬೇರು, ಕಾಂಡ ಮತ್ತು ಎಲೆ ಇವುಗಳಲ್ಲಿ ಯಾವವನ್ನೂ ನಿರುಪಯುಕ್ತವೆಂದು ಬೀಸಾಡುವಂತಿಲ್ಲ. ಬೇರೆ ಭೋಜ್ಯ ಪದಾರ್ಥಗಳೊಂದಿಗೆ ತುಲನೆ ಮಾಡಿದರೆ ಇದರಲ್ಲಿರುವ ಪ್ರೋಟೀನಿನ ಪ್ರಮಾಣವು ಹೆಚ್ಚು. ಕೊಬ್ಬು ಮತ್ತು ಕಾರ್ಬೋಹೈಡ್ರೇಟುಗಳೂ ಅಧಿಕಾಂಶದಲ್ಲಿವೆ. ವಿಟಾಮಿನ್ 'ಸಿ' ಒಂದನ್ನುಳಿದು ಬೇರೆಲ್ಲ ಸ್ವಾಸ್ಥ್ಯವರ್ಧಕ ಜೀವನಸತ್ವಗಳೂ ಈ ಅದ್ಭುತ ಸಸ್ಯದಲ್ಲಿವೆ.

ಇನ್ನೊಂದು ಇದರ ವೈಶಿಷ್ಟ್ಯವೆಂದರೆ, ಕ್ಲೊರೆಲಾ ಹೆಚ್ಚು ಜಾಗವನ್ನು ಆಕ್ರಮಿಸುವುದಿಲ್ಲ. ಜಗತ್ತಿನಲ್ಲಿರುವ ಈಗಿರುವ ಒಟ್ಟು ಭೂಮಿಯ ಕೇವಲ ೧/೫ ಭಾಗದಲ್ಲಿ ಬೆಳೆಸಿದ ಕ್ಲೊರೆಲಾ ೬೫ ಅಬ್ಜ ಜನರ (೨೦೫೦ ನೇ ಇಸವಿಯಲ್ಲಿ ಜಗತ್ತಿನ ಜನಸಂಖ್ಯೆ ಇಷ್ಟಾದೀತೆಂದು ಅಂದಾಜಿದೆ) ಆಹಾರ, ವಿದ್ಯುತ್ ಮತು ಜ್ವಲನ ವಿಷಯಕ ಅವಶ್ಯಕತೆಗಳನ್ನೆಲ್ಲ ಪೂರೈಸಬಲ್ಲುದೆಂದು ವಿಜ್ಞಾನಿಗಳ ಅಭಿಮತವಿದೆ.

ಅಮೇರಿಕದ ಕಾರ್ನೆಗಿ ವಿಜ್ಞಾನಮಂದಿರದವರು "ಪಾಯ್‌ಲಟ್ ಫ್ಯಾಕ್ಟರಿ" ಸಂಸ್ಥೆಯನ್ನು ಸ್ಥಾಪಿಸಿ ಕ್ಲೊರೆಲಾದಿಂದ ವಿಧಾಯಕ ಕಾರ್ಯಗಳನ್ನು ಮಾಡುತ್ತಿದ್ದಾರೆ. ಬಹು ದೊಡ್ಡ ಪ್ರಮಾಣದಲ್ಲಿ ಕ್ಲೊರೆಲಾವನ್ನು ಉತ್ಪಾದಿಸುವ ಕಾರಖಾನೆ ಕೇಂಬ್ರಿಜ್‌ನ ಭವ್ಯ ಭವನವೊಂದರ ಮೇಲಿನ ಅಂತಸ್ತಿನಲ್ಲಿದೆ. ಅಲ್ಲಿ ದೊಡ್ಡ ದೊಡ್ಡ ಪಾರದರ್ಶಕ ಪ್ಲಾಸ್ಟಿಕ್ ಟ್ಯೂಬುಗಳಲ್ಲಿ ಕ್ಲೊರೆಲಾ ಪಾಚಿಯನ್ನು ಬೆಳೆಸುವರು. ಈ ವರೆಗಿನ ಉತ್ಪಾದನಾ ಅಂಕಿ-ಸಂಖ್ಯೆಗಳಿಂದ ಪ್ರತಿ ಎಕರೆ ಭೂಮಿಯಲ್ಲಿ ೪೦ ಟನ್ ಕ್ಲೊರೆಲಾ ಬೆಳೆಯಬಹುದೆಂದು ಸಿದ್ಧವಾಗಿದೆ. ಯಥಾವಕಾಶದಲ್ಲಿ ಎಕರೆಗೆ ೧೫೦ ಟನ್ನುಗಳಷ್ಟು ಕ್ಲೊರೆಲಾ ಬೆಳೆಯುವುದು ಸಾಧ್ಯವಿದೆಯೆಂದು ವಿಜ್ಞಾನಿಗಳು ಲೆಕ್ಕ ಹಾಕಿದ್ದಾರೆ.

ಕೊರೆಲಾ ಉತ್ಪಾದನೆಯಲ್ಲಿ ಇಸ್ರಾಯೆಲ್ ಸರಕಾರ ವಿಶೇಷ ಆಸ್ಥೆ ತಾಳಿದೆ. ಆ ದೇಶದಲ್ಲಿ ಇದರಿಂದ ಎಷ್ಟೋ ವಿಧದ ಖಾದ್ಯ ಪದಾರ್ಥಗಳನ್ನು ತಯಾರಿಸುತ್ತಿದ್ದಾರೆ. ಇದು ವರೆಗೆ ನಮಗೆ ಗೊತ್ತಿರುವ ಬೇರೆಲ್ಲ ಆಹಾರ ಪದಾರ್ಥಗಳಿಗಿಂತಲೂ ಇವು ಹೆಚ್ಚು ಪೌಷ್ಟಿಕವಾಗಿವೆ.

ಆಹಾರ ಮಾತ್ರವಲ್ಲ, ಬೇರೆ ಕ್ಷೇತ್ರಗಳಲ್ಲಿಯೂ ಕ್ಲೊರೆಲಾ ನಮಗೆ ಅತ್ಯಂತ ಉಪಯುಕ್ತವಾಗಿದೆ. ಇಂದು ಅನಿಲ, ಕಲ್ಲಿದ್ದಲು ಪೆಟ್ರೋಲ್‌ಗಳ ವ್ಯಯದ ಪ್ರಮಾಣವನ್ನವಲೋಕಿಸಿದಾಗ ಮುಂದಿನ ಕಾಲುಶತಮಾನದೊಳಗಾಗಿಯೆ ಅವುಗಳ ಅಭಾವ ತಲೆದೋರಬಹುದೆಂಬ ಸಂಶಯವಿದೆ. ಆದರೆ ಕ್ಲೊರೆಲಾ ಇರುವ ವರೆಗೆ ಮುಂದೆ ಏನು ಗತಿ ಎಂದು ನಾವು ಚಿಂತಿಸಬೇಕಾಗಿಲ್ಲ. ಕೇವಲ ಕ್ಲೊರೆಲಾದಿಂದಲೇ ಜಗತ್ತಿನ ಖಾದ್ಯ ಮತ್ತು ಶಕ್ತಿ (energy)ಗಳ ಅಗತ್ಯಗಳೆಲ್ಲ ಪೂರಯಿಸುವ ದಿನಗಳು ಸನಿಹದಲ್ಲಿಯೇ ಬಂದಾವೆಂದು ವಿಜ್ಞಾನಿಗಳು ಭವಿಷ್ಯ ನುಡಿದಿದ್ದಾರೆ. ಸೌರಶಕ್ತಿಯನ್ನು ಏಕತ್ರಗೊಳಿಸಲು ಕ್ಲೊರೆಲಾ ಒಂದು ಮಹತ್ವದ ಸಾಧನವಾಗಿರುವುದರಿಂದ ಇದೇನೂ ಅಸಂಭವವಲ್ಲವೆನ್ನಬಹುದು.

ಕ್ಲೊರೆಲಾದ ಮೇಲೆ ಇತ್ತೀಚೆಗೆ ನಡೆಸಿದ

ಒಂದು ಪ್ರಯೋಗದಿಂದ ಅದರ ಭವಿತವ್ಯ ಇನ್ನೂ ಉಜ್ವಲವಾಗಿದೆಯೆನಿಸುತ್ತದೆ. ವೆನೆಜುಯೆಲಾ ನಲ್ಲಿ ಅನೇಕ ಕುಷ್ಠರೋಗಿಗಳಿದ್ದ ಒಂದು ಬೀದಿಯಲ್ಲಿ ಕ್ಲೋರೆಲಾವನ್ನು ಬೆಳೆಸಿ ಅದರಿಂದ ತಯಾರಿಸಿದ ಒಂದು ಬಗೆಯ ಸಾರವನ್ನು ರೋಗಿಗಳಿಗೆ ಕುಡಿಸಲಾಯಿತು. ತತ್ಪರಿಣಾಮವಾಗಿ ಅಧಿಕಾಂಶ ರೋಗಿಗಳ ದೇಹಭಾರ, ಸ್ವಾಸ್ಥ್ಯಗಳಲ್ಲಿ ಆಶ್ಚರ್ಯಕಾರಕ ಬದಲಾವಣೆಯಾಯಿತು. ಅವರು ಮೊದಲಿಗಿಂತ ಹೆಚ್ಚು ಆರೋಗ್ಯವಂತರಾದರು. ಅವರ ಉತ್ಸಾಹ ವರ್ಧಿಸಿ ಅವರು ಕ್ರಮೇಣ ಗುಣಮುಖರಾದರು.

ಇದರಿಂದ ವಿಜ್ಞಾನಿಗಳ ಕುತೂಹಲ ಹೆಚ್ಚಿದ್ದು ಅವರೀಗ ಕ್ಲೋರೆಲಾದ ಉಪಯೋಗವನ್ನು ಹೆಚ್ಚೆಚ್ಚಾಗಿ ಪಡೆಯುವುದಕ್ಕಾಗಿ ಶ್ರಮಿಸುತ್ತಿರುವರು. ಕ್ಲೋರೆಲಾದಿಂದ ಅಧಿಕ ಆಮ್ಲಜನಕವನ್ನು ಹೊರಡಿಸಬಹುದೆಂದು ಕಂಡ ಅಮೇರಿಕದ ವಾಯುಪಡೆಯವರು ಕ್ಲೋರೆಲಾ ಸಂಬಂಧದಲ್ಲಿ ಹೆಚ್ಚಿನ ಸಂಶೋಧನೆ ಮಾಡುತ್ತಿರುವ ಏಕಮೇವ ಹಿರಿಯ ಸಂಸ್ಥೆಯಾದ ಟೆಕ್ಸಾಸ್ ವಿಶ್ವವಿದ್ಯಾಲಯದ ಡಾ. ಜೆಕ್ ಮಾಯರ್ಸರಿಗೆ ತಮಗೆ ನೆರವಾಗಲು ಕೇಳಿಕೊಂಡಿರುವರು. ಡಾ. ಜೆಕ್‌ರು ಮಾಡಿದ ಪ್ರಯೋಗಗಳಿಂದ ಆಕಾಶ ಪರ್ಯಟನದಲ್ಲಿ ಆಕ್ಸಿಜನ್ ಪೂರೈಕೆಗೆ ಕ್ಲೋರೆಲಾ ಬಿಟ್ಟರೆ ಇನ್ನೊಂದು ಅಷ್ಟು ಉಪಯುಕ್ತ ವಸ್ತುವಿಲ್ಲ ಎಂದು ನಿರ್ಧರಿಸಲಾಗಿದೆ.

ಇತರ ಎಲ್ಲ ಸಸ್ಯಗಳಂತೆ ಕ್ಲೋರೆಲಾ ಕೂಡ ಕಾರ್ಬನ್ ಡಾಯಕ್ಸೈಡನ್ನು ಶ್ವಾಸ ರೂಪದಲ್ಲಿ ಗ್ರಹಿಸಿ ಆಕ್ಸಿಜನ್‌ನ್ನು ಹೊರಬಿಡುತ್ತದೆ. ಭಾರದಲ್ಲಿ ಉಳಿದೆಲ್ಲ ಸಸ್ಯಗಳಂತೆ ಹಗುರವಾಗಿದ್ದರೂ ಇದು ಹೊರಬಿಡುವ ಆಕ್ಸಿಜನ್ ಮಾತ್ರ ಉಳಿದೆಲ್ಲ ಸಸ್ಯಗಳನ್ನು ಮೀರಿಸುತ್ತದೆ. ಆಕಾಶ ಪರ್ಯಟನ ಸಾಧ್ಯವಾದದ್ದೇ ಆದರೆ ಅದು ಕ್ಲೋರೆಲಾದ ಸಹಾಯದಿಂದಲೇ ಸಾಧ್ಯವೆಂಬುದು ಪೂರ್ಣ ನಿಜ. ★



## ಶಿಷ್ಯ

ಸುಪ್ರಸಿದ್ಧ ನಟ ದಿ. ಸೈಗಾಲ್ ಒಂದು ಹೋಟಲಿನಲ್ಲಿ ಊಟ ಮಾಡುತ್ತ ಕುಳಿತಿದ್ದರು. ಆಗ ಒಬ್ಬ ಗಾಯಕ ಒಂದು ಪಿಟೀಲನ್ನು ಅಪಶ್ರುತಿಯಲ್ಲಿ ನುಡಿಸುತ್ತ ಸೈಗಾಲ್‌ರಿಗೆ ಬಹುಪ್ರಿಯವಾದ ಅವರು ಹಾಡಿದ ಒಂದು ಹಾಡನ್ನು ಅಪಸ್ವರದಲ್ಲಿ ಹಾಡುತ್ತಿದ್ದ. ತುಸು ಕಾಲ ಕಾದು ನೋಡಿದರು. ಆದರೆ ಪಿಟೀಲಿನ ಅಪಶ್ರುತಿ ಹಾಗೇ ಇತ್ತು; ಹಾಡು ಕರ್ಣ ಕಠೋರವಾಗಿತ್ತು. ಇನ್ನು ಸಹಿಸದಾದ ಸೈಗಾಲ್ ಎದ್ದು ಹೊರಗೆ ಹೋಗಿ ಅವನಿಂದ ಪಿಟೀಲನ್ನು ಇಸಿದುಕೊಂಡು ಶ್ರುತಿ ಮಾಡಿಕೊಟ್ಟರಲ್ಲದೆ ಹಾಡನ್ನು ಹೇಗೆ ಹೇಳಬೇಕೆಂದು ಹೇಳಿಕೊಟ್ಟು ವಾಪಸು ಬಂದರು.

ಮತ್ತೆ ಅವರು ಊಟ ಮುಗಿಸಿಕೊಂಡು ಹೊರಗೆ ಹೋದಾಗ ಪಿಟೀಲು-ಗಾಯಕ ಅಲ್ಲೊಂದೆಡೆಯಲ್ಲಿ ಕುಳಿತು ಬಾರಿಸುತ್ತ, ಒಂದು ಬೋರ್ಡು ತಗುಲಿ ಹಾಕಿಕೊಂಡಿದ್ದ. ಅದರಲ್ಲಿ " ನಾನು ಸೈಗಾಲ್‌ರ ಶಿಷ್ಯ " ಎಂದು ಬರೆದಿತ್ತು !

—ಬಿ. ಆರ್. ಶಂಕರ್



ಸರ್ಕಸ್ ಜೀವನದ ಒಂದು ದುರಂತ

# ಹುಲಿಯ ದವಡೆಗೆ ತಲೆ ಹಾಕಿದವಳು!

ಶಿವಾಜಿ ಶಂಕರ ಕಾರ್ಲೇಕರ

೧೬ ವರ್ಷದ ಕೋಮಲೆಯೊಬ್ಬಳು ದೊಡ್ಡ ಹುಲಿಯೊಂದಿಗೆ ಮಲ್ಲಯುದ್ಧ ನಡೆಸಿದ್ದಾಳೆ. ಪ್ರೇಕ್ಷಕರು ಉಸಿರುಗಟ್ಟಿ ಬಾಯ್ದೆರೆದು ನೋಡುತ್ತಿದ್ದಾರೆ. ನೋಡನೋಡುವಷ್ಟರಲ್ಲಿ ಹುಡುಗಿ ಹುಲಿಯ ಬಾಯನ್ನು ತನ್ನ ಕೈಗಳಿಂದ ತೆರೆದು ಅದರಲ್ಲಿ ತಲೆ ಒಡ್ಡುತ್ತಾಳೆ. ಮರುಕ್ಷಣವೇ ಕರ್ಣಕಠೋರವಾದ ಶಬ್ದ. ಹುಲಿಯ ದೇಹ ಕುಸಿಯಿತು. ಒತ್ತಟ್ಟಿಗೆ ರಕ್ತಸ್ನಾತೆಯಾಗಿ ತರುಣಿ ಮೂರ್ಛಿತಳಾಗಿ ಬಿದ್ದಳು.

ಇದು ನಡೆದದ್ದು ಕಾರ್ಲೇಕರ ಗ್ರ್ಯಾಂಡ್ ಸರ್ಕಸ್ಸಿನಲ್ಲಿಯೆ. ಮತ್ತು ಆ ಹುಡುಗಿ ಬೇರಾರೂ ಆಗಿರದೆ ವೀರಸ್ತ್ರೀ ತಾರಾಬಾಯಿಯಾಗಿದ್ದಳು.

ತಾರಾಬಾಯಿ ಸರ್ಕಸ್ಸಿನ ಹೆಸರನ್ನು ಜನತೆ ಇನ್ನೂ ಮರೆತಿಲ್ಲ. ಒಬ್ಬ ಸ್ತ್ರೀ ಒಂದು ಸರ್ಕಸ್ ಕಂಪೆನಿಯನ್ನು ಸ್ಥಾಪಿಸಿ ಖ್ಯಾತಿವೆತ್ತ ಉದಾಹರಣೆ ಇದೊಂದೆ. ಅವಳು ತನ್ನ ಅತುಲನೀಯ ಶಕ್ತಿಪ್ರಯೋಗಗಳಿಂದ ಭಾರತವಾಸಿಗಳನ್ನಷ್ಟೇ ಅಲ್ಲ, ಭಾರತೇತರರನ್ನೂ ದಂಗುಬಡಿಸಿದ್ದಳು.

ತಾರಾ ಬಾಯಿಯ ಜನ್ಮ ೧೯೦೨ರಲ್ಲಿ ಕೊಲಾ

ಪುರ ಜಿಲ್ಲೆಯ* ಖಡಕಲಾಟ ಎಂಬ ಹಳ್ಳಿಯಲ್ಲಿ ಆಯಿತು. ತಂದೆಯ ಹೆಸರು ಗುಲಾಬರಾವ್ ಶಿಂದೆ. ಜಾತಿ ಮರಾಠಾ. ಒಕ್ಕಲುತನ ಮನೆಯ ಉದ್ಯೋಗ. ಇವರ ಸ್ವಂತ ಭೂಮಿ ಬಹಳ ಚಿಕ್ಕದಿದ್ದುದರಿಂದ ಬಡತನ ತಪ್ಪಿರಲಿಲ್ಲ. ಗುಲಾಬರಾಯರಿಗೆ ಚಿಕ್ಕಂದಿನಿಂದಲೂ ಗರಡೀ ಸಾಧನೆಯಲ್ಲಿ ಆಸಕ್ತಿ ಇತ್ತು. ಖಡಕಲಾಟದ ಗರಡೀ ಮನೆಯ 'ವಸ್ತಾದ'ರು ಚಂದ್ರಭಾನ ಪಾಟೀಲ ಎಂಬವರು. ಸ್ವಲ್ಪ ದಿನಗಳಲ್ಲೇ ಸುತ್ತಲಿನ ಹಳ್ಳಿಗಳಲ್ಲಿ ಗುಲಾಬರಾವ್ ಎಂದರೆ ಒಬ್ಬ ಒಳ್ಳೆ 'ಪಹೆಲವಾನ್' ಎಂದು ಜನ ಆಡಿಕೊಳ್ಳುವಂತಾಯಿತು. ಚಂದ್ರಭಾನ ಪಾಟೀಲರಿಗೆ ಸರ್ಕಸ್ಸಿನಲ್ಲಿ ಆಸ್ಥೆ ಇದ್ದುದರಿಂದ ಮತ್ತು ಹಲವು ಕಾಲ ಭೋಸಲೆಯವರ ಸರ್ಕಸ್ಸಿನಲ್ಲಿ ಕೆಲಸ ಮಾಡಿದ್ದರಿಂದ ಅವರು ಸ್ವಲ್ಪ ಮಟ್ಟಿಗೆ ಅನುಭವವುಳ್ಳವರಾಗಿದ್ದರು. ತನ್ನದೇ ಒಂದು ಸರ್ಕಸನ್ನು ಪ್ರಾರಂಭಿಸಿದರು.

ಅವರ ಸರ್ಕಸ್ಸಿನಲ್ಲಿ ಅವರ ಶಿಷ್ಯ ಗುಲಾಬರಾವ್ ಇದ್ದೇ ಇದ್ದರು. ಈ ಸರ್ಕಸ್ಸಿನಲ್ಲಿ ಇದ್ದಾಗಲೇ ಅವರಿಗೆ ತಾರಾಬಾಯಿ ಕನ್ಯಾರತ್ನ ಹುಟ್ಟಿದ್ದು. ತಾರಾಬಾಯಿ ಹುಟ್ಟಬೇಕಾದರೆ ಅವರ ತಾಯಿಯ ಬಯಕೆಗಳು ಬಲು ವಿಚಿತ್ರವಾಗಿದ್ದವು. ತನಗೆ ಕುಸ್ತಿ ಆಡಬೇಕೆಂದು ಅನಿಸುತ್ತದೆಂದು ಅವರು ಹೇಳುತ್ತಿದ್ದರು. ಹಾಲು, ಬೆಣ್ಣೆ, ಬದಾಮು ಮುಂತಾದ ಜಟ್ಟಿಗಳ ಖಾದ್ಯವನ್ನೇ ತಿನ್ನಬೇಕೆಂದು ಅನ್ನಿಸುತ್ತಿತ್ತಂತೆ. ಇದರಿಂದ ತಮಗೆ ವೀರಪುತ್ರನು ಜನಿಸಲಿದ್ದಾನೆಂದು ಗುಲಾಬರಾವ್ ಬಗೆದಿದ್ದರು. ಆದರೆ ಮಗಳು ಹುಟ್ಟಿದ ಮೇಲೆ ಅವರು ತುಸು ನಿರಾಶೆಗೊಂಡರು.

ತಾರಾಬಾಯಿಯ ಜನ್ಮವಾದ ಮೇಲೆ ಕೆಲ ದಿನಗಳಲ್ಲೆ ಸರ್ಕಸ್ ಕಂಪೆನಿ ಬಂದಾಗಿ ಎಲ್ಲರೂ ಮರಳಿ ಖಡಕಲಾಟಕ್ಕೆ ಬರುವಂತಾಯಿತು. ಮತ್ತೆ ಮೊದಲಿನಂತೆ ಗುಲಾಬರಾಯರು ಒಕ್ಕಲುತನದಲ್ಲಿ ತೊಡಗಿದರು. ಪಾಟೀಲರು ತಮ್ಮ ಗರಡೀ ಮನೆಯನ್ನು ಶುರುಮಾಡಿದರು.

ತಾರಾಬಾಯಿ ಬೆಳೆಯುತ್ತ ಹೋದಂತೆ ಅವಳ ಬಾಲಲೀಲೆಗಳನ್ನು ಕಂಡು ತಂದೆತಾಯಿಗಳು ಸಂತೋಷಪಡುತ್ತಿದ್ದರು. ತಾರಾ ಬಲು ಮುದ್ದಾದ ಹುಡುಗಿಯಾಗಿದ್ದಳು. ತತ್ತಿಯ ಆಕಾರದ ಮುಖ, ಸಂಪಿಗೆ ಎಸಳಿನಂತಹ ಮೂಗು, ಆರಕ್ತವಾದ ತುಟಿಗಳು, ಕೇದಗೆಯ ಬಂಗಾರಬಣ್ಣ ಮತ್ತು ಮೃಗಚಂಚಲ ನಯನ ಇವೆಲ್ಲ ಅವಳ ಸೌಂದರ್ಯವನ್ನು ಹೆಚ್ಚಿಸಿದ್ದವು. ಅದರೊಟ್ಟಿಗೆ ಅವಳ ಗದ್ದದ ಮೇಲಿದ್ದ ಮಚ್ಚೆಯಂತೂ ಹಾಲಿಗೆ ಸಕ್ಕರೆ ಬೆರೆಸಿದಂತೆ ಅವಳ ಸೌಂದರ್ಯ ಹೆಚ್ಚಿಸಲು ಕಾರಣೀಭೂತವಾಗಿತ್ತು. ಇಷ್ಟು ಲಕ್ಷಣವಾಗಿದ್ದರೂ ತಾರಾ ದೃಢಕಾಯಳೂ ಎತ್ತರಳೂ ಆಗಿದ್ದಳು.

ಆರು ವರ್ಷದವಳಾದ ಮೇಲೆ ಇವಳನ್ನು ಶಾಲೆಗೆ ಕಳಿಸಿದರು. ಮರಾಠಿ ನಾಲ್ಕನೇ ಇಯತ್ತೆಯ ವರೆಗೆ ಕಲಿಸುವ ಸಾಲೆಯದು. ಹೆಣ್ಣುಮಕ್ಕಳಿಗೆಂದು ಪ್ರತ್ಯೇಕ ಸಾಲೆ ಅಲ್ಲಿ ಇರಲಿಲ್ಲ. ವಿದ್ಯಾರ್ಜನೆಯ ಕಡೆಗೆ ಎಳ್ಳಷ್ಟೂ ಒಲವುದೋರದ ಈ ಹುಡುಗಿ ತನ್ನ ಓರಗೆಯ ಹುಡುಗರನ್ನೂ ಪ್ರಸಂಗ ಬಂದರೆ ಎತ್ತಿ ಒಗೆಯಲು ಸಮರ್ಥಳಿದ್ದಳು. ಇವಳ ವಿರುದ್ಧ ಇತರ ಹುಡುಗರ ತಂದೆ ತಾಯಿಯರು ಇವಳ ತಂದೆಯ ಮುಂದೆ ದೂರಿಕೊಂಡರೆ ತಂದೆ ಮಗಳ ಮೇಲೆ ಸಿಟ್ಟಾಗುವ ಬದಲು ಅಭಿಮಾನದಿಂದ ಎದೆ ಅಗಲಿಸುತ್ತಿದ್ದರು. ತಾರಾಳನ್ನು ಅವರು ಮಗನೆಂದೇ ತಿಳಿದಿದ್ದರು. ತಾವು ಪಹೆಲವಾನರಿದ್ದುದರಿಂದ ಮಗಳಿಗೂ ವ್ಯಾಯಾಮದ ಶಿಕ್ಷಣ ಕೊಡತೊಡಗಿದರು. ಅವಳಿಗೆಂದು ಹೈನಕ್ಕಾಗಿ ಒಂದು ಎಮ್ಮೆಯನ್ನು ತಂದರು. ಶಿಕ್ಷಣದಲ್ಲಿ ಮನಸ್ಸೇ

* ಇದು ಮಹಾರಾಷ್ಟ್ರ ಸೀಮೆಯ ಮೇಲಿನ ಕನ್ನಡ ಹಳ್ಳಿ. ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿಗೆ ಹತ್ತಿ ಇದೆ.

ಇಲ್ಲದ ತಾರಾ ಹಾಗೂ ಹೀಗೂ ಎರಡನೆ ಇಯತ್ತೆಯ ವರೆಗೆ ಓದಿದಳು. ಅಷ್ಟರಲ್ಲಿ ಒಂದು ದುರ್ಘಟನೆ ಸಂಭವಿಸಿತು. ಅವಳ ಶಾಲೆ ನಿಂತು ಹೋಗಲಿಕ್ಕೆ ಇದು ತುಂಬ ಅನುಕೂಲದ್ದಾಯಿತು.

ಗುಲಾಬರಾವ್ ಸುಸ್ವಭಾವಿಗಳು. ಊರಲ್ಲಿ ಎಲ್ಲರಿಗೂ ಬೇಕಾದವರು. ಅದರೆ ವಿಪರೀತ ಹೆಂಡ ಕುಡಿಯುವ ವ್ಯಸನ ಮಾತ್ರ ಅವರ ಚಾರಿತ್ರ್ಯಕ್ಕೆ ಕಲಂಕವಿದ್ದಂತಿತ್ತು. ಹೆಂಡ ಕುಡಿದು ಬಂದು ಹೆಂಡತಿಯನ್ನು ಮೈಮುರಿ ಹೊಡೆಯುತ್ತಿದ್ದರು. ಎಷ್ಟೋ ಸಲ ಮಗಳೇ ತಾಯಿಯನ್ನು ಈ ಹೊಡೆತಗಳಿಂದ ಪಾರುಮಾಡಿದ್ದಳು. ಗುಲಾಬರಾವ್ ಎಂಥ ಸಿಟ್ಟಿನಲ್ಲಿದ್ದರೂ ಎದುರಿಗೆ ಮಗಳನ್ನು ಕಂಡರೆ ಆಕಳಷ್ಟು ಸಾಧುವಾಗಿ ಬಿಡುತ್ತಿದ್ದರು. ಈ ಕುಡಕುತನವೇ ಒಂದು ಪ್ರಸಂಗವನ್ನು ಒಡ್ಡಿ ಗುಲಾಬರಾಯರ ದುರ್ವ್ಯಸನವನ್ನೂ ತಾರಾಳ ಶಿಕ್ಷಣವನ್ನೂ ನಿಲ್ಲಿಸಿಬಿಟ್ಟಿತು.

ಖಡಕಲಾಟದ ಹತ್ತಿರವೆ ಚಿಂಚಲಿ ಎಂಬ ಇನ್ನೊಂದು ಊರಿದೆ. ಪ್ರತಿ ವರ್ಷ ಮಾರ್ಗಶೀರ್ಷ ತಿಂಗಳಲ್ಲಿ ಇಲ್ಲಿ ದೇವಿಯ ಜಾತ್ರೆಯಾಗುತ್ತದೆ. ಗುಲಾಬರಾವ ಪ್ರತಿ ವರ್ಷ ತಪ್ಪದೆ ಜಾತ್ರೆಗೆ ಹೋಗುತ್ತಿದ್ದರು. ತಾರಾ ಸ್ವಲ್ಪ ದೊಡ್ಡವಳಾದ ಮೇಲೆ ಅವಳನ್ನೂ ಕರೆದುಕೊಂಡು ಹೋಗತೊಡಗಿದರು. ತಾರಾ ಎಂಟು ವರ್ಷದವಳಿದ್ದಾಗ ತಂದೆಯೊಂದಿಗೆ ಎತ್ತಿನ ಗಾಡಿಯಲ್ಲಿ ಕುಳಿತು ಜಾತ್ರೆಗೆ ಹೋಗಿದ್ದಳು. ಜಾತ್ರೆಯಲ್ಲಿ ವಿಪರೀತ ಸೆರೆ ಕುಡಿದು ಗುಲಾಬರಾವ್ ಎತ್ತುಗಳನ್ನು ಓಡಿಸತೊಡಗಿದರು. ಊರಿಗೆ ಮರಳಿ ಬರುವಾಗ ದಿಕ್ಕೆಟ್ಟು ಓಡುವ ಎತ್ತುಗಳು ಗಾಡಿಯನ್ನು ಎಳೆದುಕೊಂಡು ನಡೆದಾಗ ಒಂದು ಗಾಲಿ ಬಿಚ್ಚಿತು. ತಂದೆ ಮಗಳು ಗಾಡಿಯಿಂದ ಪುಟಿದುಬಿದ್ದರು. ತಾರಾಳ ತಲೆ ಒಂದು ಕಲ್ಲಿಗೆ ಅಪ್ಪಳಿಸಿತು. ಆಕೆ ತತ್ಕಾಲ ಮೂರ್ಛೆ ಹೋದಳು. ಜಾತ್ರೆಯಿಂದ ಮರಳಿ ಬರುತ್ತಿದ್ದ ಜನರು ತಂದೆ-ಮಗಳನ್ನು ಆಸ್ಪತ್ರೆಗೆ ಒಯ್ದರು.

ಗುಲಾಬರಾಯರಿಗೆ ಮೈತಿಳಿಯಲಿಕ್ಕೆ ಒಂದು ದಿನ ಬೇಕಾಯಿತು. ಎಚ್ಚತ್ತಾಗ ಮಗಳು ಎಲ್ಲಿರುವಳೆಂದು ಕೇಳಿದರು. ತಾರಾಗೆ ಬಹಳ ಬಲವಾದ ಪೆಟ್ಟು ಬಿದ್ದಿತ್ತು. ಮಗಳ ಸ್ಥಿತಿಯನ್ನು ನೋಡಿ ತಂದೆ ಕಂಗಾಲಾದರು. "ದೇವೀ, ನನ್ನ ಮಗಳಿಗೆ ಜೀವದಾನ ಮಾಡು. ಇನ್ನು ನಾನೆಂದಿಗೂ ಹೆಂಡ ಮುಟ್ಟಲಾರೆ" ಎಂದು ಆಣೆ ಮಾಡಿದರು.

ದೇವಿ ಒಲಿದಳೇನೊ, ಮಗಳು ಎಚ್ಚತ್ತಳು. ಆದರೂ ಪೂರ್ತಿ ಗುಣವಾಗಲು ಮೂರು ತಿಂಗಳು ಹಿಡಿಯಿತು. ಆಂದಿನಿಂದ ಗುಲಾಬರಾವ್ ಸೆರೆ ಮುಟ್ಟಲಿಲ್ಲ. ತಾರಾಳನ್ನು ಶಾಲೆಗೆ ಕಳಿಸುವ ಬದಲು ಗೌಡರ ಕೈಯಲ್ಲಿ ಸರ್ಕಸ್ ಪ್ರಯೋಗಗಳನ್ನು ಕಲಿಸತೊಡಗಿದರು. ಚಂದ್ರಭಾನ ಪಾಟೀಲರು ತಮ್ಮ ಶಿಷ್ಯನ ಮಗಳೆಂದು ಒಳ್ಳೇ ಉತ್ಸಾಹದಿಂದ ಕಲಿಸಲಾರಂಭಿಸಿದರು. ಜೋಕಾಲಿಯ ಕೆಲಸ, ಬೋನ್‌ಲೆಸ್ ( ಮೈ ಎಲ್ಲ ಮುರಿದುಕೊಳ್ಳುವ ) ಕೆಲಸ, ತಂತಿಯ ಮೇಲಿನ ವ್ಯಾಯಾಮ, ಬಿದಿರ ಎಳೆಯ ಕೆಲಸ, ಗುಂಡುಕಲ್ಲಿನ ಮೇಲೆ ಹಲಗೆ ಇಟ್ಟು ಅದರ ಮೇಲೆ ಮಾಡುವ ವ್ಯಾಯಾಮ,— ಮುಂತಾದವನ್ನು ಕಲಿಸಿದರಲ್ಲದೆ ಮಲ್ಲಯುದ್ಧವನ್ನೂ ಕಲಿಸಿಕೊಟ್ಟರು. ಶಾಲೆಗೆ ಹೋಗಲು ಬೇಸರ ಪಡುತ್ತಿದ್ದ ತಾರಾ ಈ ಕೆಲಸಗಳನ್ನು ಮನಸಾರೆ ಕಲಿತಳು.

ತಮ್ಮ ಶಿಷ್ಯೆಯ ನೈಪುಣ್ಯಕ್ಕೆ ಮೆಚ್ಚಿ ಗೌಡರು ತಾರಾಳ ಹೆಸರಿನಿಂದೇ ಸರ್ಕಸ್ ಪ್ರಾರಂಭಿಸಿದರು. ಕೆಲ ದಿನ ಈ ಸರ್ಕಸ್ ಕಂಪೆನಿ ನಡೆಯಿತು. ಇದರಲ್ಲಿ ತಾರಾನ ಕೆಲಸವೇ ಬಹಳ. ಒಂದು ದಿನ ಇದ್ದಕ್ಕಿದ್ದಹಾಗೆ ಚಂದ್ರಭಾನ ಪಾಟೀಲರು ಹೃದಯಕ್ರಿಯೆ ನಿಂತು ನಿಧನರಾದರು. ಕಂಪೆನಿಯನ್ನು ನಿಲ್ಲಿಸಿ ಎಲ್ಲ ಸಾಮಾನನ್ನು ತಂದು

ಹಳ್ಳಿಯಲ್ಲಿ ಒಗೆಯಲಾಯಿತು.

ಆಗ ನಮ್ಮ ಸರ್ಕಸ್ ಕೊಲ್ಲಾಪುರದಲ್ಲಿತ್ತು. ಗುಲಾಬರಾವ್ ತಮ್ಮ ಮಗಳೊಂದಿಗೆ ಅಲ್ಲಿ ಬಂದರು. ಈ ಮೊದಲೇ ತಾರಾಳ ಬಗ್ಗೆ ಕೇಳಿ ತಿಳಿದಿದ್ದರಿಂದ ಪ್ರೊ. ಶಂಕರರಾಯರು ಅವರಿಬ್ಬರನ್ನೂ ಕಾರ್ಲೇಕರ ಸರ್ಕಸ್ಸಿನಲ್ಲಿ ಇಟ್ಟುಕೊಂಡರು.

ತಾರಾಳನ್ನು ಸರ್ಕಸ್ಸಿನಲ್ಲಿ ಮಕ್ಕಳಿಗೆ ಆಟಗಳನ್ನು ಕಲಿಸುತ್ತಿದ್ದ ಕುಂಜಂಬು ವಸ್ತಾದನಿಗೆ ಒಪ್ಪಿಸಲಾಯಿತು. ಈತ ಮಲೆಯಾಳಿ. ತನ್ನ ಕಾರ್ಯದಲ್ಲಿ ತುಂಬ ಅನುಭವ ಪಡೆದವನು.

ಕುಂಜಂಬು ಅವಳಿಗೆ ಎಷ್ಟೋ ಹೊಸ ಹೊಸ ಕೆಲಸಗಳನ್ನು ಕಲಿಸಿದ ೫೦ ಅಡಿ ಎತ್ತರದಲ್ಲಿ ಕಟ್ಟಿದ ಜೋಕಾಲಿಯಲ್ಲಿ ಒಂದು ಬಾಟಲಿ ಇಟ್ಟು ಅದರ ಮೇಲೆ ಹಲಗೆ ಇಟ್ಟು ಹಲಿಗೆಯ ಮೇಲೆ ತಾರಾ ಕೂತುಕೊಳ್ಳುತ್ತಿದ್ದಳು. ಅವಳ ತಲೆಯ ಮೇಲೆ ತಲೆ ಊರಿ ಕಾಲು ಮೇಲೆ ಮಾಡಿ ಇನ್ನೊಬ್ಬ ಹುಡುಗಿ ನಿಲ್ಲುತ್ತಿದ್ದಳು.

ಇದೊಂದೇ ಅಲ್ಲದೆ, ಅವಳ ಶರೀರ ಬಲವನ್ನು ಮೆಚ್ಚಿದ ಕುಂಜಂಬು ವಸ್ತಾದ ಕೂದಲುಗಳಿಂದ ಮನುಷ್ಯರಿಂದ ತುಂಬಿದ ಬಂಡಿಯನ್ನು ಎಳೆಯುವುದು, ಕೂದಲಿಗೆ ಬಂಡೆಗಲ್ಲನ್ನು ಕಟ್ಟಿ ಮೇಲಕ್ಕೆ ಎತ್ತುವುದು, ಎದೆಯ ಮೇಲೆ ಬಂಡೆಯನ್ನು ಎಳೆದುಕೊಳ್ಳುವುದು, ಕೈಗಳಿಂದ ಮೋಟಾರನ್ನು ತಡೆಯುವುದು ಮತ್ತು ಎದೆಯ ಮೇಲೆ ಆನೆಯನ್ನು ನಿಲ್ಲಿಸಿಕೊಳ್ಳುವುದು ಮುಂತಾದ ಎಷ್ಟೊ ಬೇರೆ ಕೆಲಸಗಳನ್ನೂ ಕಲಿಸಿದನು.

ತಾರಾಳ ಪ್ರಗತಿ ಇಷ್ಟಕ್ಕೆ ನಿಲ್ಲಲಿಲ್ಲ. ಶಂಕರರಾಯರು ಅವಳಿಗೆ ಹುಲಿ ಸಿಂಹಗಳ ಕೆಲಸಗಳನ್ನೂ ಕಲಿಸತೊಡಗಿದರು. ಹುಲಿಯೊಂದಿಗೆ ಕುಸ್ತಿ ಆಡುವುದು, ಹುಲಿಯ ಬಾಯಲ್ಲಿ ತಲೆ ಕೊಡುವುದು ಮುಂತಾದ ಭಯಾನಕ ಕೆಲಸಗಳನ್ನು ತಾರಾ ಕಲಿತಳು. ಈ ಪ್ರಯೋಗಗಳನ್ನು ಈ ವರೆಗೆ ಬೇರೆ ಯಾವ ಸ್ತ್ರೀಯಾಗಲಿ ಪುರುಷನಾಗಲಿ ಮಾಡಿದ್ದಿಲ್ಲವಾದ್ದರಿಂದ ಇವಳಿಗೆ ಅಖಿಲ ಭಾರತೀಯ ಕೀರ್ತಿ ಲಭಿಸಿತು. ತಾರಾಳ ಈ ಉತ್ಕರ್ಷವನ್ನು ಸಹಿಸಲಾರದವರೂ ಇದ್ದರು. ಇವಳಿಗೆ ಸಿಗುತ್ತಿದ್ದ ೫೦೦ ರೂಪಾಯಿ ಸಂಬಳವನ್ನು ಕಂಡು ಹೊಟ್ಟೆ ಉರಿಸಿಕೊಳ್ಳುವವರೂ ಇದ್ದರು ಈ ದ್ವೇಷಿಗಳಲ್ಲಿ ಭುಜಂಗರಾವ್ ಎಂಬವನು ಪ್ರಮುಖನಾಗಿದ್ದ. ಅವನ ಪತ್ನಿಗೂ ತಾರಾಗೂ ಏನೊ ಜಗಳವಾಗಿತ್ತು. ಆ ಕಾರಣಕ್ಕಾಗಿ ಸೇಡು ತೀರಿಸಲು ಭುಜಂಗರಾವ ದಂಪತಿಗಳು ಕಾದಿದ್ದರು.

ಹುಲಿ ಸಿಂಹಗಳಿಗೆ ಆಹಾರ ನೀಡಲು ಮೊಮೀನ ಎಂಬಾತನಿದ್ದ. ಅವನಿಗೆ ದುಡ್ಡು ಕೊಟ್ಟು ಒಲಿಸಿಕೊಂಡು ಒಂದು ದಿನ ಯಾವ ಹುಲಿಯ ಬಾಯಲ್ಲಿ ತಾರಾ ರುಂಡವನ್ನು ಇಡುತ್ತಿದ್ದಳೊ ಆ ಹುಲಿಗೆ ಆಹಾರದೊಂದಿಗೆ ಕುಸುಂಬಾ ಎಂಬ ಒಂದು ಬಗೆಯ ಮಾದಕ ದ್ರವ್ಯವನ್ನು ಭುಜಂಗರಾವ್ ತಿನ್ನಿಸಿದ. ಅಂದು ಸರ್ಕಸ್ಸಿಗೆ ಜನ ಕಿಕ್ಕಿರಿದು ತುಂಬಿದ್ದರು ಮಾದಕ ಪದಾರ್ಥವನ್ನು ಸೇವಿಸಿ ಮತ್ತವಾದ ಹುಲಿ ಪಂಜರದಿಂದ ಬರುವಾಗಲೇ ಬಾಲವನ್ನು ಅಪ್ಪಳಿಸುತ್ತ ಕೋಪೋದ್ರಿಕ್ತವಾಗಿಯೆ ಬಂತು. ಅದರ ಉರಿಗಣ್ಣುಗಳನ್ನೂ ರೌದ್ರವನ್ನೂ ನೋಡಿ ಬಾಯಲ್ಲಿ ತಲೆಕೊಡುವ ಪ್ರಯೋಗವನ್ನು ಇಂದು ಬಿಟ್ಟುಬಿಡಬೇಕೆಂದು ಶಂಕರರಾಯರು ತಾರಾಗೆ ಸೂಚಿಸಿದರು. ಆದರೆ ಪ್ರೇಕ್ಷಕ ಸಮುದಾಯವನ್ನು ನೋಡಿದಾಗ ಆಟ ಬಿಡಲು ಸಾಧ್ಯವಿಲ್ಲೆಂದೇ ಇಬ್ಬರೂ ತೀರ್ಮಾನಿಸಬೇಕಾಯಿತು. ಶಂಕರರಾಯರು ಪಿಸ್ತೂಲನ್ನು ತುಂಬಿಕೊಂಡು ಹೊರಗಡೆ ನಿಂತರು ಆಟ ಶುರುವಾಯಿತು. ಮದೋನ್ಮತ್ತ ಹುಲಿ ತನ್ನ ಕ್ರೌರ್ಯವನ್ನು ತೋರಿಸಿಯೆ ಬಿಟ್ಟಿತು. ಶಂಕರರಾಯರು ಗುಂಡು ಹಾಕಿದರು. ಹುಲಿ ಸತ್ತು ಬಿದ್ದಿತು. ಡಾಕ್ಟರರು ಗಾಯ ದೊಡ್ಡದಿದ್ದರೂ

ಹೆದರಬೇಕಾಗಿಲ್ಲ ಎಂದು ಹೇಳಿದರು. ಹುಲಿಯ ಬಗ್ಗೆ ಸಂದೇಹ ಉಂಟಾದ್ದರಿಂದ ಸತ್ತ ಹುಲಿಯ ಪರೀಕ್ಷೆ ಮಾಡಿಸಲಾಗಿ ಮಾದಕ ದ್ರವ್ಯ ತಿನ್ನಿಸಿದ್ದು ತಿಳಿದು ಬಂತು. ಮೊಮೀನನನ್ನು ಪೋಲೀಸರ ಕೈಗೆ ಕೊಟ್ಟಾಗ ಆತ ಇದ್ದ ಹಕೀಕತ್ತನ್ನು ಹೇಳಿದ. ಭುಜಂಗರಾಯನನ್ನೂ ಬಂಧಿಸಿದರು. ಇಬ್ಬರಿಗೂ ಒಂದೊಂದು ವರ್ಷದ ಸಶ್ರಮ ಶಿಕ್ಷೆಯಾಯಿತು. ಆದರೂ ಭುಜಂಗರಾವ್ ಕೊನೆಗೂ ಹೆಸರಿನಂತೆ ತನ್ನ ಭುಜಂಗವೃತ್ತಿಯನ್ನು ಬಿಡಲೇ ಇಲ್ಲ!

ಆರು ತಿಂಗಳು ಆಸ್ಪತ್ರೆಯಲ್ಲಿ ಉಪಚಾರ ಹೊಂದಿ ತಾರಾ ಗುಣ ಹೊಂದಿದಳು. ಶಂಕರರಾಯರು ಅವಳಿಗೆ ಯೋಗ್ಯ ಉಪಚಾರ ಒದಗಿಸಿದರು. ಈ ಕಾಲಾವಧಿಯಲ್ಲಿ ಅವಳ ಸಂಬಳವನ್ನು ಕೊಡುವುದಲ್ಲದೆ ಅವಳ ಧೈರ್ಯವನ್ನು ಗೌರವಿಸಲೆಂದು ರೂ ೧,೦೦೦ ನಗದು ಬಹುಮಾನವಿತ್ತರು. ಆ ಮೇಲೂ ತಾರಾ ಕಾರ್ಲೇಕರ ಸರ್ಕಸ್ಸಿನಲ್ಲಿ ಮತ್ತೆ ಮೂರು ವರ್ಷ ಕೆಲಸ ಮಾಡಿದಳು. ಅವಳ ತಾಯಿಗೆ ಕಾಹಿಲೆಯೆಂದು ತಿಳಿದು ಬಂದದ್ದರಿಂದ ತಮ್ಮ ಊರಿಗೆ ಹೋದಳು. ಅಲ್ಲಿರುವಾಗಲೇ ತಾಯಿಯ ದೇಹಾಂತ್ಯವಾಯಿತು.

ಇಷ್ಟರಲ್ಲಿ ಸಾಕಷ್ಟು ದುಡ್ಡು ಕೂಡಿತ್ತು. ಗುಲಾಬರಾಯರು ಚಂದ್ರಭಾನ ಪಾಟೀಲರ ಸಾಮಾನನ್ನು ಪಡೆದು ಮತ್ತೆ ತಾರಾಬಾಯಿ ಸರ್ಕಸ್ಸನ್ನು ಪ್ರಾರಂಭಿಸಿದರು. ಈಗ ತಾರಾ ಸುಮಾರು ೧೯-೨೦ ವರ್ಷದವಳಿದ್ದಳು. ದುಡ್ಡಿನ ಕೊರತೆ ಇರಲಿಲ್ಲವಾದ್ದರಿಂದ ಆನೆ, ಕುದುರೆ, ಹುಲಿ, ಸಿಂಹ ಮುಂತಾದ ಪ್ರಾಣಿಗಳನ್ನೆಲ್ಲ ತಂದರು. ಕಂಪನಿ ಸ್ವಲ್ಪ ದೊಡ್ಡದಾಗುತ್ತಲೇ ಕೊಲ್ಲಾಪುರಕ್ಕೆ ಕ್ಯಾಂಪ್ ಹಾಕಿದರು. ಆಗ ಕೊಲ್ಲಾಪುರದ ದೊರೆಗಳಾಗಿದ್ದ ಛತ್ರಪತಿ ಶಾಹೂ ಮಹಾರಾಜರು ತಮ್ಮ ಸಂಸ್ಥಾನದಲ್ಲಿ ತಾರಾಬಾಯಿ ಸರ್ಕಸ್ ಬಂದುದನ್ನು ಮೆಚ್ಚಿ ೨ ಆನೆ, ೮ ಕುದುರೆಗಳನ್ನು ಭಕ್ಷೀಸಾಗಿ ಕೊಟ್ಟದ್ದಲ್ಲದೆ ದುಡ್ಡನ್ನೂ ಹೇರಳವಾಗಿ ಕೊಟ್ಟರು. ಮುಂದೆ ತಾರಾಬಾಯಿ ಸರ್ಕಸ್ಸಿನ ಉತ್ಕರ್ಷ ಭರದಿಂದ ಆಗತೊಡಗಿತು.

ಹಿಂದಿನ ಕುಡುಕತನದ ಪರಿಣಾಮವಾಗಿ ಪುಪ್ಪುಸಗಳು ಮೊದಲೆ ಕೆಟ್ಟದ್ದರಿಂದ ಸರ್ಕಸ್ ಪ್ರಾರಂಭವಾದ ಮೇಲೆ ಎರಡು ವರ್ಷಗಳಲ್ಲೇ ಗುಲಾಬರಾಯರು ದಿವಂಗತರಾದರು. ೨೨ ವರ್ಷದ ತಾರಾ ಯಾರ ಬೆಂಬಲವಿಲ್ಲದೇ ಏಕಾಕಿಯಾಗಿ ದೊಡ್ಡ ಸರ್ಕಸ್ ಕಂಪನಿಯ ಸೂತ್ರಗಳನ್ನು ವಹಿಸಿಕೊಂಡಳು

ಅಂಥ ಸ್ಥಿತಿಯಲ್ಲಿ ಆಕೆ ತೋರಿದ ಧೈರ್ಯ ಅಪಾರವಾದದ್ದು. ಮುಂದೆ ಅವಳು ೧೨ ವರ್ಷಗಳವರೆಗೆ ಕಂಪೆನಿಯನ್ನು ಯಶಸ್ವಿಯಾಗಿ ನಡೆಸಿದ್ದು ಇನ್ನೂ ಹೆಚ್ಚಿನ ಅಪೂರ್ವವೇ ಸೈ. ಅನೇಕ ಸಂಸ್ಥೆಗಳಿಂದಲೂ ಸಂಸ್ಥಾನಿಕರಿಂದಲೂ ಇವಳಿಗೆ ಬಹುಮಾನಾರ್ಥಕ ಪದಕಗಳು ಸಿಕ್ಕವು. ಭಾರತವನ್ನೆಲ್ಲ ಸುತ್ತಿ ಸಿಲೋನ್, ಮಲಾಯಾ, ಜಾವಾ, ಸುಮಾತ್ರಾ, ಫಿಲಿಪಾಯಿನ್ಸ್, ಸಯಾಂ, ಬ್ರಹ್ಮದೇಶ ಮುಂತಾದ ಪರದೇಶಗಳನ್ನೂ ಸುತ್ತಿ ಬಂದಿತು ತಾರಾಬಾಯಿ ಸರ್ಕಸ್! ಸರಹದ್ ಪ್ರಾಂತದ ನೌಶೇರಾ ಎಂಬ ಊರಲ್ಲಿ ಕ್ಯಾಂಪ್ ಇದ್ದಾಗ ಅಲ್ಲಿಯ ಗುಂಡಾಗಳು ಡೇರೆಗೆ ಬೆಂಕಿ ಹಚ್ಚಿದರು. ತಾರಾಬಾಯಿ ಎದೆಗುಂದದೆ ಆ ಪ್ರಸಂಗದಲ್ಲಿ ಸರ್ಕಸ್ಸನ್ನು ಉಳಿಸಿ ಸುರಕ್ಷಿತ ಸ್ಥಳಕ್ಕೆ ತಂದದ್ದು ಮರೆಯಲಾಗದ ಸಾಹಸ ಪ್ರಸಂಗವೇ!

೧೯೩೪ರಲ್ಲಿ ಕಾರ್ಲೇಕರ ಸರ್ಕಸ್ ಮುಂಬಯಿಯಲ್ಲಿ ಇದ್ದಾಗ ತಾರಾಬಾಯಿ ಪ್ರೊ. ಶಂಕರರಾಯರನ್ನು ಕಾಣಲೆಂದು ಬಂದಿದ್ದಳು. ತಮ್ಮ ಕಂಪೆನಿಯ ಒಬ್ಬ ಹುಡುಗಿ ಇಂದು ಇಷ್ಟೊಂದು ಘನತೆಗೇರಿರುವುದನ್ನು ಕಂಡು ಅವರಿಗೆ ಆನಂದದಿಂದ ಕಂಠ ಬಿಗಿದುಬಂತು. ಉತ್ತರೋತ್ತರ ಹೀಗೇ ಅಭಿವೃದ್ಧಿಯಾಗಲೆಂದು ಹರಸಿ ಕಳಿಸಿ

ಕೊಟ್ಟರು.

೧೯೩೩ ರಲ್ಲಿ ಭುಜಂಗರಾವ್ ಅಕಸ್ಮಾತ್ ತಾರಾಬಾಯಿಯ ಕಡೆಗೆ ಬಂದು ನೌಕರಿಗಾಗಿ ಯಾಚನೆ ಮಾಡಿದ. ತಾರಾಬಾಯಿ ಅವನನ್ನು ನಂಬಿ ನೌಕರಿಗಿಟ್ಟುಕೊಂಡಳು. ಹಿಂದಿನ ಪ್ರಸಂಗವನ್ನು ತಾರಾ ಪೂರ್ಣ ಮರೆತಿದ್ದಳು. ಮೇಲಾಗಿ ಹಿಂದಿನ ಕಾಲದವರು ಯಾರೂ ಈಗ ಕಂಪೆನಿಯಲ್ಲಿ ಇದ್ದಿಲ್ಲವಾದ್ದರಿಂದ ಇವನಿಗೆ ಸ್ಥಾನ ಕೊಟ್ಟಳು. ಅವನೂ ಒಂದು ವರ್ಷ ಅತ್ಯಂತ ಪ್ರಾಮಾಣಿಕತನದಿಂದ ದುಡಿದ. ಫಲವಾಗಿ ತಾರಾಬಾಯಿ ಅವನನ್ನು ಮ್ಯಾನೇಜರನನ್ನಾಗಿ ಮಾಡಿದಳು.

ಈ ವರೆಗೂ ಹೊಂಚುಹಾಕಿ ಕೂತಿದ್ದ ಭುಜಂಗರಾಯನಿಗೆ ಸಂಧಿ ತಾನೇ ತಾನಾಗಿ ಸಿಕ್ಕಿತು. ತಾರಾಬಾಯಿಯ ಮೇಲಿನ ಬದ್ಧ ದ್ವೇಷಕ್ಕಾಗಿ ಅವಳ ಆಹುತಿಯನ್ನಂತೂ ಆತ ಬೇಡುತ್ತಲೇ ಇದ್ದ. ಅಲ್ಲದೆ ಅವಳು ಅವಿವಾಹಿತೆಯಾದ್ದರಿಂದಲೂ ಅವಳ ಉತ್ತರಾಧಿಕಾರಿಯಾಗಿ ಸಂತಾನ ಇಲ್ಲವೆ ಬೇರಾರೂ ಇಲ್ಲದ್ದರಿಂದಲೂ ತಾರಾಬಾಯಿಯ ಸರ್ಕಸ್ಸಿನ ಸಂಪತ್ತನ್ನು ಎತ್ತಿಹಾಕಬೇಕೆಂಬ ಆಸೆಯನ್ನೂ ಇಟ್ಟುಕೊಂಡಿದ್ದ. ಮೊದಮೊದಲು ಕೆಲಸಗಾರರ ಸಂಬಳವನ್ನು ಸ್ವಲ್ಪ ಸ್ವಲ್ಪ ಏರಿಸಿ ಅವರನ್ನು ವಶಪಡಿಸಿಕೊಂಡ. ಹುಲಿ ಸಿಂಹಗಳ ವಿಚಾರಣೆ ಮಾಡುವವನ ಸಂಬಳವಂತೂ ಒಂದೂವರೆ ಪಟ್ಟು ಹೆಚ್ಚಾಯಿತು. ಇಷ್ಟಾದ ಮೇಲೆ ತಾರಾಬಾಯಿಗೆ ಹೇಳಿ ಕಂಪನಿಯನ್ನು ಸಿಲೋನಿಗೆ ಒಯ್ದ. ಪ್ರಥಮ ಬಾರಿ ಸಿಲೋನಿನಲ್ಲಿ ಒಳ್ಳೇ ಉತ್ಪನ್ನವನ್ನು ಹೊಂದಿದ್ದರಿಂದ ತಾರಾಬಾಯಿ ಸಮ್ಮತಿಸಿದಳು.

ಸಿಲೋನಿನಲ್ಲಿ ಕ್ಯಾಂಡಿ ಎಂಬ ಊರಲ್ಲಿ ಕ್ಯಾಂಪ್ ಇದ್ದಾಗ ಆ ದುರ್ದಿನ ಉದಿಸಿತು. ಮೊದಲಿನ ಆಟವನ್ನೇ ಮತ್ತೆ ಈ ಸಲವೂ ಭುಜಂಗರಾವ್ ಆಡಿದ. ಬೀಸಿದ ಬಲೆಯಲ್ಲಿ ತಾರಾಬಾಯಿ ಸಿಕ್ಕಿದಳು. ಆದರೆ ಈ ಸಲ ಹುಲಿರುಂಡವನ್ನು ಕಚ್ಚುವಾಗ ಹುಲಿಗೆ ಗುಂಡಿಕ್ಕಿ ಕೊಲ್ಲುವವರೇ ಅಲ್ಲಿಲ್ಲದ್ದರಿಂದ ಹುಲಿ ತಾರಾಬಾಯಿಯನ್ನು ಮುಗಿಸಿತು ತಾರಾಬಾಯಿ ಕೂಗಿಕೊಂಡದ್ದರಿಂದ ಜನ ಬೆಂಕಿಯ ಪಂಜುಗಳನ್ನು ತೋರಿಸಿ ಹುಲಿಯನ್ನು ಹೆದರಿಸಲೆತ್ನಿಸಿದರು. ಕೊನೆಗೆ ಪ್ರೇಕ್ಷಕ ಸಮುದಾಯದಲ್ಲಿ ಕೂತಿದ್ದ ಪೋಲಿಸ್ ಅಧಿಕಾರಿಗಳೊಬ್ಬರು ಪಿಸ್ತೂಲಿನಿಂದ ಗುಂಡು ಹಾರಿಸಿ ಹುಲಿಯನ್ನು ಕೊಂದರು. ಹುಲಿಯ ಬಾಯಿಂದ ತಾರಾ ಹೊರಬಂದರೂ ಮರಣದ ದವಡೆಯಿಂದ ಹೊರಬಂದಿರಲಿಲ್ಲ. ಅವಳ ಪ್ರಾಣ ಆಗಲೇ ಹಾರಿಹೋಗಿತ್ತು.

ಸರ್ಕಸ್ಸಿನವರು ಕ್ಯಾಂಡಿಯಲ್ಲಿ ತಾರಾಬಾಯಿಯ ಭವ್ಯ ಸ್ಮಾರಕವನ್ನು ನಿಲ್ಲಿಸಿದರು. ಕಪಟಿಯಾದ ಭುಜಂಗರಾಯನ ಕೈಗೆ ಒಂದು ಕಾಸೂ ಹತ್ತದಂತೆ ಇಡೀ ಸರ್ಕಸ್ಸನ್ನು ತಾರಾಬಾಯಿಯ ಊರಿಗೆ ತಂದು ಅವಳ ಸಂಬಂಧಿಕರ ಕಡೆಗೆ ಒಪ್ಪಿಸಿದರು. ಭಾರತಕ್ಕೆ ಕೀರ್ತಿ ತಂದ ಈ ಮಹಾರಾಷ್ಟ್ರದ ಮಹಿಳೆಯ ಅಂತ್ಯ ದೂರ ದೇಶದಲ್ಲಿ ಇಷ್ಟು ಘೋರವಾಗಿ ಆದದ್ದು ನೆನೆಸಿದರೆ ಹೊಟ್ಟೆಹೊಸೆಯುತ್ತದೆ *

### ಸಾಧನೆ

ಹಣವಿರುವವರ ಬಡಸಾಧನೆಗೂ
ಒದಗುವುದಗ್ಗ ಪ್ರಚಾರ.
ಬಡವರ - ಬಗ್ಗರ ಸಿರಿಸಾಧನೆಗೂ
ದೊರಕದು ಬಾಯುಪಚಾರ.

### ಅ(ಉ?)ಪಾಯ

ನೆರೆಹೊರೆ ಜನಗಳ ಮೆಚ್ಚದಿದ್ದರೂ
ಚುಚ್ಚದಿರುವುದುಪಾಯ
ಹೆಚ್ಚಿನ ಫಲವಿನ್ನೇನಿರದಿದ್ದರು
ತಪ್ಪುವುದೆಮಗೆ ಅಪಾಯ.

— ಲಕ್ಷ್ಮೀನರಸಿಂಹನ್



## ಪುಲ್ಲಿಂಗ ದೇಶ

# ಅಥೋಸ್

ಜಿ. ಗಂಗಾಧರ

ಹೆಂಗಸರಷ್ಟೇ ಅಲ್ಲ; ಯಾವ ಹೆಣ್ಣು ಪ್ರಾಣಿಯೂ ಇರಕೂಡದೆಂಬ ಕಾನೂನನ್ನು ಸಾವಿರಾರು ವರ್ಷಗಳ ಹಿಂದಿನಿಂದ ಇಂದಿಗೂ ನಡೆಸಿಕೊಂಡು ಬಂದ ಪುಲ್ಲಿಂಗ ಪ್ರದೇಶವೊಂದು ಇದೇ ಲೋಕದಲ್ಲಿ ಇದೆ. ಅದೇ ಎಥೋಸ್.

ಗ್ರೀಸ್ ದೇಶದ ನಕಾಶೆಯನ್ನು ನೋಡಿದರೆ ಸಾಲೊನಿಕಾದಿಂದ ೬೨ ಮೈಲು ಪೂರ್ವಕ್ಕೆ ಈಜಿಯನ್ ಆಖಾತದಲ್ಲಿ ಕಾಲು ಚಾಚಿರುವ ಮೂರು ದ್ವೀಪಕಲ್ಪಗಳು ಕಾಣಿಸುತ್ತವೆ. ಅವುಗಳಲ್ಲಿ ಕಡೆಯ ದ್ವೀಪಕಲ್ಪವೇ ಎಥೋಸ್. ಸಮುದ್ರ ಮಟ್ಟದಿಂದ ೬,೬೭೦ ಅಡಿ ಎತ್ತರವಾಗಿರುವ ಶ್ವೇತಶಿಲೆಯ ಎಥೋಸ್ ಪರ್ವತದಿಂದಲೇ ಈ ನಾಡಿಗೆ ಈ ಹೆಸರು ಬಂದಿದೆ. ಎಥೋಸ್ ಪರ್ವತ ಸಂಜೆಯ ಹೊಂಬೆಳಕಿನಲ್ಲಿ ಬಹು ರಮಣೀಯವಾಗಿ ತೋರುತ್ತದೆ. ಜಗತ್ತಿನ ಸುಂದರ ದೃಶ್ಯಗಳಲ್ಲಿ ಇದೊಂದು. ಎಥೋಸಿನ ದಕ್ಷಿಣಕ್ಕೆ ಹರಡಿರುವ ಭೂಪ್ರದೇಶದಲ್ಲಿ ಅನೇಕ ಹೊಳೆ-ಹಳ್ಳಗಳು ಹರಿಯುತ್ತವೆ. ಆದರೆ ಬರಡದೆಯಲ್ಲೂ ಕವಿತೆಯ ಒರತೆಯನ್ನು ಚಿಮ್ಮಿಸಬಲ್ಲ ಈ ನಾಡಿನ ನಿವಾಸಿಗಳು ಹೂವಿನ ಸೌಂದರ್ಯವನ್ನೂ ಸವಿಯಲಾರದ ಮರದೆದೆಯವರಾಗಿದ್ದಾರೆ.

ಈ ಪ್ರದೇಶ ಒಟ್ಟು ಇಪ್ಪತ್ತು ಮಠಗಳ ಅಧೀನಕ್ಕೆ ಒಳಗಾಗಿದೆ. ಅದರ ಸಂನ್ಯಾಸಿಗಳೇ ಇಲ್ಲಿನ ಅಧಿಪತಿಗಳು. ಅವರು ತಮಗೂ ತಮ್ಮ ದೇವನಿಗೂ ನಡುವೆ ಯಾವ ಆನಂದವೂ ಉಲ್ಲಾಸವೂ ನಿಲ್ಲದಂತೆ ನೋಡಿಕೊಂಡಿದ್ದಾರೆ. ನಲುವತ್ತು ಮೈಲು ಉದ್ದ ಹಾಗೂ ನಾಲ್ಕರಿಂದ ಏಳು ಮೈಲಿನ ವರೆಗೆ ಅಗಲದ ಈ ಪ್ರದೇಶ ಸಾಧುಗಳು ಅರಸರಾದ ನಾಡು ಹೇಗಿದ್ದೀತೆಂಬುದಕ್ಕೆ ನಿದರ್ಶನವಾಗಿ ನಿಂತಿದೆ.

ಈ ಮಠಗಳು ಒಂಬತ್ತರಿಂದ ಹನ್ನೊಂದನೇ ಶತಮಾನಗಳ ನಡುವೆ ಕಟ್ಟಲ್ಪಟ್ಟವು. ಇಂದಿನ ಇಸ್ತಂಬುಲ್ ಇರುವಲ್ಲಿ ಸಾವಿರ ವರ್ಷಗಳ ಹಿಂದೆ ಬಿಜಂಟಿಯಮ್ ಎಂಬ ನಗರವಿತ್ತು. ಕ್ರೈಸ್ತ ಸಾಮ್ರಾಜ್ಯದ ರಾಜಧಾನಿಯಾದ ಇದರ ಪೌರಸ್ತ್ಯ ಜನರು "ಧರ್ಮಪಾರಾಯಣ" ರಾಗಿದ್ದರು. ಸುತ್ತಲಿನ ರಾಷ್ಟ್ರಗಳನ್ನು ಗೆದ್ದು ಸುಲಿಗೆ ಮಾಡಿ ತಂದ ಸಂಪತ್ತನ್ನೆಲ್ಲ ಇವರು ಎಥೋಸ್‌ನ ಕಾಡುಗಳಲ್ಲಿ ಒಯ್ದಿಟ್ಟರು. ಅಲ್ಲಿಯೇ ತಾವೂ ಹೋಗಿ ಕೋಟೆಕೊತ್ತಲಗಳಂತೊಪ್ಪುವ ಭವ್ಯ ಮಠಗಳನ್ನು ಕಟ್ಟಿ ವಜ್ರವೈಡೂರ್ಯಗಳಿಂದ ಅವನ್ನು ಅಲಂಕರಿಸಿದರು. ಹೋಗುವಾಗ ತಮ್ಮೊಂದಿಗೆ ಈ ಡಾಂಭಿಕ ಜನರು ನಾಲ್ಕನೆ, ಐದನೆ ಮತ್ತು ಆರನೆ ಶತಮಾನದ ಧಾರ್ಮಿಕ ಗ್ರಂಥಗಳನ್ನೂ ಒಯ್ದರು. ಪ್ರಾಚೀನ ಗ್ರಂಥಗಳೂ ಬಿಜಂಟೈನ್ ಕಲೆಯ ಮಾದರಿಗಳೂ ಇಂದು ಇಲ್ಲಿಯ ಆಕರ್ಷಣೆ

ಯಾಗಿವೆ.

ಎಥೋಸಿನಲ್ಲಿ ಹೋಗಿ ನೆಲೆಸಿದ ಧಾರ್ಮಿಕ ಜನರು ಅದನ್ನು ಪವಿತ್ರ ರಾಜ್ಯವಾಗಿ ಮಾಡಲು ನಿರ್ಧರಿಸಿದರು. ಪಾವಿತ್ರ್ಯ ಕೆಡಬಾರದೆಂದು "ಸ್ತ್ರೀಯರು, ಸ್ತ್ರೀಯರಿಗೆ ಸಂಬಂಧಪಟ್ಟ ಯಾವುದೇ ವಸ್ತುಗಳು ಅಥವಾ ಯಾವುದೇ ಹೆಣ್ಣು ಪ್ರಾಣಿಗಳು ಮತ್ತು ತೋಳ ಹಾಗೂ ಮುಸಲ್ಮಾನರು ಇಲ್ಲಿ ಇರಕೂಡದು, ಪ್ರವೇಶಿಸಕೂಡದು" ಎಂದು ೧೦೪೫ ರಲ್ಲಿ ಕಾನೂನು ಮಾಡಿದರು. ಅಂದಿನಿಂದ ಇಂದಿಗೂ ಇಲ್ಲಿ ಸ್ತ್ರೀ ಜಾತಿಯ ಪ್ರವೇಶವೇ ಇಲ್ಲ. ಇಲ್ಲಿ ಹೊರಗಿನಿಂದ ಗಂಡಸರು ಗ್ರೀಸ್‌ದೇಶದ ಒಪ್ಪಿಗೆ ಪಡೆದ. ಹೋಗಬಹುದಾದರೂ ಎಥೋಸಿನ ಸೀಮೆಯಲ್ಲಿ ಕಾಲಿಡುವ ಮುಂಚೆ ಗಡಿ ಪೋಲೀಸರ ಪರಿಕ್ಷೆಗೆ ಗುರಿಯಾಗಬೇಕಾಗುವುದು. ನಿಮ್ಮ ಬಳಿ ಸ್ತ್ರೀಯರಿಗೆ ಸಂಬಂಧಪಟ್ಟ ಯಾವುದೇ ವಸ್ತು ಸಿಕ್ಕರೂ ಅವರು ನಿಮ್ಮನ್ನು ತಡೆಗಟ್ಟಬಹುದು. ನಿಮ್ಮ ಪ್ರವೇಶವನ್ನು ರದ್ದುಗೊಳಿಸಬಹುದು. ಇಲ್ಲಿಯ ಸಾಕುಪ್ರಾಣಿಗಳಾದ ಕುರಿ ಕುದುರೆ, ಎತ್ತು, ಬೆಕ್ಕುಗಳು ಕೂಡ ಕೇವಲ ಗಂಡೇ ಇವೆ. ಹೆಣ್ಣುಪ್ರಾಣಿಯಾಗಲಿ ಪಕ್ಷಿಯಾಗಲಿ ಕಾಣಿಸಿದರೂ ಇವರು ಕೊಂದು ಹಾಕುತ್ತಾರೆ. ಮನುಷ್ಯನ ಆಕ್ರಮಣಕ್ಕೆ ನಿಲುಕಲಾರದ ದಟ್ಟಡವಿಯಲ್ಲಿ ಎಲ್ಲಿಯೊ ಕೆಲವು ಹಕ್ಕಿಗಳು ಗೂಡು ಕಟ್ಟಿ ಸಂಸಾರಮಾಡುತ್ತಿರಬಹುದು, ಅಷ್ಟೆ.

೧೪ ನೇ ಶತಮಾನದಲ್ಲಿ ಈಜಿಯನ್ ಕಡಲುಗಳ್ಳರು ಇಲ್ಲಿಯ ಸಂಪತ್ತನ್ನು ಕೆಲ ಮಟ್ಟಿಗೆ ಸುಲಿಗೆ ಮಾಡಿದರು. ತುರ್ಕರು ಯುರೋಪಿನಲ್ಲಿ ರಾಜ್ಯ ಸ್ಥಾಪಿಸಿದಾಗ ಎಥೋಸಿನತ್ತ ಅವರ

ಕಣ್ಣು ಹೊರಳಿತು. ಆದರೆ ಇಲ್ಲಿಯ ಸಂನ್ಯಾಸಿಗಳು ತುರ್ಕರಿಗೆ ಅಧೀನರಾಗಲು ಬೇಗನೆ ಸಿದ್ಧರಾದ್ದರಿಂದ ಅವರೂ ಇವರ ಒಳ ಆಡಳಿತದಲ್ಲಿ ಕೈಹಾಕಲಿಲ್ಲ. ಮುಂದಿನ ತುರ್ಕೀ ಸುಲ್ತಾನರೂ ಇವರ ಅಧಿಕಾರಗಳಿಗೆ ಹಾಗೂ ಧಾರ್ಮಿಕ ಕಾರ್ಯಗಳಿಗೆ ಮಾನ್ಯತೆ ಕೊಡುತ್ತ ಬಂದರು. ಮುಂದೆ ೧೭೮೩ ರಲ್ಲಿ ಎಲ್ಲ ಮಠಗಳಿಂದಲೂ ಒಬ್ಬೊಬ್ಬ ಪ್ರತಿನಿಧಿಯನ್ನು ಆಯ್ದು ಈ ಇಪ್ಪತ್ತು ಪ್ರತಿನಿಧಿಗಳು ಸೇರಿ ಒಬ್ಬ ಅಧ್ಯಕ್ಷನನ್ನು ಆರಿಸಿ ಎಥೋಸಿನ ರಾಜ್ಯಕಾರಭಾರವನ್ನು ನೋಡಿಕೊಳ್ಳಬೇಕೆಂದು ನಿರ್ಧಾರವಾಯಿತು. ಅಂದಿನಿಂದ ಇಲ್ಲಿ ಈ ಪಂಚಾಯತಿ ಪದ್ಧತಿ ಜಾರಿಯಲ್ಲಿದೆ.

ವೆಟೊಪೇಡಿ ಎಂಬ ಮಠದ ಮುಖ್ಯಸ್ಥರು ಸೇರಿ ೧೭೪೯ ರಲ್ಲಿ ಧಾರ್ಮಿಕ ಗ್ರಂಥಗಳ ಹಾಗೂ ಪುರಾತನ ಕಲೆಯ ಅಭ್ಯಾಸಿಗಳನ್ನು ಆಹ್ವಾನಿಸಿದರು. ಆದರೆ ತಾವೂ ಜಗತ್ತಿನಲ್ಲಿ ಒಂದು ವಿಧಾಯಕ ಕಾರ್ಯವನ್ನು ಮಾಡಬೇಕೆಂದಿದ್ದ ಅವರ ಯತ್ನ ಫಲಿಸಲಿಲ್ಲ. ಇಲ್ಲಿ ಧಾರ್ಮಿಕ ಕಟ್ಟುನಿಟ್ಟುಗಳೇ ಬಹಳ. ಆದ್ದರಿಂದ ಕೆಲ ವಿಮರ್ಶಕರು "ಇವರು ಬರಿಯ ಡಾಂಭಿಕರು ಮಾತ್ರ ಇದ್ದಾರೆ; ಧಾರ್ಮಿಕ ರೀತಿಯ ಉನ್ನತ ಮನೋಭಾವ ಹೊಂದಿದವರಿಲ್ಲ" ಎನ್ನುತ್ತಾರೆ. ಕಳೆದ ಶತಮಾನದಲ್ಲಿ ಜರ್ಮನರೂ ಇಲ್ಲಿ ಸುಲಿಗೆ ಮಾಡಿದರು. ಆದರೆ ಹಿಂದೆ ೧೪ ನೇ ಶತಮಾನದಲ್ಲಿ ನಡೆದ ಸುಲಿಗೆಗಿಂತ ಹೆಚ್ಚೇನೂ ಇವರ ಕೈಗೆ ಹತ್ತಲಿಲ್ಲ. ಇಷ್ಟಾದರೂ ಎಥೋಸ್ ತುಲನಾತ್ಮಕವಾಗಿ ಯಾವ ಸಂಪನ್ನ ರಾಷ್ಟ್ರಕ್ಕಿಂತಲೂ ಹೆಚ್ಚೇ ಸಿರಿವಂತವಾಗಿದೆ.

ಚರ್ಮ ಪತ್ರಗಳಲ್ಲಿ ಬರೆದ ಅಮೂಲ್ಯ ಗ್ರಂಥಗಳನ್ನು ಹರಿದು ಮೀನುಗಳನ್ನು ಹಿಡಿಯುವ ಗಾಳಕ್ಕೆ ಆಮಿಷವನ್ನು ಕಟ್ಟಲು ಮುಸ್ಲಿಂ ಸುಲಿಗೆಗಾರರು ಉಪಯೋಗಿಸಿ ಕೆಲವನ್ನು ಹಾಳುಮಾಡಿದರು. ಪ್ರವಾಸಿಕರಿಗೆ ಕೆಲವನ್ನು ಬಂದ ಬೆಲೆಗೆ ಮಾರಿದರು. ಇವು ಬಹುಶಃ ಧರ್ಮ ಗುರುಗಳ ರಕ್ಷಣೆಯಿಲ್ಲದ ಗ್ರಂಥಗಳು ಮಾತ್ರ. ಹಲವನ್ನು ರಶಿಯಾ, ಪ್ಯಾರಿಸ್‌ಗಳಿಗೂ ಸಾಗಿಸಲಾಗಿತ್ತು. ಅವು ಇಂದಿಗೂ ಅಲ್ಲಿಯ ಸಂಗ್ರಹಾಲಯಗಳಲ್ಲಿ ನೋಡಸಿಗುತ್ತವೆ.

ಕಾರ್ಯೆಸ್ ಇಲ್ಲಿಯ ರಾಜಧಾನಿ. ಸಣ್ಣ ಪಟ್ಟಣ. ಗ್ರೀಸಿನ ಪಟ್ಟಣಗಳಂತಿಲ್ಲ. ಅಂಗಡಿಗಳಿವೆ. ಎಲ್ಲ ಬಗೆಯ ವಸ್ತುಗಳಿವೆ. ಪೇಟೆ ಇದೆ. ಪೋಲೀಸನು ರಹದಾರಿಯನ್ನು ನಿಯಂತ್ರಿಸುತ್ತಾನೆ. ಮತ್ತು ಅಲ್ಲಲ್ಲಿ ಬಿಳೀ ಗಡ್ಡದ ನಗೆಯರಿಯದ ಗಂಭೀರ ಪ್ರಕೃತಿಯ ಸ್ತ್ರೀ ದ್ವೇಷಿ ಸಂನ್ಯಾಸಿಗಳು ನಿಂತದ್ದು ಕಾಣುತ್ತದೆ.

೧೯೨೮ ರಲ್ಲಿ ಎಥೋಸ್‌ನ ಜನಸಂಖ್ಯೆ ೪,೭೬೪ ಇತ್ತು. ಈಗ ಸುಮಾರು ೫,೦೦೦ ಇದೆ ಎಂದು ಹೇಳುತ್ತಾರೆ. ಇವರಲ್ಲಿ ೩,೦೦೦ ದಷ್ಟು ಧರ್ಮಗುರುಗಳಿದ್ದು ಉಳಿದವರು ಅನುಯಾಯಿಗಳು! ದಿನದ ಇಪ್ಪತ್ತನಾಲ್ಕು ಗಂಟೆಗಳಲ್ಲಿ ಸುಮಾರು ಮುಕ್ಕಾಲು ಸಮಯ ತಪಸ್ಸಾಧನೆಯಲ್ಲಿಯೇ ಕಳೆಯುತ್ತಾರೆ. ಅನುಯಾಯಿಗಳು ಪ್ರಾರ್ಥನೆ, ಧರ್ಮ-ಕರ್ಮಗಳನ್ನು ಮುಗಿಸಿ ಉಳಿದ ಹೊತ್ತಿನಲ್ಲಿ ಕೈಗಾರಿಕೆ, ಒಕ್ಕಲುತನ ಮತ್ತು ಮೀನು ಹಿಡಿಯುವುದನ್ನು ಮಾಡುತ್ತಾರೆ.

ಹೊರನಾಡುಗಳಿಂದ ಬರುವ ಸಹಾಯ ಧನವೇ ಇಲ್ಲಿಯ ಮುಖ್ಯ ಉತ್ಪನ್ನ. ಇಲ್ಲಿಯ ಕೆಲಸಕ್ಕೆ ಪಾರಿಶ್ರಮಿಕವನ್ನು ಕೊಡಲಾಗುವುದಿಲ್ಲ.

ಮೂವತ್ತು ತಲೆಮಾರುಗಳಿಂದ ಈ ವಿರಾಗಿಗಳು ತಮ್ಮ ನಾಡನ್ನು ಸ್ತ್ರೀಯರಿಲ್ಲದೆ ನಡೆಸಿರುವುದು ಸಾಮಾನ್ಯ ಆಶ್ಚರ್ಯವಲ್ಲ. ಜೀವನಕ್ಕೆ ಬೇಸತ್ತವರು ಇಲ್ಲಿ ಹೋಗುತ್ತಾರೆ. ಬಿಜೆಂಟೈನ್ ಸಂಸ್ಕೃತಿಯನ್ನು ಅಭ್ಯಾಸಮಾಡುವವರು ಇಲ್ಲಿ ಹೋಗುತ್ತಾರೆ. ಇಂಥವರಿಂದಲೇ ಈ ನಾಡಿನ ಅಸ್ತಿತ್ವ ತಲೆಮಾರುಗಳಿಂದ ಉಳಿದು ಬಂದಿದೆ. ಇಲ್ಲಿಯ ಬಹುತರ ಮಠಗಳಲ್ಲಿ ಗ್ರೀಕ್ ಸಾಧುಗಳೇ ಇರುತ್ತಾರೆ. ಆದ್ದರಿಂದ ಇದನ್ನು ಉಳಿಸಿ

ದವರು ಮುಖ್ಯವಾಗಿ ಗ್ರೀಕರು ಎಂದರೆ ತಪ್ಪಾಗದು.

ನಿಜವಿರಲಿ ಸುಳ್ಳಿರಲಿ, ಅಂತೂ ಇಲ್ಲಿಯ ತಥಾಕಥಿತ "ಋಷಿ"ಗಳಲ್ಲಿ ಯಾರೂ ಮೂವತ್ತು ತಲೆಮಾರುಗಳಿಂದ ಸ್ನಾನವನ್ನೇ ಮಾಡಿಲ್ಲವಂತೆ! ನೀರಿನಿಂದ ಪಾವಿತ್ರ್ಯ ತೊಳೆದು ಹೋದೀತೆಂಬ ಹೆದರಿಕೆ ಇರಬಹುದು.

ಪ್ರವಾಸಕ್ಕೆಂದು ಹೋದವರು ಇಲ್ಲಿಯ ಬರಡು ಬಾಳುವೆಗೆ ಬೇಸತ್ತು ಈ ಜೀವನ್ಮೃತರ ನಾಡಿನಿಂದ ಯಾವಾಗೊಮ್ಮೆ ಹೊರಗೆ ಬಂದೇವೊ ಎನ್ನುತ್ತಾರೆ. ಸ್ತ್ರೀಯರ ಕಿರುನಗೆಯಾಗಲಿ, ಮಕ್ಕಳ ಕಿರಿಚಾಟವಾಗಲಿ ಇಲ್ಲಿಯ ಗಾಳಿಯಲ್ಲಿ ಸಾವಿರಾರು ವರ್ಷಗಳಿಂದ ಸೂಸಿ, ತೇಲಿ ಕರಗಿಲ್ಲ. ಇಲ್ಲಿಯ ಮಣ್ಣಿನಲ್ಲಿ ಸ್ತ್ರೀಯರ ಚರಣಗಳು ಮೂಡಿ ಜೀವನದ ವೀಣೆ ಝೇಂಕೃತವಾಗಿಲ್ಲ. ಮಕ್ಕಳು ಇಲ್ಲಿ ಮಣ್ಣಿನ ಮನೆಗಳನ್ನು ಕಟ್ಟಿ ಜೀವನದ ಕನಸುಗಳಿಗೆ ಆಕಾರ ಕೊಟ್ಟಿಲ್ಲ.

ಆದ್ದರಿಂದ ಇಲ್ಲಿ ಪ್ರವಾಸಮಾಡಿ ಬಂದ ಯುರೋಪೀಯರೊಬ್ಬರು ಬಂದ ಮೇಲೆ "ನಮ್ಮ ಲೋಕ ಎಷ್ಟೇ ಪಾಪದಿಂದ ತುಂಬಿರಲಿ. ಆದರೆ ಜೀವನ ರಸದಿಂದ ಪೋಷಿತವಾಗಿರುವುದು ಸುಳ್ಳಲ್ಲ. ಆದ್ದರಿಂದ ನಿಸರ್ಗ ಸಂಗೀತಕ್ಕೆ ಎದೆ ಕರಗದ ಕಲ್ಲೆದೆಯ 'ಗಡ್ಡದುಪಾಧ್ಯ'ರ ಆ ನಾಡಿನಿಂದ ಬಂದ ಕೂಡಲೆ ನಾನು ಮೊದಲು ಹೆಂಗಸರತ್ತ ನನ್ನ ಕಣ್ಣು ಹೊರಳಿಸಿದೆ. ಕೋಳಿ ತನ್ನ ಮರಿಗಳಿಗೆ ಕಾಳು ತಿನಿಸುವುದನ್ನು ಮನದುಂಬಿ ನೋಡುತ್ತಾ ನಿಂತೆ" ಎಂದು ಹೇಳಿದ್ದಾರೆ. *



## ನಿರುಪಯುಕ್ತ ಮಾಹಿತಿ

* ಭಾರತೀಯ ಆನೆಯುದಂತ ಅತಿ ಹೆಚ್ಚೆಂದರೆ ೧೪ ಅಡಿ ಉದ್ದವಾಗಿದ್ದು, ಅದರ ಭಾರ ೨೦೦ ಪೌಂಡುಗಳಾಗಿವೆ.

* ವಿಶ್ವದಲ್ಲಿ ಹೆಚ್ಚು-ಕಡಿಮೆ ೪,೯೦೦ ಭಾಷೆಗಳಿದ್ದು, ಕೇವಲ ಯುರೋಪಿನಲ್ಲೇ ೬,೦೦ ಭಾಷೆಗಳಿವೆ.

—ಚಕ್ರಧಾರಿ

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.**

೧. ಪ್ರತ್ಯುತ್ಪನ್ನ

(ಅ) ನಾಶಗೊಂಡ (ಆ) ಸಿದವಾದ (ಇ) ಶರಣಾಗತ (ಈ) ಲಾಭ

೨. ವ್ಯಾಸಂಗ

(ಅ) ವಿರೋಧ (ಆ) ಜೋಡಣೆ (ಇ) ಬಿಡುಗಡೆ (ಈ) ಅಭ್ಯಾಸ

೩. ವಿಶೀರ್ಣ

(ಅ) ತಣ್ಣನ್ನ (ಆ) ಬಿಸಿಯಾದ (ಇ) ಒಣಗಿದ (ಈ) ಬತ್ತಳಿಕೆ

೪. ಧಾವನ

(ಅ) ತೊಳೆಯುವಿಕೆ (ಆ) ಬೆಳ್ಳಗೆ (ಇ) ಹೊಲೆ (ಈ) ಮನೆ

೫. ದೇಶಾಟನ

(ಅ) ದೇಶಸಂಚಾರ (ಆ) ತಿರುಪೆಯೆತ್ತುವುದು (ಇ) ಹಳ್ಳಿಯ ಆಟ (ಈ) ಶಪಿಸುವುದು

೬. ತೆತ್ತಿಗ

(ಅ) ಸಾಲ ಕೊಟ್ಟವ (ಆ) ಹಣ ತೆಗೆದುಕೊಳ್ಳುವ ಅಧಿಕಾರಿ (ಇ) ತತ್ತಿ ಮಾರುವವ (ಈ) ಅಡಿಯಾಳು

೭. ಚೂಟಿ

(ಅ) ರಜೆ (ಆ) ಹೊಗೆಬತ್ತಿ (ಇ) ಚುರುಕು (ಈ) ಸೈನ್ಯದ ಮುಂಭಾಗ

೮. ಕೋಟಲೆ

(ಅ) ಓಡಾಟ (ಆ) ತೊಂದರೆ (ಇ) ಚಳಿ (ಈ) ಡೊಂಕುತನ

೯. ಉಪರತಿ

(ಅ) ನೆರವು (ಆ) ಸಾವು (ಇ) ಬೆಟ್ಟ (ಈ) ಗ್ರಹಣ

೧೦. ಅನು

(ಅ) ಹತ್ತಿರ (ಆ) ತಿಳು (ಇ) ಯೋಗ್ಯ (ಈ) ಯಾವಾಗಲೂ

೧೧. ಆಗಾರ

(ಅ) ಮನೆ (ಆ) ರಾಶಿ (ಇ) ರೂಪ (ಈ) ಒಣ ನೆಲ

೧೨. ಹಂಗಾಮಿ

(ಅ) ಬದಲು (ಆ) ಮೂಗುದಾರ (ಇ) ಹಿಂದೆ ಹೋಗುವವ (ಈ) ತಾತ್ಕಾಲಿಕ



# ' ಶಬ್ದಭಾಂಡಾರ 'ದ ಸರಿಯಾದ ಅರ್ಥಗಳು

೧. **ಪ್ರತ್ಯುತ್ಪನ್ನ** (ಅ) ಸಿದ್ಧವಾದ, ಯಾವಾಗಲೂ ಅಣಿಯಾದ, ತಟ್ಟನೆ ಸಿದ್ಧವಾಗುವ. ಉದಾ—ಹೆಂಗಸರ ಬುದ್ಧಿ ಪ್ರತ್ಯುತ್ಪನ್ನವಾದುದು ಎಂದರೆ ಯಾವ ಮಾತಿಗೂ ಅವರಲ್ಲಿ ತಟ್ಟನೆ ಉಪಾಯ ಇಲ್ಲವೆ ಉತ್ತರ ಸಿದ್ಧವಾಗಿರುತ್ತದೆ. [ಸಂ. ಪ್ರತಿ=ಎದುರಾಗಿ, ಉತ್ಪನ್ನ = ಹುಟ್ಟಿದ]

೨. **ವ್ಯಾಸಂಗ** (ಈ) ಅಭ್ಯಾಸ, ಒಂದೇ ಮನಸಿನಿಂದ ಕಲಿಯುವಿಕೆ; ಯಾವುದಾದರೂ ಅತಿಯಾದ ಮಮತೆ, ಮೋಹ ಅಥವಾ ಭಕ್ತಿ. [ಸಂ. ವಿ + ಆ = ವಿಶೇಷವಾದ, ಸಂಗ = ತಗಲುವಿಕೆ]

೩. **ವಿಶೀರ್ಣ** (ಇ) ಒಣಗಿದ, ಕೊಳೆತ, ಮುದುಡಿದ, ಮುಗ್ಗಿದ, ಹರಿದ, ಚೂರಾದ, ಸೊರಗಿದ. ಉದಾ— ಅವನ ಚರ್ಮ ಶೀರ್ಣವಾಗಿತ್ತು ಎಂದರೆ ಒಣಗಿ ಮುದುರಿತ್ತು. [ಸಂ. ಶೃ=ಒಡೆ, ಒಣಗು ಎಂಬುದರಿಂದ]

೪. **ಧಾವನ** (ಅ) ತೊಳೆಯುವಿಕೆ, ತಿಕ್ಕುವಿಕೆ, ಸ್ವಚ್ಛ ಮಾಡುವುದು; ಓಡುವಿಕೆ, ಹರಿಯುವುದು, ಆಕ್ರಮಿಸುವಿಕೆ. [ಸಂ. ಧಾವ್ = ತೊಳೆ, ಓಡು ಎಂಬುದರಿಂದ]

೫. **ದೇಶಾಟನ** (ಅ) ದೇಶಸಂಚಾರ, ದೇಶದೇಶಗಳಲ್ಲಿ ತಿರುಗಾಡುವುದು. [ಸಂ. ದೇಶ + ಅಟನ = ಅಲೆಯುವಿಕೆ ]

೬. **ತೆತ್ತಿಗ** (ಈ) ಅಡಿಯಾಳು, ಸೇವಕ; ಜೀತದಾಳು; ಯಾವುದಕ್ಕಾದರೂ ಬಿಗಿಯಲ್ಪಡುವ. [ ಕನ್ನಡ. ತೆತ್ತು = ಬಿಗಿ ಎಂಬುದರಿಂದ ]

೭. **ಚೂಟಿ** (ಇ) ಚುರುಕು, ಗುರಿ, ಉದ್ದೇಶ; ಉಪಾಯ, ಸಾಧನ. ಉದಾ— ಹುಡುಗ ತುಂಬ ಚೂಟಿಯಾಗಿದ್ದಾನೆ ಎಂದರೆ ಚುರುಕಾಗಿದ್ದಾನೆ. [ ಕನ್ನಡ ]

೮. **ಕೋಟಲೆ** (ಅ) ತೊಂದರೆ, ಉಪದ್ರವ, ಕಷ್ಟ, ಕ್ಲೇಶ; ನೋವು. ಉದಾ—ಅಟ್ಟುಣ್ಣುವುದು ಆರು ಕೋಟಲೆ, ತಿರಿದುಣ್ಣುವುದು ಪರಮಸುಖ. [ಕನ್ನಡ]

೯. **ಉಪರತಿ** (ಅ) ಸಾವು; ನಿಂತುಹೋಗುವುದು, ಮುಗಿಯುವುದು; ಭೋಗಸುಖವನ್ನು ಬಿಡುವುದು. ಉದಾ—ಅವನು ಸಂಸಾರದಿಂದ ಉಪರತಿ ಹೊಂದಿದ್ದಾನೆ ಎಂದರೆ ತ್ಯಜಿಸಿದ್ದಾನೆ. [ ಸಂ. ]

೧೦. **ಅನು** (ಇ) ಯೋಗ್ಯ, ಸರಿ, ಹಸನು, ಯುಕ್ತ; ಚೆಂದ; ಸಿದ್ಧವಾಗಿರುವಿಕೆ; ಸಂದರ್ಭ, ಅವಕಾಶ; ಪರಿಸ್ಥಿತಿ. ಉದಾ—ಸಿಂಹಾಸನದಲ್ಲಿ ಅನುವಾಗಿ ( ಚೆನ್ನಾಗಿ ) ಕುಳಿತ; ಹೊರಡಲನುವಾದ ( ಸಿದ್ಧನಾದ ); ಇಲ್ಲಿ ಎಳ್ಳು ಚೆಲ್ಲಲು ಅನುವಿಲ್ಲ ( ಅವಕಾಶವಿಲ್ಲ ). [ ಕನ್ನಡ ]

೧೧. **ಆಗಾರ** (ಅ) ಮನೆ, ನೆಲೆ, ವಸತಿ; ಸ್ಥಳ. ಉದಾ—ಅವನ ಜೀವನ ದುಃಖದ ಆಗಾರವಾಗಿತ್ತು. [ ಸಂ. ಆ + ಗಾರ = ವಸತಿ ]

೧೨. **ಹಂಗಾಮಿ** (ಈ) ತಾತ್ಕಾಲಿಕ. ಕೆಲವೇ ಸಮಯಕ್ಕಾಗಿ ಇರುವ, ಶಾಶ್ವತವಲ್ಲದ. ಉದಾ— ಇವನು ಹಂಗಾಮಿ ಕಾರಕೂನ ಎಂದರೆ ಖಾಯಂ ಅಲ್ಲ. [ಮರಾಠಿ ಹಂಗಾಮ್ = ಋತು ]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ " | .... | ಉತ್ತಮ |
| ೧೧—೧೨ " | .... | ಅತ್ಯುತ್ತಮ |

---

ನಿನ್ನೆ—ನಾಳೆಗಳ ವಿಚಾರದಿಂದ ಬಳಲುವುದೆಂದರೆ
ಕಷ್ಟಕ್ಕೆ ನಾಂದಿ ಹಾಕಿದಂತೆ!

# ಚಿಂತಾರೋಗಕ್ಕೊಂದು ರಾಮಬಾಣ ಔಷಧ

ಶಶಿಬಂಧುಭ

ಮೊನ್ನೆ "ಇಂಡಿಯನ್ ಎಕ್ಸ್‌ಪ್ರೆಸ್" ಓದುತ್ತಿದ್ದಾಗ್ಗ ಅದರಲ್ಲಿ ಪ್ರಕಟವಾಗುವ ದೈನಿಕ ಚಿತ್ರಗಳಲ್ಲೊಂದರ ಕೆಳಗೆ "ಚಿಂತೆಯೆಂಬುದು ತೊಂದರೆಯನ್ನು ಸಾಲ ಪಡೆದವರು ತೆರಬೇಕಾದ ಬಡ್ಡಿ" ಎಂದು ಬರೆದುದನ್ನು ಕಂಡೆ. ನಿಜವೇ, ನನ್ನ ಅನುಭವವೂ ಅದನ್ನೆ ಹೇಳುತ್ತದೆ.

ಚಿಂತೆಯೆಂಬ ಗುಪ್ತ ರೋಗದಿಂದ ಬಳಲುವವರು ಲೋಕದಲ್ಲಿ ಸಾವಿರಾರು ಮಂದಿ ಇದ್ದಾರೆ. ಅನೇಕ ಉದರ ರೋಗಗಳಿಗೂ ಪಾರ್ಶ್ವವಾತದಂಥ ಇತರ ರೋಗಗಳಿಗೂ ಚಿಂತೆ ಮೂಲವಾಗಬಲ್ಲದು ಎಂದು ವೈದ್ಯಕೀಯ ಸಂಶೋಧಕರು ಹೇಳುತ್ತಾರೆ. ಮನಶ್ಶಾಸ್ತ್ರಿಗಳು ಚಿಂತೆಯಿಂದ ಮನುಷ್ಯನ ಶಕ್ತಿಗಳು ಅನುತ್ಪಾದಕ ಮತ್ತು ನಿರರ್ಥಕ ಕಾರ್ಯಗಳಲ್ಲಿ ದುರ್ವಿನಿಯೋಗವಾಗಿ ಹೋಗುತ್ತವೆಂದು ಅಭಿಪ್ರಾಯ ಪಡುತ್ತಾರೆ.

ಈ ರೋಗದಿಂದ ವಿಮೋಚನೆ ಹೊಂದಲೆಂದು ಜನರು ಸಿನೆಮಾದಲ್ಲಿ ಮದ್ಯಪಾನದ ಮೊರೆ ಹೋಗುವುದನ್ನು ಮತ್ತು ನಿಜ ಜೀವನದಲ್ಲಿ ರಾಮಬಾಣ ಔಷಧಿಗಳ ಆಶ್ರಯ ಹೊಂದುವುದನ್ನು ನಾನು ನೋಡಿದ್ದೇನೆ; ಇವೆರಡೂ ವ್ಯರ್ಥವಾಗುವುದನ್ನೂ ಅವರ ಚಿಂತಾರೋಗ ಇದ್ದಂತೆಯೇ ಇರುವುದನ್ನೂ ನೋಡಿದ್ದೇನೆ.

ಎಲ್ಲ ಔಷಧಿಗಳನ್ನೂ ನುಂಗಿ ನೀರು ಕುಡಿಯುವ ಈ ರೋಗವನ್ನು ನಾವು ನಮ್ಮ ಸಾಮಾನ ವೈಯಕ್ತಿಕ ಪ್ರಯತ್ನದಿಂದ ನಿವಾರಿಸಿಕೊಳ್ಳಬಹುದೆಂದು ನಾನು ಹೇಳಿದರೆ ನೀವು ಆಶ್ಚರ್ಯಗೊಳ್ಳಬಹುದು. ಚಿಂತೆಯ ಬೇರು ವಾಸ್ತವವಾಗಿ ನಮ್ಮ ಮನಸ್ಸಿನಲ್ಲೆ ಇರುತ್ತದೆ. ಅದು ನಮ್ಮ ಕಲ್ಪನೆಗಳು ದಾರಿಬಿಟ್ಟು ಹೋಗುವುದರ ಪರಿಣಾಮವಾಗಿದೆ. ಆದ್ದರಿಂದ ನಮ್ಮ ವಿಚಾರ ಧಾರೆಯ ಮೇಲೆ ಹಿಡಿತವಿಡಬಲ್ಲೆವಾದರೆ ಅನೇಕ ಅಪಘಾತಗಳಿಗೆ ಕಾರಣವಾಗುವ ಚಿಂತೆಯ ಮೋಟರನ್ನು ಅದರ ಗ್ಯಾರೇಜಿನಲ್ಲೆ ಮುಚ್ಚಿಡಲು ಸಾಧ್ಯವಿದೆ.

ಅಂದರೆ ಚಿಂತೆಯು ಕೇವಲ ದುರ್ಬಲ ಮನಸಿನ ಅಯಶಸ್ವಿ ಜನರನ್ನು ಪೀಡಿಸುತ್ತದೆಂದು ತಿಳಿಯಬಾರದು. ಸತ್ಯ ತದ್ವಿಪರೀತವಾಗಿದೆ. ಚಿಂತೆಯು ಯಾವನಾದರೂ ವ್ಯಕ್ತಿಯಲ್ಲಿ ಹುದುಗಿರುವ ಅಪರಿಮಿತ ಶಕ್ತಿಯ ಭಂಡಾರವೂ ಆಗಿರಬಹುದು. ಅವನು ಏನನ್ನಾದರೂ "ಮಾಡುವ" ಹಂಬಲದಲ್ಲಿರಬಹುದು. ಇತಿಹಾಸವನ್ನು ನೋಡಿ

"ಜ್ಞಾನೋದಯ" ದಿಂದ

ದರೆ ಜೀವನದ ವಿವಿಧ ರಂಗಗಳಲ್ಲಿ ಅತ್ಯುಚ್ಚ ಸಾಫಲ್ಯ ಪಡೆದವರಲ್ಲಿ ಚಿಂತಾ ಪ್ರವೃತ್ತಿ ಜನ್ಮಕ್ಕೆ ಅಂಟಿಕೊಂಡಿರುವುದನ್ನು ಕಾಣುತ್ತೇವೆ. ಆದರೆ ಹೆಜ್ಜೆಹೆಜ್ಜೆಗೆ ಈ ಪ್ರವೃತ್ತಿಯನ್ನು ಹತ್ತಿಕ್ಕಿ ಜಯಿಸುತ್ತ ಮುಂದೊತ್ತುವುದು ಅವರಿಗೆ ಅಗತ್ಯವಾಯಿತೆಂಬುದೂ ಅಷ್ಟೇ ಸತ್ಯ.

ಚಾರ್ಲಸ್ ಸ್ಪರ್ಜನ್ ಎಂಬವರು ಕಳೆದ ಶತಮಾನದ ಶ್ರೇಷ್ಠ ಕ್ರೈಸ್ತ ಧರ್ಮೋಪದೇಶಕರು. ಪ್ರಥಮ ಸಲ ಅವರು ಸಾರ್ವಜನಿಕ ಭಾಷಣ ಕೊಡಲು ಒಪ್ಪಿಕೊಂಡಾಗ ಅವರಿಗೆ ಅನೇಕ ವಾರಗಳ ಮೊದಲೇ ಚಿಂತೆ ಹಿಡಿದು ಬಿಟ್ಟಿತು. ಹೇಗೆ ಭಾಷಣ ಕೊಡಬೇಕು? ಯಾವ ಭಂಗಿಯಲ್ಲಿ ನಿಲ್ಲಲಿ? ಎಂಥ ಶಬ್ದಗಳನ್ನುಪಯೋಗಿಸಲಿ? ಇದನ್ನೇ ಚಿಂತಿಸುತ್ತ ಚಿಂತಿಸುತ್ತ ಅವರಿಗೆ ಕೊನೆಗೆ ಭಾಷಣಕೊಡಲು ನಿಲ್ಲುವಾಗ ಕಾಲೇ ಮೇಲೇಳದಿದ್ದರೇನು ಗತಿಯೆಂದು ಭಯವಾಯಿತು.

ಪರಿಣಾಮವಾಗಿ ಅವರು ಸಭಾಸ್ಥಳ ಸೇರಿದಾಗ ಚಿಂತೆಯಿಂದ ತೀರ ಹಣ್ಣಾಗಿ ಹೋಗಿದ್ದುದರಿಂದ ಅವರ ಅಂದಿನ ಭಾಷಣ ಏನೇನೂ ಪ್ರಭಾವ ಬೀರಲಿಲ್ಲ.

ಆದರೆ ಸ್ಪರ್ಜನ್ನರು ಧೈರ್ಯಗುಂದಲಿಲ್ಲ. ಅವರು ತಮ್ಮ ಚಿಂತೆಯನ್ನು ವಿಶ್ಲೇಷಿಸಿದರು. ತಾವೇಕಿಷ್ಟು ಕಂಗಾಲಾಗಬೇಕು? ಭಾಷಣ ಸರಿಯಾಗದೆ ಹೋಯಿತೆನ್ನೋಣ. ಅದರಿಂದ ಆದರೆ ಏನು ಘಾತವಾದೀತು? ಆಕಾಶ ಜರಿದು ಬಿದ್ದೀತೆ? ತಾನು ಸುಳ್ಳೇ ಕಡ್ಡಿಯನ್ನು ಗುಡ್ಡ ಮಾಡುತ್ತಿದ್ದೇನೆ. ತಮ್ಮ ಚಿಂತೆಯನ್ನು ಅದರ ನಿಜರೂಪದಲ್ಲಿ ಕಂಡೊಡನೆ ಅವರ ಭಯ ಮಾಯವಾಗಿ ಅವರ ಭಾಷಣಗಳು ನಿರೀಕ್ಷೆ ಮೀರಿ ಪರಿಣಾಮಕರವಾಗತೊಡಗಿದವು. ವ್ಯರ್ಥ ಭಯದಿಂದ ಅವರು ತಮ್ಮ ಮನಸನ್ನು ಮುಕ್ತಗೊಳಿಸಿದ್ದರಿಂದ ಅವರು ತಮ್ಮ ಕಾಲದ ಶ್ರೇಷ್ಠತಮ ಉಪದೇಶಕರೆನಿಸಿದರು.

ಚಿಂತೆಯು ನಮಗೆ ಗುಪ್ತ ಶಕ್ತಿಯ ನಿಧಿಯೂ ಆಗಿದೆಯೆಂಬುದನ್ನು ನಾವು ಅರಿತಿರಬೇಕು. ಅದು ನಮ್ಮ ಸ್ನಾಯುಗಳ ಜಾಗರೂಕತೆಯನ್ನು ತೀವ್ರಗೊಳಿಸುತ್ತದೆ. ಆದರೆ ಅವಾಸ್ತವಿಕ ಮತ್ತು ನಿರಾಧಾರ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ಆ ಶಕ್ತಿ ಅಪವ್ಯಯವಾಗಿ ಹೋಗದಂತೆ ನಾವು ನೋಡಿಕೊಳ್ಳಬೇಕು. ಚಿಂತೆಯು ಜೀವನದ ಒಂದು ಅಂಗ ಎಂದೊಪ್ಪಿಕೊಂಡು ಬಿಟ್ಟರೆ ಅದನ್ನು ಕಲ್ಯಾಣಕರ ಮಾರ್ಗದಲ್ಲಿ ಉಪಯೋಗಿಸಲು ಸಾಧ್ಯವಿದೆ.

ಇದು ಅಷ್ಟು ಕಷ್ಟವೂ ಅಲ್ಲ. ನಿಮಗೆ ಚಿಂತೆ ತಲೆದೋರಿದೊಡನೆ ಆ ಚಿಂತೆಯ ಮೂಲಗಳನ್ನು ನೀವು ಕಾಗದದ ಮೇಲೆ ಸ್ಪಷ್ಟವಾಗಿ ಬರೆಯಿರಿ. ಆಗ ಅವುಗಳಲ್ಲಿ ಹಲವು ಸಂದಿಗ್ಧವಾಗಿವೆಯೆಂದೂ ಕೆಲವು ನಿರಾಧಾರವಾಗಿವೆಯೆಂದೂ ಕೆಲವಂತೂ ಅರ್ಥರಹಿತವಾಗಿವೆಯೆಂದೂ ನಿಮಗೇ ಅನಿಸುವುದು.

ಅಧಿಕಾಂಶ ಜನರ ಚಿಂತೆಗಳ ಅಧ್ಯಯನ ಮಾಡಿದ್ದರಲ್ಲಿ ಈ ಕೆಳಗಿನ ಪರಿಣಾಮಗಳು ಹೊರಟಿವೆ: ಆಗಿ ಹೋದ ಮತ್ತು ಇನ್ನು ಸರಿಪಡಿಸಲಾರದ ಮಾತುಗಳಿಗಾಗಿ ಸೇಕಡಾ ೩೦; ಎಂದೂ ಸಂಭವಿಸಲಾರದ ಘಟನೆಗಳಿಗಾಗಿ ೪೦; ಆರೋಗ್ಯ ಸಂಬಂಧವಾದ ಅಕಾರಣ ಚಿಂತೆಗಳು ೧೨; ಸುಲಭವಾಗಿ ಸರಿಪಡಿಸಲು ಸಾಧ್ಯವುಳ್ಳ ಚಿಲ್ಲರೆ ಕಾರಣಗಳು ೧೦; ಹೀಗೆ ಯೋಗ್ಯವಾದ ಚಿಂತೆಗಳು ಸೇಕಡಾ ಎಂಟು ಮಾತ್ರ ಇರುತ್ತವೆಂದು ಸಿದ್ಧವಾಗಿದೆ. ನಾವೂ ನಮ್ಮ ಚಿಂತೆಗಳ ಪಟ್ಟಿ ತಯಾರಿಸಿದರೆ ಅವುಗಳಲ್ಲಿ ಹೆಚ್ಚಿನವುಗಳ ಮೇಲೆ ಕೆಂಪು ಗೆರೆ ಎಳೆಯಲು ನಮಗೇ ಮನಸಾಗುವುದು ಖಂಡಿತ.

ನಾನೊಮ್ಮೆ ನನ್ನ ಮಿತ್ರರೊಬ್ಬರನ್ನು ಸ್ವಾಗತಿಸಲು ಮುಂಬಯಿಯ ಸಾಂತಾಕ್ರುಜ್ ವಿಮಾನ ನಿಲ್ದಾಣಕ್ಕೆ ಹೋಗಿದ್ದೆ. ಅಲ್ಲಿನ ವೇಟಿಂಗ್ ರೂಮಿನಲ್ಲಿ ತನ್ನ ಪ್ರೇಯಸಿಯನ್ನು ಸ್ವಾಗತಿಸಲು

ಬಂದಿದ್ದ ಒಬ್ಬ ಹಂಗೇರಿಯನ್ ತರುಣನೂ ಇದ್ದ. ಕೆಲಸಮಯಾನಂತರ ಲೌಡ್ ಸ್ಪೀಕರಿನಲ್ಲಿ ಆ ವಿಮಾನ ಬರುವುದು ಯಾವುದೋ ಕಾರಣದಿಂದ ಸ್ವಲ್ಪ ತಡವಾಗುವುದೆಂದು ಸಾರಲಾಯಿತು.

ನಾವು ಕಾಯುತ್ತಿದ್ದಂತೆ ಆ ತರುಣನ ಮುಖದಲ್ಲಿ ಚಿಂತೆಯ ಅಲೆಗಳು ಏಳುತ್ತಿರುವುದನ್ನು ನಾನು ಸ್ಪಷ್ಟವಾಗಿ ಕಂಡೆ. ಅವನು ಅಸ್ವಸ್ಥನಾಗಿದ್ದ. ಅವನ ಚಿತ್ತಪಟದಲ್ಲಿ ಯಾವುದೋ ಭಯಂಕರ ದುರ್ಘಟನೆಯ ಚಿತ್ರಗಳು ಮೂಡಿ ಮರೆಯಾಗುತ್ತಿದ್ದಿರಬೇಕು. ಚಿಂತೆ ಮಾಡಬೇಡ ಎಂದು ಅವನಿಗೆ ಹೇಳುವುದರಿಂದ ಪ್ರಯೋಜನವಿರಲಿಲ್ಲ. ಆದ್ದರಿಂದ ಅವನ ಚಿತ್ತದಲ್ಲಿ ಉದ್ಭವಿಸುವ ಚಿತ್ರಗಳ ಬದಲು ಬೇರೆ ಚಿತ್ರಗಳನ್ನು ಮೂಡುವಂತೆ ಮಾಡುವುದೇ ಉಪಾಯವೆಂದು ಕೊಂಡೆ. ನಾನು ಮೆಲ್ಲಗೆ ಸುರು ಮಾಡಿದೆ: ನೀವು ಯಾರನ್ನು ಎದುರು ನೋಡುತ್ತಿದ್ದೀರಿ? ಆ ಯುವತಿ ನೋಡಲು ಹೇಗಿದ್ದಾಳೆ? ಅವಳು ಎಂಥ ಬಟ್ಟೆತೊಡುತ್ತಾಳೆ? (ಇಂಥ ಪ್ರಶ್ನೆಗಳು ಭಾರತೀಯರಿಗೆ ಅಧಿಕ ಪ್ರಸಂಗವೆನಿಸಿದರೂ ಯುರೋಪಿಯನ್ನರಿಗೆ ಅನಿಸುವುದಿಲ್ಲ.)

ಇದರ ಪರಿಣಾಮ ಬೇಗನೆ ಕಾಣಿಸಿಕೊಂಡಿತು. ಆತ ತನ್ನ ಪ್ರೇಯಸಿಯ ಬಗ್ಗೆ ಮಾತಾಡ ತೊಡಗಿದ. ಅವಳನ್ನು ತಾನು ಮೊದಲು ಕಂಡ ಸಂದರ್ಭ, ಅವಳಲ್ಲಿದ್ದ ವೈಶಿಷ್ಟ್ಯಗಳು, ಅವಳಲ್ಲಿದ್ದ ಪ್ರೇಮಾಸ್ಪದ ಗುಣಗಳು ಇವೆಲ್ಲವುಗಳನ್ನು ಬಣ್ಣಿಸಿದ. ಅವನ ಮನಸ್ಸು ಉತ್ಸಾಹದಾಯಕ ಚಿತ್ರಗಳಿಂದ ತುಂಬಿ ಹಿಂದಿನ ಭಯಾವಹ ಚಿತ್ರಗಳು ಮಾಯವಾದವು. ಎಷ್ಟು ಮಟ್ಟಿಗೆಂದರೆ ವಿಮಾನ ಬಂದು ಇಳಿಯುವ ವರೆಗೂ ಅವನಿಗೆ ತಾನು ನಿರೀಕ್ಷಿಸುತ್ತಿದ್ದ ಪ್ರಿಯಕರಿಯನ್ನು ತರುವ ವಿಮಾನ ಏಕೋ ತಡವಾಗಿದೆಯೆಂಬ ವಿಚಾರವೇ ಮರೆತುಹೋಯಿತು.

ಮೇಲೆ ಹೇಳಿದ ಚಿಂತೆಗಳಿಗಿಂತ ಹಣಕಾಸಿನ ಚಿಂತೆಗಳು ಹೆಚ್ಚು ವಾಸ್ತವವಾಗಿರುತ್ತವೆ. ನಮ್ಮ ಚಿಂತೆಗಳಲ್ಲಿ ಇವುಗಳ ಅಂಶ ಸಾಕಷ್ಟು ದೊಡ್ಡದು. ಇದನ್ನು ನಿವಾರಿಸುವುದಕ್ಕೆ ಭಾರತೀಯ ತತ್ವವಿಚಾರವನ್ನು ಅನುಸರಿಸುವುದೇ ಉಪಾಯ. ಅದೆಂದರೆ ನಿಮ್ಮ ಅಗತ್ಯಗಳನ್ನು ಕಡಿಮೆಮಾಡಿಕೊಳ್ಳಿರಿ! ಅಮೇರಿಕನ್ ತತ್ವಜ್ಞಾನಿ ಥೋರೋ ಇದನ್ನು ಅನುಭವದಿಂದ ಮನಗಂಡಿದ್ದನು. ಜೀವನಕ್ಕೆ ಅನಾವಶ್ಯಕವಾದ ಬೇಡಿಕೆಗಳನ್ನು ಪೂರೈಸಿಕೊಳ್ಳುವ ಹವ್ಯಾಸದಲ್ಲೇ ನಮ್ಮ ಅಧಿಕತರ ಹಣದ ಚಿಂತೆಗಳು ಹುಟ್ಟುತ್ತವೆ. ಬುದ್ಧನೂ ಇದನ್ನೇ ಹೇಳಿದ್ದ. ಸಾಕ್ರೆಟೀಸನ ಮತವೂ ಅದೇ.

ಚಿಂತಾರೋಗಕ್ಕೆ ಒಂದು ರಾಮಬಾಣ ಔಷಧವಿದೆ. ನಾವು ನಮ್ಮ ಜೀವನಕ್ಕೆ ನಮ್ಮನ್ನೇ ಕೇಂದ್ರವಾಗಿ ಬಗೆಯದೆ ನಮ್ಮ ವಿಚಾರಗಳನ್ನು ಇತರರ ಮೇಲೆ ಕೇಂದ್ರಿಸಿ ನಮ್ಮ ಕುಟುಂಬದ ಸಮಾಜದ ರಾಷ್ಟ್ರದ ಸುಖ ದುಃಖಗಳ ಮೇಲೆ ಲಕ್ಷ್ಯಕೊಡುವುದು. ಪರರ ಸುಖದುಃಖಗಳಲ್ಲಿ ವ್ಯಸ್ತನಾಗಿರುವುದು ಸ್ವಂತ ಚಿಂತೆಗಳನ್ನು ದೂರಗೊಳಿಸಲು ಉತ್ತಮ ಉಪಾಯ.

ವಾಸ್ತವಿಕ ತೊಂದರೆಗಳನ್ನು ಕೂಡ ಸರಿಯಾಗಿ ಎದುರಿಸಲು ಅನೇಕ ಮಾಧ್ಯಮಗಳನ್ನು ಪಯೋಗಿಸಬಹುದು. ಸಂಗೀತ ಪ್ರೇಮಿಗಳು ಸಂಗೀತದ ಲಹರಿಗಳಲ್ಲಿ ತಮ್ಮ ಸಕಲ ಚಿಂತೆಗಳನ್ನೂ ಮುಳುಗಿಸುತ್ತಾರೆ. ವಿನ್‌ಸ್ಟನ್ ಚರ್ಚಿಲ್ಲರು ಮಹಾಯುದ್ಧದ ಭಾರವನ್ನು ಹೊತ್ತಿದ್ದರೂ ದೃಶ್ಯಗಳ ಚಿತ್ರಣದಲ್ಲಿ ಕೆಲ ಕಾಲ ಮಗ್ನರಾಗಿ ಚಿಂತೆಗಳಿಂದ ಬಿಡುಗಡೆ ಹೊಂದುತ್ತಿದ್ದರು. ಮಹರ್ಷಿ ಟಾಲ್‌ಸ್ಟಾಯರು "ಸಂಜೆಯ ವೇಳೆ ಆಕಾಶದ ಬಣ್ಣಗಳನ್ನು ನೋಡಿದಾಗ ನನಗೆ ನನ್ನ ಕಷ್ಟಗಳ ವಿಚಾರ ಮಾಡಲಿಕ್ಕೇ ನಾಚಿಕೆಯಾಗುತ್ತದೆ. ಪ್ರಪಂಚದಲ್ಲಿ ಇಷ್ಟು ಸೌಂದರ್ಯ ಚೆಲ್ಲಾಡುತ್ತಿದೆ. ಅದನ್ನು ಕುರಿತೇಕೆ ಚಿಂತಿಸಬಾರದು?" ಎಂದಿದ್ದಾರೆ.

ಆದರೆ ಚಿಂತಾರೋಗಕ್ಕೆ ಕಾಯಕದಂಥ ಔಷಧ ಬೇರೊಂದಿಲ್ಲ. ಕಾಯಕದ ಕೈಲಾಸದ ಸಮೀಪ ಚಿಂತೆಗಳು ಸುಳಿಯುವುದೇ ಇಲ್ಲ. "ಕೆಲಸ ಯಾರನ್ನೂ ಕೊಲ್ಲುವುದಿಲ್ಲ, ಚಿಂತೆ ಕೊಲ್ಲಿಸುತ್ತದೆ. ಕೆಲಸವೇ ಆರೋಗ್ಯಸಾಧನ. ಚಿಂತೆಯೆಂಬುದು ನಮ್ಮ ಕಾರ್ಯತತ್ಪರತೆಯ ಖಡ್ಗದ ಬಾಯಿಗೆ ತಗಲಿದ ತುಕ್ಕು (ಜಂಗು)" ಎಂದು ಹೆನ್ರಿ ವಾರ್ಡ್ ಬೀಚರ್ ಹೇಳಿದ್ದಾನೆ.

ಜೀವನದಲ್ಲಿ ಉದ್ದುದ್ದ ಲೆಕ್ಕಾಚಾರ ಹಾಕುತ್ತ ಕೂಡ್ರದೆ "ಇಂದಿನ ಆಕಳನ್ನಷ್ಟೇ ಹಿಂಡು" ವವರಿಗೆ ಚಿಂತೆಯ ತಾಪವಿಲ್ಲ. ನಿನ್ನೆ-ನಾಳೆಗಳ ಚಿಂತೆ ಬಿಟ್ಟು ಇಂದಿನ ಕೆಲಸವನ್ನು ಸರಿಯಾಗಿ ಪೂರೈಸಿದರೆ ತೀರಿತು. ಚಿಂತಿಸುತ್ತ ಕೂಡ್ರುವುದರಿಂದ ಏನೂ ಫಲವಿಲ್ಲ. ನಿಷ್ಕ್ರಿಯರಾಗಿ ಕುಳಿತು, ಇಲ್ಲವೆ ನಿಷ್ಪ್ರಯೋಜಕ ಕಾರ್ಯಗಳಲ್ಲಿ ವೇಳೆ ಕಳೆದು ನಾವು ಮನಸ್ಸಿನ ಕೋಟೆ ಬಾಗಿಲನ್ನು ಚಿಂತಾ ಶತ್ರುವಿಗೆ ತೆರೆದಿಡುತ್ತೇವೆ.

ಧರ್ಮದ ದೃಷ್ಟಿಯಿಂದ ಚಿಂತೆಯನ್ನು ವಿಶ್ಲೇಷಿಸಿದರೆ ಚಿಂತೆಯು ನಾಸ್ತಿಕತೆಯ ಇನ್ನೊಂದು ರೂಪವೆಂದು ನಮಗೆ ಅನುಭವವಾದೀತು. ಚಿಂತೆಯಲ್ಲಿ ಮುಳುಗಿರುವವನು ಮಾನವ ಜೀವನದಲ್ಲಿ ಪರಮಾತ್ಮನ ಅವಶ್ಯಕತೆಯನ್ನೆ ನಿರಾಕರಿಸುತ್ತಾನೆ, "ನನ್ನ ಅವಸ್ಥೆ ಎಂದಿಗೂ ಸುಧಾರಿಸಲಾರದು. ಏಕೆಂದರೆ ನನಗೆ ನೆರವಾಗಲು ಪರಮಾತ್ಮನಿಲ್ಲ" ಎಂದು ಅವನು ಘೋಷಿಸುತ್ತಾನೆನ್ನಬಹುದು. ಪರಮಾತ್ಮನು ಮಾನವನನ್ನು ಸೃಷ್ಟಿಸಿದ ನಂತರ ಅವನನ್ನು ಮುತ್ತಲಿರುವ ನಾಳಿನ ಚಿಂತೆಗಳನ್ನು ಲಕ್ಷಿಸಿ "ನಾಳೆಯ ಚಿಂತೆ ಮಾಡಬೇಡ" ಎಂದೇ ಎಚ್ಚರಿಕೆ ಕೊಟ್ಟಿದ್ದಾನೆ. ಇದಕ್ಕಿಂತ ಉತ್ತಮವಾದ ಜೀವನ ದರ್ಶನ ಇರಲಾರದು. *



ಸುಖಸಮಾಧಾನದಿಂದ ಶಾಂತವಾಗಿರುವ ಅನೇಕ ಸ್ತ್ರೀ ಪುರುಷರನ್ನು ನಾನು ಕಂಡಿದ್ದೇನೆ. ಆದರೆ ಇವರ ಶಾಂತ, ಸಮಾಧಾನದ ವೃತ್ತಿಯು ಅಪಾಯಕರವಾದುದೆಂದು ನಾನು ತಿಳಿದಿದ್ದೇನೆ. ಅಸಮಾಧಾನ ಉಂಟಾಗುವಂಥ ಅನೇಕ ಸಂಗತಿಗಳು ಈ ಲೋಕದಲ್ಲಿ ಇವೆ ಎಂದು ನನ್ನ ಪ್ರಾಮಾಣಿಕ ನಂಬಿಕೆ. ಈ ಸಂಗತಿಗಳಿಂದ ನನಗೆ ಎಂದಿಗೂ ಸಮಾಧಾನ ಸಿಕ್ಕಿಲ್ಲ. ನನ್ನ ಬಗ್ಗೆಯೆ ನನಗೆ ಸಮಾಧಾನವೆನಿಸಿಲ್ಲ. ನನ್ನ ಸ್ವಭಾವದ ಏಳ್ಗೆಯ ಬಗ್ಗೆಯೂ ನನ್ನಲ್ಲಿ ಅತೃಪ್ತಿಯೆ ಇದೆ. ನನ್ನ ಸಾಹಿತ್ಯಕ ಶಕ್ತಿಯೂ ನನಗೆ ತೃಪ್ತಿಕರವೆನಿಸಿಲ್ಲ. ಸ್ಥೂಲರೂಪದಿಂದಲೂ ನನಗೆ ಸಮಾಧಾನವೆನಿಸಿಲ್ಲ. ಸಮಾಧಾನಿಗಳನ್ನು ಕಂಡು ನಾನು ಹೆದರುತ್ತೇನೆ. ಯಾಕೆಂದರೆ ಅಸಂತೋಷವೇ ಏಳ್ಗೆಯ ಮೂಲ. ಮತ್ತು ಈ ಸಂತೋಷವಿಲ್ಲದಿದ್ದರೆ ಮನಸ್ಸಿಗೂ ಶಾಂತಿ ಲಭಿಸಲಾರದು. —ಜಾನ್ ಪಿ. ಮಾರಕ್ವಂಡ್

'ಜೀವನವೆಂಬುದು ಹೂವಿನ ಹಾಸಿಗೆ' ಎಂದು ಹೇಳುವವರನ್ನು ಗುರುತಿಸುವುದು ಬಹು ಸುಲಭ. ಅವರು ಸದಾಕಾಲ ತಮ್ಮ ಹೂಗಳಲ್ಲೂ ಮುಳ್ಳುಗಳನ್ನು ಕಂಡು ಮರುಗುತ್ತಿರುತ್ತಾರೆ. — ಇವೋಜಿನ್ ಫೆ.

# ಜಿಝಿಯಾ ತೆರಿಗೆ

**ಮುಸಲ್ಮಾನ ಅರಸರು ಅನ್ಯಮತೀಯರ ಮೇಲೆ ಹೇರಿದ ಈ ತಲೆತೆರಿಗೆ ಅವರ ಸಾಮ್ರಾಜ್ಯದ ಅವನತಿಗೆ ಕಾರಣವಾಯಿತು**

ಮೂಲ : ಎಂ. ಮಾಧವರಾವ್
ಅನು : ಮಾಯಾ ಶೆಣೈ

ಪ್ರಾಚೀನ ಕಾಲದಲ್ಲಿ ಮುಸ್ಲಿಂ ಅರಸರು ಅನ್ಯಮತೀಯ ಪ್ರಜೆಗಳ ಮೇಲೆ ಹೊರಿಸುತ್ತಿದ್ದ ತಲೆತೆರಿಗೆಯು "ಜಿಝಿಯಾ" ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಈ ತೆರಿಗೆಯನ್ನು ಪ್ರಥಮವಾಗಿ ಬಳಕೆಯಲ್ಲಿ ತಂದವನು, ಖಲೀಫ್ ಉಮರ. ಉಮರನ ನಂತರ ಔರಂಗಜೇಬನ ವರೆಗಿನ ಅರಸರಲ್ಲಿ ಅನೇಕರು ಇದನ್ನು ಪ್ರಜೆಗಳ ಮೇಲೆ ಹೊರಿಸುತ್ತಿದ್ದರು; ಅಕಬರನಂಥ ದೂರದರ್ಶಿಯಾದ ಹಲಕೆಲವರು ಇದನ್ನು ತೆಗೆದು ಹಾಕಿಯೂ ಇದ್ದರು.

ಖಲೀಫರ ಇತಿಹಾಸಕಾರನಾದ ಮುಹಮ್ಮದ್ ಅಲಿಯು "ಜಿಝಿಯಾ" ದ ವಿಷಯದಲ್ಲಿ ತುಂಬಾ ಪ್ರಕಾಶವನ್ನು ಬೀರಿದ್ದಾನೆ. ಆತನ ಹೇಳಿಕೆಯ ಪ್ರಕಾರ ಖಲೀಫರ ರಾಜ್ಯದಲ್ಲಿ ಪ್ರತಿಯೊಬ್ಬ ಮುಸಲ್ಮಾನನೂ ಕಡ್ಡಾಯವಾಗಿ ಸೈನ್ಯದಲ್ಲಿ ಸೇರಿ ಯುದ್ಧದ ಸಮಯದಲ್ಲಿ ಹೋರಾಡಬೇಕಿತ್ತು—ಆದರೆ ಮುಸಲ್ಮಾನೇತರರ ಮೇಲೆ ಈ ನಿರ್ಬಂಧವಿರಲಿಲ್ಲ. ಆದುದರಿಂದ ಅವರು (ಅಂದರೆ ಮುಸ್ಲಿಮರಲ್ಲದವರು) ಸೈನಿಕ ವೃತ್ತಿಯ ಬದಲಾಗಿ ಜಿಝಿಯಾ ತೆರಿಗೆಯನ್ನು ಒಪ್ಪಿಸಬೇಕಿತ್ತು. ಆದರೆ ಎಂದು ಖಲೀಫರು ತಾವು ಗೆದ್ದುಕೊಂಡ ರಾಜ್ಯವನ್ನು ಬಿಟ್ಟು ಹೋಗುತ್ತಿದ್ದರೋ ಆಗ ಅವರು ತಾವು ವಸೂಲಿ ಮಾಡಿದ ಜಿಝಿಯಾವನ್ನು ಪೂರ್ತಿಯಾಗಿ ಹಿಂದಕ್ಕೆ ಒಪ್ಪಿಸುತ್ತಿದ್ದರೆಂದೂ ಮುಹಮ್ಮದ್ ಅಲಿ ಬರೆದಿದ್ದಾನೆ. ಇನ್ನು ಮುಂದಕ್ಕೆ ತಮ್ಮಿಂದ ಆ ರಾಜ್ಯದ ಪ್ರಜೆಗಳನ್ನು ರಕ್ಷಿಸಲು ಸಾಧ್ಯವಿಲ್ಲದುದರಿಂದ ಅವರು ಜಿಝಿಯಾವನ್ನು ಹಿಂದಕ್ಕೆ ಸಲ್ಲಿಸುತ್ತಿದ್ದರಂತೆ.

ಜಿಝಿಯಾ ಮೂರು ಮಟ್ಟಗಳಲ್ಲಿ ಹೊರಿಸಲ್ಪಡುತ್ತಿತ್ತು. ಮೊದಲನೆಯ ಮಟ್ಟವು ೧೨ ಡರ್‌ಹಾಂ (ಅಂದರೆ ೩॥ ರೂಪಾಯಿ) ಗಳಷ್ಟಿದ್ದು, ಅದನ್ನು ಅತಿ ಬಡವರ ಮೇಲೆ ಹೊರಿಸಲಾಗುತ್ತಿತ್ತು. ಎರಡನೆಯ ಮಟ್ಟ ೬ ೨/೩ ರೂಪಾಯಿಗಳಷ್ಟಿದ್ದು, ಅದನ್ನು ಮಧ್ಯಮ ವರ್ಗದವರು ತೆರಬೇಕಿತ್ತು. ಧನಿಕರು ಕೊಡಬೇಕಾದುದು ೧೩ ೧/೩ ರೂಪಾಯಿಗಳಷ್ಟಿತ್ತು. ಹೆಂಗಸರು, ೧೮ ವರ್ಷಗಳ ಕೆಳಗಿನ ಮಕ್ಕಳು ಹಾಗೂ ಗುಲಾಮರು ಈ ತೆರಿಗೆಯಿಂದ ವಿನಾಯತಿ (exemption) ಪಡೆಯುತ್ತಿದ್ದರು.

ಕುರುಡರು, ಕುಂಟರು ಮತ್ತು ಹುಚ್ಚರು ಧನಿಕರಾಗಿದ್ದಲ್ಲಿ ಅವರು ಕೂಡಾ ಈ ತೆರಿಗೆಯನ್ನು ಕೊಡಬೇಕಾಗಿತ್ತು: ಸಂನ್ಯಾಸಿಗಳು ಭಿಕ್ಷುಕರಾಗಿದ್ದಲ್ಲಿ ಈ ತೆರಿಗೆಯನ್ನು ಕೊಡಲು ಬಾಧ್ಯರಾಗಿರಲಿಲ್ಲ—ಆದರೆ ಅವರು ಧನಾಢ್ಯ ಮಠಗಳ ಸದಸ್ಯರಾಗಿದ್ದರೆ ಅವರು ಕೂಡಾ ಕೊಡಬೇಕಿತ್ತು.

ಸಿಂಪಿಗರು, ಬಡಗಿಗಳು, ಸಮಗಾರರು ಮುಂತಾದವರು ಬಡವರೆಂದು ಗಣಿಸಲ್ಪಡುತ್ತಿದ್ದರು. ಅವರ ಆಯವು ವ್ಯಯವನ್ನು ಮೀರಿದ್ದಲ್ಲಿ ಮಾತ್ರ ಅವರು ತೆರಿಗೆಯನ್ನು ಕೊಡಬೇಕೆಂಬ ನಿಯಮವೇನೋ ಇತ್ತು; ಆದರೆ ಔರಂಗಜೇಬನು ಈ ನಿಯಮವನ್ನು ಪಾಲಿಸುತ್ತಿರಲೇ ಇಲ್ಲ. ವಸ್ತ್ರ ವ್ಯಾಪಾರಿಗಳು, ಜಮೀನುದಾರರು, ವ್ಯಾಪಾರಿಗಳು ಹಾಗೂ ವೈದ್ಯರು ಧನಿಕ ವರ್ಗದಲ್ಲಿ ಸೇರುತ್ತಿದ್ದರು.

ಸಿಂಧದ ಮುಸ್ಲಿಂ ಅರಸರಲ್ಲಿ ಮೊದಲಿನವರು ಬ್ರಾಹ್ಮಣರನ್ನು ಸಂನ್ಯಾಸಿಗಳೆಂದು ಗಣಿಸಿ ಅವರಿಂದ ತೆರಿಗೆಯನ್ನು ಅಪೇಕ್ಷಿಸುತ್ತಿರಲಿಲ್ಲ. ಆದರೆ ಫಿರೋಜ್‌ಶಾಹ ತಘಲಕ ಬ್ರಾಹ್ಮಣರಿಗೆ ದೊರಕುತ್ತಿದ್ದ ಈ ರಿಯಾಯತಿಯನ್ನು ರದ್ದುಗೊಳಿಸಿದನು. ಈ ಸಂದರ್ಭದಲ್ಲಿ ಮುಸ್ಲಿಂ ಇತಿಹಾಸಕಾರರಿಂದ ನಮಗೆ ತಿಳಿದು ಬರುವ ಒಂದು ಘಟನೆಯನ್ನು ಹೇಳಿದಲ್ಲಿ ಅಪ್ರಸ್ತುತವಾಗಲಾರದು. ಆಗ, ಅಂದರೆ ಫಿರೋಜ್ ಶಾಹನ ಆಳಿಕೆಯ ಕಾಲದಲ್ಲಿ ಭಕ್ತಿಪಂಥದ ಬ್ರಾಹ್ಮಣನೊಬ್ಬನು ಹಿಂದೂ ಧರ್ಮವನ್ನು ಕುರಿತು ಬಲು ರಸವತ್ತಾದ ಭಾಷಣಗಳನು ಮಾಡುತ್ತಿದ್ದನಂತೆ. ಆತನ ಖ್ಯಾತಿಯು ಎಷ್ಟು ಮಟ್ಟಿಗೆ ಪಸರಿಸಿತೆಂದರೆ ಅವನ ಭಾಷಣ ಕೇಳಲು ಹಿಂದೂಗಳು ಮಾತ್ರವಲ್ಲ, ಘೋಷಾ ತ್ಯಜಿಸಿ ಮುಸ್ಲಿಂ ಸ್ತ್ರೀಯರು ಕೂಡಾ ಬರುತ್ತಿದ್ದರಂತೆ! ಇದನ್ನು ಸಹಿಸಲಾಗದೆ ಫಿರೋಜ್ ಶಾಹನು ಆ ಬ್ರಾಹ್ಮಣನಿಗೆ "ಇಸ್ಲಾಂ ಮತಾವಲಂಬನೆ ಅಥವಾ ಮರಣ"— ಈ ಎರಡರಲ್ಲಿ ಒಂದನ್ನು ಆರಿಸಲು ಹೇಳಿದನಂತೆ. ಆ ನಿಷ್ಠಾವಂತ ಬ್ರಾಹ್ಮಣನು ಮರಣವನ್ನೇ ಸಂತೋಷದಿಂದ ಆರಿಸಿದನಂತೆ. ಫಿರೋಜ್ ಶಾಹನು ಆತನನ್ನು ತನ್ನ ಅರಮನೆಯ ಪ್ರಾಂಗಣದಲ್ಲೇ (Compound) ಸುಡಿಸಿದನೆಂದೂ, ಜ್ವಾಲೆ ಹಬ್ಬುತ್ತಿರುವಾಗ ಒಂದು ಅಸ್ಪಷ್ಟ ಧ್ವನಿಯ ಹೊರತಾಗಿ ಆತನ ಬಾಯಿಯಿಂದ ಮತ್ತಾವ ಶಬ್ದವೂ ಹೊರಡಲಿಲ್ಲವೆಂದೂ ಮುಸ್ಲಿಂ ಇತಿಹಾಸಕಾರನೊಬ್ಬನಿಂದ ನಮಗೆ ತಿಳಿದುಬರುತ್ತದೆ. ಆ ಮಹಾತ್ಮನ ಹೆಸರನ್ನು ಬರೆದಿಡಲು ಕೂಡಾ ಹಿಂದೂಗಳು ಮರೆತಿದ್ದಾರೆ ಎಂಬುದು ವಿಷಾದಾಸ್ಪದವಾಗಿದೆ. ಅದೇ ಮನುಷ್ಯನು ಕ್ರೈಸ್ತ ಧರ್ಮಕ್ಕಾಗಿ ಬಲಿಯಾಗಿದ್ದರೆ ಸಂತರಲ್ಲೊಬ್ಬನಾಗಿ ಪರಿಗಣಿಸಲ್ಪಡುತ್ತಿದ್ದನು!

"ಕಾಫರ"ರನ್ನು ಪರಿವರ್ತಿಸುವ ಕಾರ್ಯದಲ್ಲಿ ಬ್ರಾಹ್ಮಣರು ಮಹಾ ಕಂಟಕಗಳೆಂದು ನಂಬಿದ್ದ ಫಿರೋಜ್ ಶಾಹನು ಅವರು ಜಝಿಯಾದ ಅತಿ ಹೆಚ್ಚಿನ ಮಟ್ಟವನ್ನು ಕೊಡಬೇಕೆಂದು ವಿಧಿಸಿದನು. ಮೊದಲು ಬ್ರಾಹ್ಮಣರು ವರ್ಷ ಒಂದಕ್ಕೆ ೪೦ ಟಂಕಾಗಳಷ್ಟು (೧ ಟಂಕಾ ಅಂದರೆ ೧ ರೂಪಾಯಿಗಿಂತ ಸ್ವಲ್ಪ ಕಡಿಮೆ) ಕೊಡಬೇಕೆಂದಾಯಿತು. ಆದರೆ ರಾಜ್ಯದ ಬ್ರಾಹ್ಮಣರು ಒಂದುಗೂಡಿ ಅರಮನೆಯ ದ್ವಾರದ ಬಳಿ "ಸತ್ಯಾಗ್ರಹ" ಹೂಡಿದ ನಂತರ ಅವರು ಕೊಡಬೇಕಾದ ತೆರಿಗೆಯನ್ನು ೧೦ ಟಂಕಾ ಮತ್ತು ೫೦ ಚಿತ್ತಾಲಗಳಿಗೆ ಇಳಿಸಲಾಯಿತು. (೬೪ ಚಿತ್ತಾಲಗಳು = ೧ ಟಂಕಾ).

ಹೀಗೆ ಹಿಂದೂ ದೇಶದಲ್ಲಿ ಫಿರೋಜ್ ಶಾಹನಿಂದ ಹೊರಿಸಲ್ಪಟ್ಟ ಜಝಿಯಾ ತೆರಿಗೆಯು ಅಕಬರನ ಕಾಲದ ವರೆಗೂ ಆತಂಕವಿಲ್ಲದೆ ಹೊರಿಸಲ್ಪಟ್ಟಿತು. ಹಿಂದೂಗಳ ಪ್ರೀತಿಯನ್ನು ಸಂಪಾದಿಸಿ ಹಿಂದುಸ್ಥಾನದಲ್ಲಿ ಮೊಗಲರ ಸಾಮ್ರಾಜ್ಯವನ್ನು ಬಲಪಡಿಸಬೇಕೆಂಬ ಇಚ್ಛೆಯಿಂದ ದೂರದರ್ಶಿಯಾಗಿದ್ದ ಅಕಬರನು

೧೫೬೩ ರಲ್ಲಿ ಹಿಂದೂಗಳ ಮೇಲೆ ಹೊರಿಸಲ್ಪಡುತ್ತಿದ್ದ ಯಾತ್ರಾ ತೆರಿಗೆಯನ್ನು ರದ್ದುಗೊಳಿಸಿದನು. ೧೫೬೪ ರಲ್ಲಿ ಮೊಗಲರ ಖಜಾನೆಗೆ ಅನುಪಮ ಲಾಭದಾಯಕವಾಗಿದ್ದ ಜಿಝಿಯಾವನ್ನೇ ತೆಗೆದು ಹಾಕಿ ಹಿಂದೂಗಳ ಹೃದಯದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದನು. ಅಕಬರನು ತನ್ನೀ ಉದಾರತೆಯಿಂದ "ಮೊಗಲರು ಪರಕೀಯರು" ಎಂಬ ತನ್ನ ಪ್ರಜೆಗಳ ಮನದ ಭಾವನೆಯನ್ನು ತೊಡೆದುಹಾಕಿದನು.

ಅಕಬರನ ನಂತರ ಔರಂಗಜೇಬನ ವರೆಗಿನ ಅರಸರು ಅಕಬರನಂಥ ದೂರದರ್ಶಿಗಳೂ ಆಗಿರಲಿಲ್ಲ, ಔರಂಗಜೇಬನಷ್ಟು ಧರ್ಮಾಂಧರೂ ಆಗಿರಲಿಲ್ಲ. ಒಮ್ಮೊಮ್ಮೆ ಅವರು ಹಿಂದೂ ದೇವಸ್ಥಾನಗಳನ್ನು ಕೆಡವಿಯೊ ಜನರನ್ನು ಮತಾಂತರಗೊಳಿಸಲು ಪ್ರಯತ್ನಿಸಿಯೊ ತಮ್ಮ ಧಾರ್ಮಿಕತೆಯನ್ನು ಪ್ರದರ್ಶಿಸುವುದಿತ್ತು; (ಜಹಾಂಗೀರನು ಕಾಶಿಯಲ್ಲಿದ್ದ ರಾಜಾ ಮಾನಸಿಂಗನ ದೇವಸ್ಥಾನವನ್ನು ಹಾಳುಗೆಡವಿದ್ದನು.) ಆದರೂ ಅವರು ಜಿಝಿಯಾವನ್ನು ಹೊರಿಸಲಿಲ್ಲ. ಆದರೆ ಔರಂಗಜೇಬನು "ಮತಾಂಧತೆ" ಯನ್ನು "ಧಾರ್ಮಿಕತೆ" ಯೆಂದು ತಪ್ಪಾಗಿ ತಿಳಿದುಕೊಂಡು, ತಾನು ಪಟ್ಟಕ್ಕೆ ಬಂದ ೩೦ ವರ್ಷಗಳ ನಂತರ ಜಿಝಿಯಾವನ್ನು ಹಿಂದೂಗಳ ಮೇಲೆ ಪುನಃ ಹೊರಿಸಿದನು. ಆತನ ಈ ಕಾರ್ಯವು ಮೊಗಲ್ ಸಾಮ್ರಾಜ್ಯದ ಅವನತಿಯ ಮುಖ್ಯ ಕಾರಣಗಳಲ್ಲಿ ಒಂದಾಗಿತ್ತೆಂದು ಧಾರಾಳವಾಗಿ ಹೇಳಬಹುದು.

ಪ್ರಾರಂಭದಲ್ಲಿ ಜಿಝಿಯಾವನ್ನು ಹೊರಿಸುವ ಉದ್ದೇಶವು ಏನಿದ್ದರೂ ನಂತರದ ಮುಸ್ಲಿಂ ಅರಸರು ಅದನ್ನು ಮತಾಂತರದ "ಬ್ರಹ್ಮಾಸ್ತ್ರ" ವಾಗಿ ಉಪಯೋಗಿಸುತ್ತಿದ್ದರೆಂಬುದನ್ನು ನಾವು ಮರೆಯಲಾಗದು. ಔರಂಗಜೇಬನಂತೂ ಈ ತೆರಿಗೆಯನ್ನು ಹೊರಿಸುವುದು ಮಾತ್ರವಲ್ಲದೆ ಮತಾಂತರಕ್ಕಾಗಿ ಇನ್ನೂ ಅನೇಕ ಸಾಧನಗಳನ್ನು ಬಳಸುತ್ತಿದ್ದನು. ಉದಾಹರಣೆಗಾಗಿ, ಮತಾಂತರಗೊಂಡವರಿಗೆ ಅರಸನಿಂದ ಒಂದು ತಿಂಗಳ ಖರ್ಚಿಗೆ ಬೇಕಾಗುವಷ್ಟು ಹಣವು ಧರ್ಮಾರ್ಥವಾಗಿ ದೊರಕುತ್ತಿತ್ತು. ಸರಕಾರಿ ಉದ್ಯೋಗಗಳು, ಸೈನ್ಯದಲ್ಲಿ ಕೆಲಸಗಳು ಅವರಿಗೆ ಕಷ್ಟವಿಲ್ಲದೆ ದೊರಕುತ್ತಿದ್ದವು.

ಹೀಗೆ ತ್ರಿಕರಣಪೂರ್ವಕವಾಗಿ ಔರಂಗಜೇ-ಬನು ಮತಾಂತರದ ಕಾರ್ಯದಲ್ಲಿ ತೊಡಗುವುದಕ್ಕೆ ಧರ್ಮಾಂಧತೆ ಮಾತ್ರವಲ್ಲದೆ ರಾಜಕೀಯ ಕಾರಣಗಳೂ ಇಲ್ಲದಿರಲಿಲ್ಲ. ಆತನು ಸಿಂಹಾಸನವನ್ನೇರುವ ಕಾಲದಲ್ಲಿ ಕ್ರೈಸ್ತಧರ್ಮವು ಬಲಶಾಲಿಯಾಗುತ್ತಾ ಬಂದಿದ್ದು ಇಸ್ಲಾಮನ್ನು ಸೋಲಿಸುವ ಪ್ರಯತ್ನದಲ್ಲಿ ತೊಡಗಿತ್ತು. ಇಸ್ಲಾಂ ಧರ್ಮದ ಮುನ್ನಡೆಯನ್ನು ಟರ್ಕಿಯಲ್ಲಿ ಕ್ರೈಸ್ತರು ತಡೆಹಿಡಿದಿದ್ದರು. ರಶ್ಯಾದ ಝಾರರು ಮುಸ್ಲಿಂ ಟಾರ್ಟರರನ್ನು ಹಿಂದೂಡುವುದರಲ್ಲಿ ಸಫಲರಾಗಿದ್ದರು. ಇಸ್ಲಾಂ ಧರ್ಮವು ಆಗ್ನೇಯ ಟಿಬೆಟ್ ಹಾಗೂ ನೈಋತ್ಯ ಚೀನಾದಲ್ಲಿ ಮಾತ್ರ ಪ್ರಬಲವಾಗಿತ್ತು. ಸ್ಥಿತಿ ಹೀಗಿರುವಾಗ, ತನ್ನ ಪ್ರಯತ್ನದಿಂದ ಹಿಂದುಸ್ಥಾನ ಮುಸಲ್ಮಾನ ರಾಜ್ಯವಾದಲ್ಲಿ ಮೃತಪ್ರಾಯವಾಗಿದ್ದ ಇಸ್ಲಾಮಿನಲ್ಲಿ ಜೀವಕಳೆ ತುಂಬಬಹುದು ಎಂದು ಔರಂಗಜೇಬನು ಎಣಿಸುತ್ತಿದ್ದನು. ತನ್ನೀ ಕನಸು ನನಸಾದಲ್ಲಿ ಅಟ್ಲಾಂ-ಟಿಕ್ ಸಾಗರದ ಮೊರೊಕ್ಕೋದಿಂದ ಶಾಂತ ಸಾಗರದ ಚೀನಾದ ವರೆಗೆ ಇಸ್ಲಾಂ ಸಾಮ್ರಾಜ್ಯ ವಿಸ್ತರಿಸಬಹುದು ಎಂಬುದು ಆತನ ಅಭಿಪ್ರಾಯವಾಗಿತ್ತು.

ಈ ಅಭಿಪ್ರಾಯದಿಂದಲೇ ಆತನು ತಾನು ಪಟ್ಟವನ್ನೇರಿದ ೨ ದಶಮಾನಗಳ ನಂತರ-ತನ್ನ ಸ್ಥಾನ ಭದ್ರವಾಗಿದೆಯೆಂದು ತಿಳಿದ ನಂತರ-ಜಿಝಿಯಾವನ್ನು ಪುನರುಜ್ಜೀವಿಸಿದನು. ಇದರಿಂದ ದಿಲ್ಲಿಯ ಹಿಂದೂ ನಿವಾಸಿಗಳು ರೊಚ್ಚಿಗೆದ್ದರು. ಅವರು ಒಗ್ಗಟ್ಟಾಗಿ ಔರಂಗಜೇಬನು ಅರಮನೆಯಿಂದ ಮಸೀದೆಗೆ ಹೋಗುತ್ತಿರುವಾಗ ದಾರಿ

ಯಲ್ಲಿ ಕಿಕ್ಕಿರಿದು ನೆರೆದು ಜಿಝಿಯಾದ ವಿರುದ್ಧ ಘೋಷಣೆಗಳನ್ನು ಮಾಡಿದರು. ಕುಪಿತನಾದ ಔರಂಗಜೇಬನು ತನ್ನ ದಾರಿಗೆ ಅಡ್ಡಲಾಗಿ ಬಂದ ವರನ್ನು ಆನೆಯಿಂದ ತುಳಿಸಬೇಕೆಂದು ತನ್ನ ಮಾಹುತನಿಗೆ ಆಜ್ಞಾಪಿಸಿದನಂತೆ!

ಔರಂಗಜೇಬನು ತನ್ನ ರಾಜ್ಯದಲ್ಲಿ ಅತಿ ಬಡವರನ್ನು ಕೂಡಾ ಈ ತೆರಿಗೆಯಿಂದ ಮುಕ್ತಗೊಳಿಸಲಿಲ್ಲ. ಮಾತ್ರವಲ್ಲದೆ ಮುಸಲ್ಮಾನೇತರರು ಈ ತೆರಿಗೆಯನ್ನು ಒಂದೇ ಗಂಟಿನಲ್ಲಿ ಸ್ವತಃ ಹೋಗಿ ಒಪ್ಪಿಸಬೇಕೆಂದೂ ಆಜ್ಞಾಪಿಸಿದನು. ತನ್ನ ರಾಜ್ಯದಲ್ಲಿ ಮಾತ್ರವಲ್ಲ, ಗೆದ್ದುಕೊಂಡ ಪ್ರದೇಶಗಳಲ್ಲಿ ಕೂಡಾ ಒಂದಿನಿತೂ ತಡ ಮಾಡದೆ ಆತನು ಜಿಝಿಯಾವನ್ನು ಜಾರಿಗೆ ತರುತ್ತಿದ್ದನು.

ಬಡಜನರಿಗೆ ಈ ತೆರಿಗೆಯನ್ನು ತೆರಲು ಬಲು ಕಷ್ಟವಾಗುತ್ತಿತ್ತು ಎಂಬುದನ್ನು ಇಲ್ಲಿ ಬೇರೆ ಹೇಳಬೇಕಾಗಿಲ್ಲ. ಪ್ರಸಿದ್ಧ ಇತಿಹಾಸಜ್ಞರಾದ ಯದುನಾಥ ಸರಕಾರರು ತಮ್ಮ ಪುಸ್ತಕದಲ್ಲಿ "ಕೆಲಸಗಾರರು ಒಪ್ಪಿಸುತ್ತಿದ್ದ ಜಿಝಿಯಾದ ಮೊತ್ತವು ಆಗಿನ ಕಾಲದ ಧಾರಣೆಯ ಪ್ರಕಾರ ಒಬ್ಬ ಮನುಷ್ಯನಿಗೆ ಒಂದು ವರ್ಷಕ್ಕೆ ಸಾಲುವಷ್ಟು 'ಆಟಾ' (ಗೋದಿಹಿಟ್ಟು) ವನ್ನು ಕೊಂಡುಕೊಳ್ಳಲು ಸಾಲುವಷ್ಟಿತ್ತು" ಎಂದಿದ್ದಾರೆ. ಆಗಿನ ಕಾಲದಲ್ಲಿ ಸಾಮಾನ್ಯ ಕೂಲಿಕಾರನಿಗೆ ದಿನ-ವೊಂದಕ್ಕೆ ೨ ದಾಮುಗಳು ಮಾತ್ರ ದೊರಕುತ್ತಿದ್ದವು— ಅಂದರೆ ತಿಂಗಳಲ್ಲಿ ೩೦ ದಿನಗಳಿಡೀ ಬೆವರಿಳಿಸಿ ಕೆಲಸ ಮಾಡಿದಲ್ಲಿ ಆತನಿಗೆ ದೊರಕುತ್ತಿದ್ದುವು ಕೇವಲ ೧॥ ರೂಪಾಯಿಗಳು!

ಈ ಕಾರಣದಿಂದಲೇ ಪಂಜಾಬ, ಬಿಹಾರ ಮತ್ತು ಬಂಗಾಲಗಳಲ್ಲಿ ಅನೇಕ ಬಡ ಜನರು ಇಸ್ಲಾಮನ್ನು ಸ್ವೀಕರಿಸಿದರು. ಬಿಹಾರದಲ್ಲಿ ಮತಾಂತರ ಹೊಂದಿದವರಲ್ಲಿ ಹೆಚ್ಚಿನವರು ನೇಕಾರರಾಗಿದ್ದರು. ಫ್ರಾನ್ಸಿಸ್ ಬುಚಾನನರ ಲೆಕ್ಕದ ಪ್ರಕಾರ ಆಗಿನ ಕಾಲದ ಬಿಹಾರಿ ನೇಕಾರನೊಬ್ಬನ ಸರಾಸರಿ ವಾರ್ಷಿಕ ಉತ್ಪತ್ತಿಯು ಕೇವಲ ೨೮॥ ರೂಪಾಯಿಗಳಷ್ಟಿತ್ತು. ಅವರ ಈ ಅಲ್ಪ ಆದಾಯದ ಬಹ್ವಂಶವನ್ನು ಅವರು ತೆರಬೇಕಾದ ಜಿಝಿಯಾ ಕಬಳಿಸಿ ಬಿಡುತ್ತಿತ್ತು. ಮಾತ್ರವಲ್ಲದೆ ಹಿಂದೂ ಸಮಾಜದಲ್ಲಿ ಈ ನೇಕಾರರು ಅಸ್ಪೃಶ್ಯರೆಂದು ಗಣಿಸಲ್ಪಡುತ್ತಿದ್ದರು. ಹೀಗಿರುವಾಗ ಅಸ್ಪೃಶ್ಯರಾಗಿ, ಅತ್ಯಂತ ಬಡವರಾಗಿ ಹಿಂದೂ ಸಮಾಜದಲ್ಲಿ ಉಳಿಯುವುದಕ್ಕಿಂತ ಇಸ್ಲಾಮಿಗೆ ಸೇರಿ, ಎಲ್ಲರಂತೆ ತಾವಾಗಿ ತೆರಿಗೆಯಿಂದ ಮುಕ್ತರಾಗಿ, ಒಂದು ತಿಂಗಳ ಅಶನವನ್ನು ಧರ್ಮಾರ್ಥವಾಗಿ ಪಡೆಯುವುದೇ ಲೇಸೆಂದು ಇವರು ತಿಳಿದಲ್ಲಿ ತಪ್ಪೇನಿದೆ? ಇದೇ ರೀತಿ ಪಂಜಾಬಿನಲ್ಲಿ ಚಮ್ಮಾರರು ಅಧಿಕ ಸಂಖ್ಯೆಯಲ್ಲಿ ಇಸ್ಲಾಮನ್ನಪ್ಪಿದರು. [೧೯೪೭ ರಲ್ಲಿ ಭಾರತದ ವಿಭಜನೆಯಾದಾಗ, ಪಾಕಿಸ್ತಾನಿ ಪಂಜಾಬಿನ ಚಮ್ಮಾರರು ಪಾಕಿಸ್ತಾನದಲ್ಲೇ ಉಳಿದರು; ಆದರೆ ಭಾರತಕ್ಕೆ ಸೇರಿದ ಪಂಜಾಬಿನ ಚಮ್ಮಾರರು ಪಾಕಿಸ್ತಾನಕ್ಕೆ ತೆರಳಿದರು— ಹೀಗಾಗಿ ವಿಭಜನೆಯ ನಂತರ ಪಂಜಾಬಿನಲ್ಲಿ ಚಮ್ಮಾರರ ಅಭಾವವು ಬಹಳವಾಗಿ ತೋರಿ ಬರಲು, ಸರಕಾರವು ಚಮ್ಮಾರರನ್ನು ತರಬೇತು ಮಾಡಲು ಶಾಲೆಗಳನ್ನು (Vocational schools) ತೆರೆಯಬೇಕಾಯಿತು!]

ಆದರೆ ಭಾರತವನ್ನು ಮುಸಲ್ಮಾನ್ ರಾಜ್ಯವನ್ನಾಗಿ ಪರಿವರ್ತಿಸುವ ಔರಂಗಜೇಬನ ಕನಸು ಕನಸಾಗಿಯೇ ಉಳಿಯಿತು. ಪಂಜಾಬ ಮತ್ತು ಬಂಗಾಲಗಳಲ್ಲಿ ಮಾತ್ರ ಆತನ ಮತಾಂತರದ ಧೋರಣೆ ಸಫಲವಾಯಿತು. ಆದರೆ ಉಳಿದ ಪ್ರಾಂತ್ಯಗಳ ಜನರು ಅಧಿಕ ಸಂಖ್ಯೆಯಲ್ಲಿ ಮುಸಲ್ಮಾನರಾಗಲಿಲ್ಲ. ಭಕ್ತಿಪಂಥದ ಸಾಧುಗಳು, ಮುಖ್ಯವಾಗಿ ಸಂತ ತುಲಸೀದಾಸರು, ಔರಂಗಜೇಬನ ಮಹತ್ವಾಕಾಂಕ್ಷೆಯ ಪಥದಲ್ಲಿ ದೊಡ್ಡ ಕಂಟಕಗಳಾಗಿದ್ದರು.

ಮೊಗಲರ ನಂತರ ಭಾರತವರ್ಷವು ಮರಾಟರ ಹಾಗೂ ಸೀಖರ ಪ್ರಭಾವಕ್ಕೊಳಗಾಯಿತು. *

ಮರಾಠಿ ಕಥೆ

# ರಿಕ್ಷಾ

ರಣಜಿತ ದೇಸಾಯಿ

"ಕಿರ್ಲೋಸ್ಕರ" ದಿಂದ.

ಆರ್. ಟಿ. ಆ್ಯಂಡ್ ಬ್ರದರ್ಸ್ ಕಂಪನಿಯಲ್ಲಿ ನಾನು ನೌಕರ. ವರ್ಷಕ್ಕೆ ಒಂದೆರಡು ಸಲವಾದರೂ ನಾನು ಮುಂಬಯಿಯಿಂದ ಕಂಪೆನಿಯ ಕಲಕತ್ತಾ ಶಾಖೆಗೆ ಹೋಗಿಬರುತ್ತೇನೆ. ಕಲಕತ್ತೆಗೆ ಹೋದಾಗ ನಮಗೆ ತೊಂದರೆಯಾಗಬಾರದೆಂದು ಸಿಯಾಬಾಜಾರದ ಹತ್ತಿರ ಒಂದು ಚಾಳಿನಲ್ಲಿ ಒಂದು ಬ್ಲಾಕನ್ನು ನಮ್ಮ ಕಂಪೆನಿ ಕಾಯಂ ಬಾಡಿಗೆಗೆ ಹಿಡಿದಿದೆ. ನಮ್ಮ ಚಾಳಿನ ಎದುರಿಗೆ ಅದೇ ಮಾಲಿಕನಿಗೆ ಸೇರಿದ ಇನ್ನೊಂದು ಮೂರಂತಸ್ತಿನ ಚಾಳು ಇದೆ. ನಡುವೆ ಒಂದು ದೊಡ್ಡ ಅಂಗಳ, ಅಲ್ಲಿಯೇ ನಳ.

ನಾನು ಅಲ್ಲಿ ಹೋದಾಗ ನಾಲ್ಕಾರು ದಿನಗಳ ಮಟ್ಟಿಗೆ ಇರುವುದರಿಂದಲೂ ನನ್ನ ಕೆಲಸ ಮುಗಿಸಿಕೊಂಡು ರಾತ್ರಿ ವಾಸಸ್ಥಾನವಾದ ಈ ಚಾಳಿಗೆ ತಿರುಗಿಬರುವುದರಿಂದಲೂ ಅಲ್ಲಿ ನನ್ನ ಪರಿಚಯದವರಾರೂ ಇಲ್ಲ. ಕಸಗೂಡಿಸಲಿಕ್ಕೆ ಬರುತ್ತಿದ್ದ ರಾಮಶರಣನೊಬ್ಬನೇ ಪರಿಚಯದವನು. ಅವನೇ ನನ್ನ ಯೋಗಕ್ಷೇಮ ವಿಚಾರಿಸುತ್ತಿದ್ದ. ಗ್ಯಾಲರಿ



ಯಲ್ಲಿ ಆರಾಮ ಖುರ್ಚಿ ಇಟ್ಟುಕೊಂಡು ನಾನು ಸಾಯಂಕಾಲ ಒರಗುತ್ತಿದ್ದೆ. ಆಗ ರಾಮಶರಣ ನೊಂದಿಗೆ ಹರಟೆ ನಡೆಯುತ್ತಿತ್ತು.

ನಮ್ಮ ಎದುರಿನ ಚಾಳಿನ ಮೇಲಿನ ಅಂತಸ್ತಿನ ಗ್ಯಾಲರಿಯಲ್ಲಿ ಗುಲಾಬಿ ಗಿಡಗಳಿದ್ದವು. ಅವಕ್ಕೆ ನೀರು ಹಾಕುವವರನ್ನು ನಾನಿನ್ನೂ ನೋಡಿರ ಲಿಲ್ಲ. ಆ ಬ್ಲಾಕಿನಿಂದ ಯಾರೊ ಸಿತಾರು ಬಾರಿ ಸುವುದು ಕೇಳಬರುತ್ತಿತ್ತು. ಕೆಳಗಿನ ಅಂತಸ್ತಿನ ಬಾಗಿಲು ಯಾವಾಗಲೂ ಮುಚ್ಚಿದ್ದು ಸಂಜೆ ಜನರ ಓಡಾಟ ಕಡಿಮೆಯಾದ ಮೇಲೆ ಒಬ್ಬ ಮಹಿಳೆ ಆ ಬಾಗಿಲನ್ನು ತೆರೆಯುತ್ತಿದ್ದಳು ಮತ್ತು ನಳದ ವರೆಗೆ ಬಂದು ನೀರು ಒಯ್ಯುತ್ತಿದ್ದಳು. ಅವಳು ರೂಪವತಿ. ಹೂವಿನ ಗಿಡಗಳೂ ತಂತಿಯ ನಾದವೂ ರೂಪವತಿಯ ಅಸ್ಫುಟ ದರ್ಶನವೂ ನನ್ನಲ್ಲಿ ಒಂದು ಬಗೆಯ ಕುತೂಹಲ ಹುಟ್ಟಿಸಿದ್ದವು.

ಎರಡು ವರ್ಷದ ಹಿಂದಿನ ಮಾತು. ಶನಿವಾರದ ಕೆಲಸ ಮುಗಿಸಿ ಸೋಮವಾರದ ವರೆಗೆ ನನ್ನ ನಿವಾಸವಾದ ಬ್ಲಾಕಿನಲ್ಲೇ ಇರುವವನಿದ್ದೆ. ದಿನದ ಕೆಲಸಗಳನ್ನೆಲ್ಲ ಮುಗಿಸಿ ನಾನು ಬ್ಲಾಕಿಗೆ ಮರಳಿದೆ. ನಳದ ಹತ್ತಿರ ಆ ರೂಪವತಿ ಇದ್ದಳು. ಇತರ ಹೆಂಗಸರು ತಮ್ಮ ಕೊಡಗಳನ್ನು ತುಂಬಿ ಕೊಳ್ಳುವ ವರೆಗೆ ಆಕೆ ತಡೆದಿದ್ದಳು. ಆಗ ಅವಳನ್ನು ಹೆಚ್ಚು ಸಮೀಪದಲ್ಲಿ ನೋಡಲು ಸಾಧ್ಯವಾಯಿತು. ನಾನು ಸ್ತಂಭಿತನಾದೆ. ಆ ರೂಪ-ರಾಶಿಯನ್ನೇ ನೆನೆಯುತ್ತ ನನ್ನ ಬ್ಲಾಕಿಗೆ ಹೋದೆ. ಅಷ್ಟರಲ್ಲಿ ರಾಮಶರಣ ಬಂದಿದ್ದ.

ಈವರೆಗೆಂದೂ ಈ ವಿಷಯದಲ್ಲಿ ನಾನು ರಾಮಶರಣನನ್ನು ಕೇಳಿರಲಿಲ್ಲವಾದರೂ ಈ ಸಲ ಕೇಳದಿರಲಿಕ್ಕಾಗಲಿಲ್ಲ.

" ರಾಮಶರಣ ! "

" ಜೀ ? "

" ಆಕೆ ಯಾರು ? "

" ಯಾವಳು ? "

ನಾನು ತೋರಿಸಿದೆ.

" ಅವರು ಈ ಚಾಳಿನ ಒಡತಿ. "

" ಒಡತಿ ? "

" ಹುಂ. "

" ಆದರೆ ಆ ಬಾಗಿಲು ಯಾವಾಗಲೂ ಮುಚ್ಚಿರುವುದೇಕೆ ? "

" ಮುಚ್ಚಿರುವುದು ! "

"ಅವಳ ಹಣೆಯಲ್ಲಿ ಕುಂಕುಮವೂ ಇದೆ ! "

"ಹೌದು, ಬಾಬೂಜೀ."

"ಆದರೆ ಅವಳ ಬ್ಲಾಕಿನಲ್ಲಿ ಯಾರೂ ಇದ್ದಂತೆ ಕಾಣುವುದಿಲ್ಲ!"

"ಹೌದು, ಬಾಬೂಜೀ."

"ಏನೋ ! ಎಲ್ಲಕ್ಕೂ ಹೌದು ಬಾಬೂಜೀ. ಹಾಗಾದರೆ ಅವಳ ಗಂಡ ಎಲ್ಲಿ ಇರುತ್ತಾರೆ ? "

" ಮೇಲಿನ ಅಂತಸ್ತಿನಲ್ಲಿ."

ಅತ್ತ ದೃಷ್ಟಿ ಹೊರಳಿಸಿದೆ. ಅಲ್ಲಿ ಹದಿನಾರು ವರ್ಷದ ಕಪ್ಪುವರ್ಣದ ತರುಣಿಯೊಬ್ಬಳು ಗಿಡಗಳಿಗೆ ನೀರೆರೆಯುತ್ತಿದ್ದುದು ಕಾಣಿಸಿತು.

" ಅವಳಾರು ? "

" ನನಗೆ ಗೊತ್ತಿಲ್ಲ ! "

" ಒಡತಿ ಕೆಳಗೇಕೆ ಇರುತ್ತಾಳೆ? "

ಇಷ್ಟಕ್ಕೇ ನಾನು ಮುಗಿಸಲಾರೆನೆನಿಸಿತೇನೊ ರಾಮಶರಣನಿಗೆ.

ಆತ " ಒಳಗೆ ಬನ್ನಿ ಸ್ವಾಮಿ, ಹೇಳುತ್ತೇನೆ " ಎಂದ. ಒಳಗೆ ಹೋದ ಮೇಲೆ ರಾಮಶರಣ ಪ್ರಾರಂಭಿಸಿದ.

"ಇಲ್ಲಿ ನಾನು ಚಾಕರಿ ಮಾಡಲಿಕ್ಕೆ ಪ್ರಾರಂ-ಭಿಸಿ ಈಗ ಎಂಟು ವರ್ಷಗಳಾದುವು. ನಾನು ಬಂದಾಗ ಒಡೆಯ-ಒಡತಿ ಇಬ್ಬರೂ ಮೇಲಿನ ಬ್ಲಾಕಿನಲ್ಲೇ ಇರುತ್ತಿದ್ದರು. ನಾವೆಲ್ಲ ಒಡೆಯರಿಗೆ 'ಬಡೇದಾದಾ' ಎನ್ನುತ್ತೇವೆ. ಅವರ ಹೆಸರು ಪರೇಶ ಬಾಬು. ಮಾಯಿಜಿ (ಯಜಮಾನಿ) ಹೆಸರು ಲಕ್ಷ್ಮಿ."

" ನಿನ್ನ ಒಡೆಯರ ವಯಸ್ಸೆಷ್ಟು ? "

" ಸುಮಾರು ನಲುವತ್ತರಷ್ಟಿರಬೇಕು. ಬಹಳ ಒಳ್ಳೆಯವರು. ಅವರು ಸ್ವಂತದ ಸಲುವಾಗಿ ಏನನ್ನೂ ಮಾಡಿಕೊಂಡಿಲ್ಲ. ಈ ಹೂವಿನ ಗಿಡಗಳು ಮತ್ತು ಬಾರಿಸುವ ಸಿತಾರು ಬಿಟ್ಟರೆ ಬೇರಾವುದೂ ಅವರ ಮನಸ್ಸನ್ನು ಅಷ್ಟು ಸೆಳೆದುಕೊಂಡಂತೆ ಕಾಣುವುದಿಲ್ಲ. ಮೊದಮೊದಲು ಅವರೂ ಸಾಕಷ್ಟು ತಿರುಗಾಡುತ್ತಿದ್ದರು. ಜನರೊಂದಿಗೆ ಮಾತಾಡುತ್ತಿದ್ದರು. ಆದರೆ ಇತ್ತೀಚೆಗೆ ಮೌನವಾಗಿದ್ದಾರೆ. ಹೊರಗೆ ಎಲ್ಲಿಯೂ ಹೋಗುವುದಿಲ್ಲ. ಆಗಾಗ ಕೋರ್ಟಿಗಷ್ಟು ಹೋಗುತ್ತಾರೆ "

" ಕೋರ್ಟಿಗೆ ? "

" ಮಾಯೀಜೀ ಅವರ ಮೇಲೆ ಫಿರ್ಯಾದು ಮಾಡಿದ್ದಾರೆ. "

" ಯಾಕೆ ? "

" ಅವೆಲ್ಲ ನಮ್ಮಂಥವರ ಹತ್ತಿರ ಯಾರು ಹೇಳುತ್ತಾರೆ ಬಾಬೂಜೀ? ಆದರೆ ಆಗಾಗ ಕೆಲಸದಲ್ಲಿದ್ದಾಗ ಕಿವಿಗೆ ಬಿದ್ದದ್ದು ಕಣ್ಣಿಗೆ ಕಂಡದ್ದು ಎಷ್ಟೋ ಅಷ್ಟು. ಬಡೇ ದಾದಾ ಒಮ್ಮೆ ಪರಊರಿಗೆ ಹೋದರು. ಎಂಟು ಹತ್ತು ದಿವಸ ಬಿಟ್ಟು ಮರಳಿ ಬಂದರು. ಬರುವಾಗ ಅವರೊಂದಿಗೆ ರಾಧಾರಾಣಿ ಇದ್ದಳು. "

" ರಾಧಾರಾಣಿ ಯಾರು ? "

"ಅವಳೇ, ಗುಲಾಬೀ ಗಿಡಗಳಿಗೆ ನೀರೆರೆಯುವ ಹುಡುಗಿ. ರಾಧಾರಾಣಿ ಬಂದ ಮೇಲೆ ಬಡೇ ದಾದಾ ಹೆಚ್ಚಾಗಿ ಮಾತಾಡುವುದನ್ನು ನಾನಂತೂ ಕಂಡಿಲ್ಲ. ಮಾಯೀಜಿಯೇ ಜೋರು ಜೋರಾಗಿ ಮಾತಾಡುತ್ತಿದ್ದರು. ಆದರೂ ಬಡೇ ದಾದಾ ಒಂದು ತುಟಿ ಎರಡು ಮಾಡುತ್ತಿರಲಿಲ್ಲ, ಒಮ್ಮೆ ಏನೋ ಕಾರಣದಿಂದ ಹೀಗೇ ಅವರ ನಡುವೆ ಜಗಳವಾಯಿತು. ಆಗ ಬಡೇದಾದಾ 'ಲಕ್ಷ್ಮೀ, ರಾಧಾರಾಣಿಯ ಮಾತೆತ್ತಬೇಡ. ನೀನು ಅವಳಿಗೆ ಏನೂ ಅನ್ನಕೂಡದು. ಆ ಒಂದು ವಿಷಯ ಬಿಟ್ಟು ಬೇರೆ ಏನು ಬೇಕಾದರೂ ಕೇಳು. ನಾನು ನಡೆಸಿಕೊಡುವೆ, ' ಎಂದರು

"ಮಾಯೀಜಿಗೂ ಸಿಟ್ಟು ತಡೆಯಲಿಲ್ಲ, ಇಲ್ಲಿ ಇನ್ನು ತಾನಿರುವುದಿಲ್ಲ ಎಂದರು. 'ನಿನ್ನ ಇಚ್ಛೆ ಇದ್ದಂತೆ ಮಾಡು' ಎಂದರು ಬಡೇದಾದಾ. "

" ಮುಂದೆ ? "

" ಆ ಮೇಲೆ ಮಾಯೀಜಿ ಕೆಳಗೆ ಇರತೊಡಗಿದರು "

" ಮುಂದೆ ? "

" ಮುಂದೊಂದು ದಿನ ಮಾಯೀಜಿಯ ತವರಿನವರು ಬಂದರು. ಅವರು ಎಷ್ಟು ಹೇಳಿದರೂ ಮಾಯೀಜೀ ಮೇಲೆ ಹೋಗಿ ಇರಲಿಕ್ಕೆ ಒಪ್ಪಲಿಲ್ಲ. ಮತ್ತು ವರ್ಷಾಶನಕ್ಕಾಗಿ ಬಡೇ ದಾದಾ ಅವರ ಮೇಲೆ ಕೋರ್ಟಿನಲ್ಲಿ ಫಿರ್ಯಾದು ಹೂಡಿದರು. "

" ಮಾಯೀಜೀ ಕೇಳದಿದ್ದರೆ ಆ ಜನರು ಬಡೇದಾದಾರನ್ನು ಕೇಳಬೇಕಿತ್ತು ! "

" ಕೇಳಿದರು ಅದಕ್ಕೆ ಬಡೇದಾದಾ, 'ನಾನು ಅವಳನ್ನು ಬಿಟ್ಟಿಲ್ಲ. ಮನೆ ಅವಳದೇ ಇದೆ. ಯಾವಾಗ ಬೇಕಾದರೂ ಬರಲಿ !' ಎಂದರು."

" ಹಾಗಾದರೆ ಈಗ ಮಾಯೀಜಿಯ ಖರ್ಚು ಯಾರು ನೋಡಿಕೊಳ್ಳುತ್ತಾರೆ ? "

" ಬಡೇದಾದಾ. "

ನನಗೆ ಆಶ್ಚರ್ಯವೆನಿಸಿತು.

" ಮಾಯೀಜೀ ಫಿರ್ಯಾದು ಮಾಡಿದಾಗ ಬಡೇದಾದಾ ಸ್ವತಃ ಕೆಳಗೆ ಹೋಗಿ ತನ್ನ ಇಸ್ಟೇಟಿನ ಅರ್ಧ ರಕಮನ್ನು — ಹನ್ನೆರಡುವರೆ ಸಾವಿರ ರೂಪಾಯಿಯ ಚೆಕ್ಕನ್ನು — ಕೊಟ್ಟು ಕೋರ್ಟಿನ ಖರ್ಚಿಗೆ, ನಿನ್ನ ಖರ್ಚಿಗೆ ಇವು ಇರಲಿ ಎಂದು ಹೇಳಿದರು. "

" ಆ ದುಡ್ಡನ್ನು ಮಾಯೀಜೀ ಮುಟ್ಟಿದರೆ ? "

" ತಕ್ಕೊಂಡರು. "

" ಇನ್ನು ಮುಂದೆ ಹೇಗೆ ? "

" ಮುಂದೇನು ? ಕೋರ್ಟು ಹೇಗೆ ಹೇಳುತ್ತದೊ ಹಾಗೆ ಆಗಬೇಕು ಅಷ್ಟೆ ! "

ಆ ದಿನ ನಮ್ಮ ಸಂಭಾಷಣೆ ಅಲ್ಲಿಗೇ ನಿಂತಿತು.

ಮರುದಿನ ಕಲಕತ್ತಾ ಬಿಟ್ಟೆ. ಆ ಮೇಲೆ ಮತ್ತೆ ಅಲ್ಲಿ ಹೋದದ್ದು ಆರು ತಿಂಗಳ ತರುವಾಯ. ಯಥಾಪ್ರಕಾರ ನನ್ನ ದೃಷ್ಟಿ ಆ ಬ್ಲಾಕಿನ ಕಡೆಗೆ ಹೊರಳಿತು. ಬಾಗಿಲು ತೆರೆದಿತ್ತು. ನಿತ್ಯದ ವೇಳೆಗೆ ಮಾಯೀಜಿ ಬಂದು ನೀರು ಒಯ್ದಳು. ರಾತ್ರಿ ಮತ್ತೆ ಸಿತಾರಿನ ಸ್ವರ ಕೇಳಿಸಿತು.

"ರಾಮಶರಣ, ಈ 'ಮೇಲೆ-ಕೆಳಗೆ' ಪ್ರಕರಣ ಬಗೆಹರಿಯಲಿಲ್ಲವೇನೋ ?"

"ಬಗೆಹರಿಯಿತು."

"ಏನೆಂದು ?"

"ಬಡೆದಾದಾ ಅವರಿಗೆ ವಿಜಯವಾಯಿತು."

"ಮತ್ತು ಮಾಯೀಜಿಗೆ ಏನೂ ಸಿಗಲಿಲ್ಲವೆ?"

"ಎಲ್ಲಾ ಸಿಕ್ಕಿತು."

"ಏನೋ ಅಸಂಬದವಾಗಿ ಮಾತಾಡುತ್ತಿ?"

"ಅಸಂಬದ್ಧವೇನೂ ಇಲ್ಲ. ಆದದ್ದೇ ಹೀಗೆ. ಯಜಮಾನಿಯ ವಕೀಲ ತನ್ನ ಪಕ್ಷವನ್ನು ಭದ್ರಗೊಳಿಸಿಕೊಳ್ಳಲು ಬಡೇದಾದಾ ಅವರ ಮೇಲೆ ನೂರಾರು ಆರೋಪ ಹೊರಿಸಿದ. ಕಡೆಗೆ ಬಡೇದಾದಾ ಜವಾಬು ಕೊಡಲು ಎದ್ದು ನಿಂತರು. –'ನನ್ನ ವಿವಾಹವಾದ ಮೇಲೆ ಕೆಲ ತಿಂಗಳಲ್ಲೇ ನಾನು ನನ್ನ ಸ್ಥಾವರ ಇಸ್ಟೇಟನ್ನೂ ಎರಡೂ ಚಾಳುಗಳನ್ನೂ ಲಕ್ಷ್ಮೀದೇವಿಯ ಹೆಸರಿಗೆ ಮಾಡಿಬಿಟ್ಟಿದ್ದೇನೆ. ನಗದಿ ಹಣ ನನ್ನ ಹತ್ತಿರ ಇದ್ದದ್ದು– ಅದರಲ್ಲೂ ಅರ್ಧ ಭಾಗ ಅವಳಿಗೆ ಆಗಲೇ ಕೊಟ್ಟಿದ್ದೇನೆ. ಇನ್ನು ಕೋರ್ಟು ನನ್ನಿಂದ ಇದಕ್ಕೂ ಹೆಚ್ಚು ಅಪೇಕ್ಷಿಸುತ್ತಿದ್ದರೆ ಹೇಳಲಿ. ಅದನ್ನು ಕೊಡುವೆ.' ಎಂದರು."

"ಲಕ್ಷ್ಮೀದೇವಿ ಇದನ್ನು ಒಪ್ಪಿಕೊಂಡರೆ ?"

"ಮನೆಗಳನ್ನು ತನ್ನ ಹೆಸರಿಗೆ ಮಾಡಿದ್ದು ತನಗೆ ಗೊತ್ತಿಲ್ಲ ಎಂದರು. ಅದಕ್ಕೆ ಅವರ ವಕೀಲ ಕಾಗದ ಪತ್ರಗಳನ್ನು ಬೇಡಿದ. ಬಡೇದಾದಾ ಅವನ್ನು ಕೊಟ್ಟರು. ವಕೀಲ ಎಲ್ಲ ಸರಿ ಇರುವುದನ್ನು ನೋಡಿ ಮಾಯೀಜಿಗೆ ತಿಳಿಸಿದ. ಆಗ ಬಡೇದಾದಾ ಮಾಯೀಜಿಗೆ ಒಂದು ಮಾತು ಹೇಳಿದರು. 'ಈ ಕಾಗದಗಳಿಗಾಗಿ ಇಷ್ಟು ದ್ರವಿಡ ಪ್ರಾಣಾಯಾಮವೇಕೆ ಬೇಕಿತ್ತು? ನೀನು ರಾಮಶರಣನನ್ನು ಕಳಿಸಿದ್ದರೂ ನಾನು ಕೊಟ್ಟುಕಳಿಸುತ್ತಿದ್ದೆನಲ್ಲ' ಎಂದರು."

". . . ."

"ಆದಿನ ರಾತ್ರಿ ಇಡೀ ಬಡೇದಾದಾ ಸಿತಾರು ಬಾರಿಸಿದರು. ಈಗಲೂ ಅವರು ಗಂಭೀರವಾಗಿರುತ್ತಾರೆ. ರಾಧಾರಾಣಿಯೊಂದಿಗೂ ಎಂದೂ ನಗುತ್ತಾ ಇರುವುದನ್ನು ನಾನು ಕಂಡಿಲ್ಲ. ಭವಿಷ್ಯವೇನಿದೆಯೊ ಗೊತ್ತಿಲ್ಲ."

"ರಾಮಶರಣ, ಮುಂದಿನ ಸಲ ಬಂದಾಗ ನಾನು ನಿನ್ನ ಬಡೇದಾದಾರನ್ನು ಕಾಣಬೇಕೆಂದಿದ್ದೇನೆ. ಭೆಟ್ಟಿ ಮಾಡಿಸುತ್ತೀಯಾ ?"

"ಮಾಡಿಸುತ್ತೇನೆ. ಆದರೆ ಬಡೇದಾದಾ ನಿಮ್ಮೊಂದಿಗೆ ಬಹಳ ಹೊತ್ತು ಮಾತಾಡುತ್ತ ಕೂಡಬಹುದೆಂದು ನನಗನಿಸುವುದಿಲ್ಲ."

"ಆದರೂ ಅಡ್ಡಿ ಇಲ್ಲ."

ಆ ಮೇಲೆ ಮತ್ತೆ ಆರು ತಿಂಗಳ ನಂತರ ನಾನು ಕಲಕತ್ತೆಗೆ ಹೋದಾಗ ಕೆಳಗಿನ ಬ್ಲಾಕಿನಲ್ಲಿ ಯಾರೋ ಬೇರೆಯವರು ಬಾಡಿಗೆದಾರರು ಬಂದದ್ದು ಕಂಡುಬಂತು. ನನ್ನ ಬ್ಲಾಕಿನ ಕೀಲಿಕೈ ಆಫೀಸಿನಿಂದ ತರಿಸಿಕೊಂಡು ನಾನು ಒಳಗೆ ಹೋದೆ. ರಾಮಶರಣನೂ ಈಗ ಅಲ್ಲಿ ಕೆಲಸಕ್ಕಿಲ್ಲವೆಂದು ತಿಳಿಯಿತು. ಅವನ ಬದಲು ಬೇರೆ ಒಬ್ಬ ಹುಡುಗ ಬಂದಿದ್ದ. ಅವನನ್ನು ಕೇಳಿದೆ. ರಾಮಶರಣ ಈಗ ರಿಸಾಲ ಮುಹಲ್ಲಾದಲ್ಲಿ ಇರುತ್ತಾನೆಂದು ಆತ ಹೇಳಿದ. ಆವನಿಗೆ ಎರಡು ರೂಪಾಯಿ ಕೊಟ್ಟು ರಾಮಶರಣನನ್ನು ಕರೆದುಕೊಂಡು ಬರಲು ಹೇಳಿದೆ. ಎರಡು ದಿವಸದ ನಂತರ ರಾಮಶರಣನನ್ನು ಕರೆದುಕೊಂಡುಬಂದ.

"ಚೆನ್ನಾಗಿದ್ದೀಯಾ"? ನಾನು ಕೇಳಿದೆ.

"ಬಡವನ್ನ ಮರೆತಿಲ್ಲಲ್ಲ ಸ್ವಾಮಿ." ಎಂದ.

"ಏನೋ ರಾಮಶರಣ, ನಿಮ್ಮ ಮಾಯೀಜೀ ಇರುತ್ತಿದ್ದ ಬ್ಲಾಕಿನಲ್ಲಿ ಬೇರೆಯೆ ಯಾರೋ ಇದ್ದಾರಲ್ಲ!" ಎಂದೆ.

"ಈಗ ಅವರು ಮೇಲೆ ಇರುತ್ತಾರೆ."

"ಅಂತೂ ಸುಖಾಂತವಾಯ್ತು ಈ ತಂಟೆ!"

"ಇಲ್ಲ ಬಾಬೂಜೀ, ಬಡೇದಾದಾ ಈ ಚಾಳನ್ನೇ ಬಿಟ್ಟು ಹೋಗಿದ್ದಾರೆ."

"ಎಲ್ಲಿ?"

"ಎಲ್ಲಿಗೊ?"

ಒಂದು ದೀರ್ಘ ನಿಃಶ್ವಾಸ ಎಳೆದು ಆತ ಹೇಳಲಾರಂಭಿಸಿದ. ಅದರ ಸಾರ ಹೀಗೆ:—

"ನೀವು ಹೋದ ಮೇಲೆ ಬಡೇದಾದಾ ಎಲ್ಲಿಯೊ ಹೋದರು. ಕೆಲ ದಿನಗಳ ನಂತರ ಮತ್ತೆ ಬಂದರು. ಬಂದವರು ಇಲ್ಲಿ ಇರದೆ ರಾಧಾರಾಣಿಯನ್ನು ಕರೆದುಕೊಂಡು ಹೋದರು. ಆ ಮೇಲೆ ರಾಧಾರಾಣಿಯ ಲಗ್ನವಾಯಿತೆಂದು ತಿಳಿಯಿತು. ತಮ್ಮ ಕಡೆಗೆ ಉಳಿದಿದ್ದ ಹಣವನ್ನೆಲ್ಲ ರಾಧಾರಾಣಿಗೆ ಕೊಟ್ಟರಂತೆ. ತಿರುಗಿ ಬಂದಾಗ ತೀರ ಸೋತು ಹೋಗಿದ್ದರು ಬಡೇದಾದಾ. ಮಾಯೀಜೀ ಅವರು ಬರುವುದನ್ನೇ ಕಾದಿದ್ದರೇನೊ. ಬಂದ ಕೂಡಲೆ ಕೇಳಿದರು.

"'ಸುದ್ದಿ ನಿಜವೇನರಿ?'

"'ಯಾವ ಸುದ್ದಿ?'

"'ರಾಧಾರಾಣಿಯ ಲಗ್ನದ ಸುದ್ದಿ.'

"'ನಿಜ.'

"'ಒಂದು ಮಾತನ್ನು ಕೇಳುತ್ತೇನೆ. ಇದ್ದಕ್ಕಿದ್ದಂತೆ ಹೇಳಬಲ್ಲಿರಾ?'

"'ನಾನು ಯಾವತ್ತೂ ಸತ್ಯವನ್ನೇ, ಹೇಳುತ್ತ ಬಂದಿದ್ದೇನೆ.'

"'ಅವಳು ನಿಜವಾಗಿಯೂ ನಿಮ್ಮ—'

"'ಲಕ್ಷ್ಮೀ, ಆಗಲೇ ನಿನಗೆ ಹೇಳಿರಲಿಲ್ಲವೆ –ಅವಳು ನನ್ನ ಒಬ್ಬ ಮಿತ್ರನ ಮಗಳೆಂದು?'

"'ಯಾವ ಮಿತ್ರ?'

"'ಇದ್ದ ಒಬ್ಬ....ಲಕ್ಷ್ಮೀ, ಪತ್ನಿಯ ಅಧಿಕಾರ ಹಿರಿದು. ನಿಜ, ಆದರೆ ಅದರೊಟ್ಟಿಗೇ ಮನುಷ್ಯನಿಗೆ ಇನ್ನಿತರ ಸಂಬಂಧಗಳೂ ಇರುತ್ತವೆಂಬುದನ್ನೂ ನಾವು ಅಲ್ಲಗಳೆಯುವಂತಿಲ್ಲ. ನೀನು ಲಗ್ನವಾಗಿ ಈ ಮನೆಗೆ ಬರುವ ಮುಂಚೆ ನಿನ್ನ ಗಂಡ ಭಾವನೆಯ ದೃಷ್ಟಿಯಿಂದ ಅನಾಥನಿದ್ದ. ಆತ್ಮೀಯತೆ, ವಾತ್ಸಲ್ಯಗಳಿಗೆ ಎರವಾಗಿ ಈ ತುಂಬಿದ ಜಗತ್ತಿನಲ್ಲಿ ಬರಿದಾಗಿ ಅಲೆಯುತ್ತಿದ್ದ. ಅವನ ಅಂತಃಕರಣದ ತೃಷೆಯನ್ನು ತೀರಿಸಲು ಯಾವ ಪ್ರೇಮದ ಆಸರೆಯೂ ಇರಲಿಲ್ಲ. ಆಗ ಆ ಅನಾಥ ಅಂತಃಕರಣಕ್ಕೆ ಪ್ರೀತಿಯ ಆಸರೆ ಇತ್ತು, ತೃಷೆಯನ್ನು ಹಿಂಗಿಸಿ ಸಲುಹಿದ ಸ್ನೇಹಿತನೊಬ್ಬನಿದ್ದ. ಅವನ ಅಂತ್ಯಕಾಲಕ್ಕೆ ತನ್ನ ಒಬ್ಬಳೇ ಒಬ್ಬ ಮಗಳನ್ನು ಆತ ಅನಾಥಳನ್ನಾಗಿ ಮಾಡಿ ಹೋಗುವುದರಲ್ಲಿದ್ದ. ಆ ಹಿಂದಿನ ನೆನಪು ಮರುಕಳಿಸಿತು. ನಾನು ಹೋದೆ. ಆ ಮಗಳನ್ನು ನನ್ನ ಮಗಳೆಂದು ಸಾಕುವೆನೆಂದು ಕರೆದುಕೊಂಡು ಬಂದೆ. ತಂದೆ ಸತ್ತ ಮೇಲೆ ನನ್ನ ಬಳಿ ಇರುವ ಆ ಹುಡುಗಿಗೆ ನಿನ್ನ ವಾತ್ಸಲ್ಯದ ಆಶ್ರಯ ಬೇಕಾಗಿತ್ತು. ಆದರೆ ಸ್ತ್ರೀಯಾದರೂ ನಿನಗೆ ಇದು ತಿಳಿಯಲಿಲ್ಲ. ರಾಧಾರಾಣಿ ಎಷ್ಟೊಂದು ಯಾತನೆಯಲ್ಲಿ ತನ್ನ ದಿನಗಳನ್ನು ಕಳೆದಿರಬೇಕೆಂದು ನೀನರಿಯೆ.'

"'ಇದನ್ನು ನೀವು ಮೊದಲೇ ಹೇಳಿದ್ದರೆ—'

"'ಹೇಳಿದ್ದರೆ ನೀನು ನಂಬುತ್ತಿರಲಿಲ್ಲ. ನಂಬುವಂತಿದ್ದರೆ ನಾನು ಮೊದಲು ಹೇಳಿದ್ದನ್ನೇ ನೀನು ನಂಬಬಹುದಿತ್ತು. ಲಕ್ಷ್ಮೀ, ಲಗ್ನದಲ್ಲಿ ಹಾಕಿದ ಸೆರಗಿನ ಗಂಟು ಮನಸ್ಸುಗಳನ್ನು ಕೂಡಿಸಿ ಗಂಟು ಹಾಕುವುದು ಎಂದೇನೂ ಇಲ್ಲ. ಅಸೂಯೆ, ಮತ್ಸರ, ಇವು ಸ್ತ್ರೀಗೆ ಒಮ್ಮೊಮ್ಮೆ ಒಪ್ಪುವ ಅಲಂಕಾರವಾಗಬಹುದಾದರೂ ಅವು ತಮ್ಮ ಸೀಮೆ ಮೀರಿ ಹೋದರೆ ಎಲ್ಲವೂ ಘೃಣಾಸ್ಪದವಾಗುತ್ತದೆ. ನೀನು ಆ ಸೀಮೆಗಳನ್ನು ಉಳಿಸಿ

ಕೊಳ್ಳಲಿಲ್ಲ. ನಿನ್ನಿಂದ ಅದು ಆಗಲಿಲ್ಲ !'

"'ನೀವು ಯೋಗ್ಯ ಕಾಲಕ್ಕೆ ತಿದ್ದಿದ್ದರೆ—'

"'ತಿದ್ದಬೇಕಾದಾಗ ಅಷ್ಟರ ಮಟ್ಟಿಗೆ ತಿದ್ದುವವನು ತನ್ನನ್ನು ಪರರ ಕೈಯಲ್ಲಿ ಒಪ್ಪಿಸಿಕೊಳ್ಳಬೇಕಾಗಿರುತ್ತದೆ. ಆಗಿನ ನಿನಗೆ ಬೇರೆಯವರ ಅಗತ್ಯವೆನಿಸಲಿಲ್ಲ.'

"'ನೀವು ಹೊರಿಸುವ ಆರೋಪದ ಸತ್ಯಾಸತ್ಯತೆಯನ್ನು ದೇವರೇ ನಿರ್ಧರಿಸಬೇಕು.'

ಮಾಯೀಜಿ ಕಣ್ಣು ಒರೆಸಿಕೊಂಡರು.

"'ಲಕ್ಷ್ಮೀ, ಈ ನಿನ್ನ ಮಾತು ಅಪ್ರಾಮಾಣಿಕತನದ್ದು. ನಿನ್ನ ಮನಸ್ಸಿಗೆ ನೀನು ಪ್ರಾಮಾಣಿಕಳಾಗಿ ಉಳಿದಿಲ್ಲ. ಇದೊಂದೇ ದುರ್ಗುಣ ಇಷ್ಟೊಂದು ಹಗರಣಕ್ಕೆ ಕಾರಣವಾಯಿತು. ನನ್ನ ಹೆಸರು ಕೆಡಿಸಿದ ಸಮಾಧಾನ ನಿನಗನಿಸಿರಬಹುದು ! ಇದನ್ನು ಸದಾ ನೆನಪಿಟ್ಟುಕೊಳ್ಳಲು ಸಮಾಜಕ್ಕೆ ವೇಳೆ ಇಲ್ಲ ! ಈ ದುಃಖ ಮರೆಯಲಾರದವರು ನಾನು ಮತ್ತು ನೀನು ಇಬ್ಬರೇ!'

"'ಇಷ್ಟಿದ್ದರೂ ನಿಮಗೆ ನನ್ನ ಬಗ್ಗೆ ಕನಿಕರವೆನಿಸುವುದಿಲ್ಲ.'

"'ಈ ನಿನ್ನ ಅಭಿಮಾನ ಮದವನ್ನು ನೀನು ಎಂದಿಗೂ ಬಿಡಲಾರೆಯೇನು?' ಸ್ವಲ್ಪ ತಡೆದು ವ್ಯಥೆಯನ್ನು ನುಂಗಿಕೊಂಡು ಮತ್ತೆ ನುಡಿದರು. 'ಲಕ್ಷ್ಮೀ ನನ್ನ ತಪ್ಪು ತಡೆಗಳನ್ನು ಹುಡುಕುವುದಕ್ಕಿಂತ ನೀನು ಆತ್ಮ ನಿರೀಕ್ಷಣೆಯನ್ನು ಮಾಡಿಕೊ. ಅದರಲ್ಲೇ ಕಳೆದುಕೊಂಡಿರುವುದನ್ನು ನೀನು ಪಡೆಯಬಹುದು.'

"ಆ ಮೇಲೆ ಬಡೇದಾದಾ ಏನೂ ಮಾತಾಡಲಿಲ್ಲ. ಅವರು ಮಾಯೀಜಿಯವರನ್ನು ಕೆಳಗೆ ಬಿಟ್ಟು ಬರಲು ನನಗೆ ಹೇಳಿದರು.

"ಬಡೇದಾದಾ ಬಹಳ ದಿನ ಇಲ್ಲಿ ಇರಲಿಲ್ಲ. ಒಂದು ದಿನ ತನ್ನ ಹಾಸಿಗೆ ಸುತ್ತಿಕೊಂಡು ನಡೆದರು.

"ಯಾವಾಗ ತಿರುಗಿ ಬರುತ್ತೀರಿ, ಎಂದು ಕೇಳಿದೆ.

"ಬಹುಶಃ ಬರಲಾರೆ ಎಂದರು.

"ಮಾಯೀಜೀ ಬಂದರು. 'ಯಾಕೆ ಹೋಗುತ್ತೀರಿ?'

"'ನನಗಿನ್ನು ಬಿಡುಗಡೆಯಾಗಬೇಕು.'

"'ಇದೆಲ್ಲ ನಿಮ್ಮದೆ ಇದೆ.'

"'ಒಮ್ಮೆ ಕೊಟ್ಟದ್ದನ್ನು ಮರಳಿ ಪಡೆಯಲಾರೆ. ಕೊಡುವುದು ನನ್ನ ಧರ್ಮ, ಪಡೆಯುವುದಲ್ಲ. ನನಗೆ ಯಾರಿಂದಲೂ ಏನೂ ಸಿಕ್ಕಿಲ್ಲ.'

"'ರಾಧಾರಾಣಿಯಿಂದ ಸಿಕ್ಕಿರಬಹುದಲ್ಲ!'-

"'ನೋಡಿದೆಯಾ? ಮತ್ತೆ ಆ ಮಾತು. ಹೌದು. ಅವಳಿಂದ ಬಹಳ ಸಿಕ್ಕಿದೆ. ಅಪಮಾನಿತ ಜೀವನವನ್ನು ಉಗುಳ್ನುಂಗಿ ಹೇಗೆ ಸಹಿಸಿಕೊಂಡಿರಬೇಕೆಂಬುದನ್ನು ಆಕೆ ಕಲಿಸಿದ್ದಾಳೆ.'

"'ನಾನು ತಪ್ಪಿದೆ.'

"'ನೀನು ತಪ್ಪಿಲ್ಲ. ನಿನ್ನ ನನ್ನ ಸ್ವಭಾವಗಳು ಭಿನ್ನವಾಗಿವೆ ಅಷ್ಟೇ. ಪಡೆಯುವುದು ನನ್ನ ಗುಣವಲ್ಲದಂತೆ ಕೊಡುವುದೂ ನಿನ್ನ ಗುಣವಲ್ಲ. ಅದು ವಿಧಿಲಿಖಿತ. ಇನ್ನು ಈ ಸ್ವಭಾವವನ್ನು ಬದಲಿಸಬೇಕೆಂದರೆ ಆ ವಯಸ್ಸೂ ನಮ್ಮದಲ್ಲ. ಸುಮ್ಮನೆ ಏಕತ್ರ ಉಳಿದು ಒಬ್ಬರನ್ನೊಬ್ಬರು ವಂಚಿಸುವುದೇಕೆ? ಲಕ್ಷ್ಮೀ, ಕಡೆಯದಾಗಿ ಒಂದು ಮಾತು ಹೇಳುವೆ. ತ್ಯಾಗದಲ್ಲಿ ಶಾಂತಿ ಇದೆ. ಆ ಶಾಂತಿಯನ್ನು ಹೊಂದಲು ಸಾಧ್ಯವಿದ್ದರೆ ನೋಡು. ಪರರಿಗಾಗಿ ಬದುಕಲು ಸಾಧ್ಯವಿದ್ದರೆ ಯತ್ನಿಸು.'

"ಮತ್ತು ನೀವು?'

"'ಎಲ್ಲವನ್ನೇ ಕಳೆದುಕೊಂಡವನಿಗೆ ಏನೂ ಗಳಿಸಬೇಕಾಗಿಲ್ಲ.'

"'ಎಂದೂ ಮರಳಿ ಬರಲಾರಿರಾ? ನಾನು ಒಬ್ಬಳೇ ಹೇಗಿರಲಿ?'

"'ಅಳಬೇಡ. ಕೋರ್ಟಿನಲ್ಲಿ ಕಾದುತ್ತಿದ್ದಾಗ ಯಾವ ಸಾಹಸದಿಂದ ಒಬ್ಬಳೇ ಇದ್ದೆಯೋ ನೆನಿಸಿಕೊ. ಆಗ ನಿನ್ನ ಬಗ್ಗೆ ನನಗೆ ಎನಿಸಿತ್ತು—'

"'ಹಾಗೆ ಹೇಳಬೇಡಿ. ನಿಮ್ಮನ್ನು ಬಿಟ್ಟರೆ

ಈ ಮನೆಗೆ ಏನು ಶೋಭೆ ?'

"'ಹೌದು. ಶೋಭೆಯೆಂದೆ ನಿನಗೆ ನಾನು ಬೇಕಾಗಿದ್ದದ್ದು. 'ನನ್ನ' ಅಗತ್ಯ ನಿನಗೆ ಎಂದೂ ಅನ್ನಿಸಿಲ್ಲ. ಆದರೆ ಶೋಭೆಗಾಗಿ ಹಚ್ಚಿದ ಗಿಡಗಳನ್ನೂ ಜೋಪಾನಿಸಬೇಕು. ಇಲ್ಲವಾದರೆ ಅವೂ ಒಣಗುವವು ಎಂಬುದನ್ನು ತಿಳಿ.'

"'ನೀವೇ ನನ್ನ ದೇವರು. ನೀವೇ ನನ್ನನ್ನು ಹೀಗೆ ಒಗೆದು ಬಿಟ್ಟರೆ ನಾನು ಬೇರಾರಿಗೆ ಮೊರೆಹೊಗಲಿ?'

"'ತಪ್ಪಿದರೇನೆ ಕ್ಷಮೆಯ ಮಾತು ನೀನು ತಪ್ಪಿಯೇ ಇಲ್ಲ ನೋಡು ಲಕ್ಷ್ಮೀ, ಮನಸ್ಸು ಬಲು ಸೂಕ್ಷ್ಮವಾದದ್ದು. ಈ ನನ್ನ ಸಿತಾರಿನ ತಂತಿಗಳು ಸರಿಯಾಗಿದ್ದರೂ ಅದರ ಈ ಕೆಳಗಿನ 'ಕಾಯ'ವು ಸ್ವಲ್ಪ ಭಂಗವಾದರೆ ಇದು ಇಂಪಾದ ಸ್ವರ ನೀಡಲಾರದು ಹೋಗುವಾಗ ನಿನ್ನಲ್ಲಿ ಸಿಟ್ಟಿಲ್ಲ ಲೋಭ ಕ್ರೋಧಗಳನ್ನು ನಾನೆಂದೊ ದಾಟಿದ್ದೇನೆ. ನಿನ್ನ ನೂರುಪಟ್ಟು ದುಃಖ ನನಗೂ ಆಗುತ್ತಿದೆ. ನನ್ನ ಸ್ವಪ್ನಗಳು ನಿರಾಶೆಯಲ್ಲಿ ಹರಿದು ಹೋಗುತ್ತಿವೆ. ಹೋಗಲಿ. ನಾನು ಎಲ್ಲಿ ಹೋಗಬೇಕೆಂಬುದನ್ನು ನಿರ್ಣಯಿಸಿಕೊಂಡಿಲ್ಲ. ನನ್ನ ವಿಸಂಗತ ಜೀವನದ ತಾಪ ಈ ಸಿತಾರಿಗೆ ಬೇಡ. ಯಾರ ಅಕಲ್ಯಾಣವನ್ನೂ ಮಾಡದ ನನ್ನ ಕೈ ಈ ಸಿತಾರನ್ನಾದರೂ ಕಷ್ಟಕ್ಕೀಡು ಮಾಡುವುದು ಏಕೆ? ..ರಾಮಶರಣ, ನಡೆ. ನನ್ನ ಸಾಮಾನು ಎಲ್ಲಿ?'—

"ಮಾಯೀಜೀ ಬಹಳ ಅತ್ತರು. ಬಡೇದಾದಾ ಗೇಟು ದಾಟುವ ಮೊದಲೊಮ್ಮೆ ಹೊರಳಿನೋಡಿದರು. ಮಾಯೀಜಿಯ ಕಣ್ಣೀರು ಕಟ್ಟೆ ಒಡೆದು ಹರಿಯುತ್ತಿತ್ತು.

"ಸಾಮಾನನ್ನು ರಿಕ್ಷಾದಲ್ಲಿ ಇಟ್ಟು ನಾನು ಅವರ ಕಾಲು ಮುಟ್ಟಿದೆ. ಕಾಲುಗಳನ್ನು ಹಿಂದೆ ಸರಿಸಿಕೊಂಡು ಬಡೇದಾದಾ, 'ರಾಮಶರಣ, ನನಗಿಂತ ನೀನು ದೊಡ್ಡವನು. ನಾನೇ ನಿನಗೆ ನಮಸ್ಕರಿಸಬೇಕು. ನನ್ನನ್ನು ನೀನು ಆಶೀರ್ವದಿಸು' ಎಂದರು. ಅವರ ಕಣ್ಣಲ್ಲೂ ನೀರು ನಿಂತಿದ್ದವು. ಇಡೀ ಚಾಳಿನ ಜನರೆಲ್ಲ ಸ್ತಂಭೀಭೂತರಾಗಿ ನಿಂತು ನೋಡುತ್ತಿದ್ದರು."

ರಾಮಶರಣನ ಮಾತು ಮುಗಿದ ಮೇಲೆ ಎರಡು ನಿಮಿಷ ಯಾರೂ ಮಾತಾಡಲಿಲ್ಲ. ನಾನೇ ಮೌನವನ್ನು ಒಡೆದೆ.

"ರಾಮಶರಣ, ಹಾಗಾದರೆ ಈಗ ಸಿತಾರನ್ನು ಯಾರು ಬಾರಿಸುತ್ತಾರೆ?"

"ಮಾಯೀಜಿ!"

ಹೂವಿನ ಗಿಡಗಳು ಈಗ ಒಣಗಿಹೋಗಿವೆ.

"ರಾಮಶರಣ, ನೀನು ಚಾಕರಿ ಬಿಟ್ಟಿದ್ದೇಕೆ?"

"ವಯಸ್ಸಾಯಿತಲ್ಲ."

"ಸುಳ್ಳು."

"ಬಡೇದಾದಾ ಹೋದ ಮೇಲೆ ನನಗೆ ಇಲ್ಲಿ ಬರಲಿಕ್ಕೂ ಆಗದಂತಾಯಿತು." *



"ಅಮ್ಮಾ, ಹೊರಗೆ ನೋಡು. ರಸ್ತೆಯಲ್ಲಿ ಆನೆಯಂಥ ಆಡು ಹೋಗುತ್ತಿದೆ."

"ರಾಮು, ಯಾವಾಗಲೂ ಯಾಕೆ ಹೀಗೆ ಅತಿಶಯೋಕ್ತಿಯನ್ನಾಡುತ್ತಿ? ಹಾಗೆ ಮಾಡುವುದು ಒಳ್ಳೆಯದಲ್ಲ ಎಂದು ನಾನು ನಿನಗೆ ಒಂದೆರಡು ಕೋಟಿ ಸಲವಾದರೂ ಹೇಳಿರಬೇಕು."

ಮಕ್ಕಳನ್ನು
ಪಡೆಯುವದಕ್ಕಾಗಿ
ತಂದೆಯನ್ನು
ಬಲಿಕೊಡಬೇಕಾದಂಥ
ಪ್ರಸಂಗ ಇಂದು
ಜಗತ್ತಿನ ಮುಂದಿದೆ

# ನ್ಯೂಬಿಯ ನಿಧಿ



**ಮೂರ್ತಿಯ ಪಾದಗಳ ಮೇಲೆ ಕುಳಿತಿರುವ ಮನುಷ್ಯನ ಮೂಲಕ ಅದರ ಅದ್ಭುತ ಗಾತ್ರವನ್ನು ಊಹಿಸಿಕೊಳ್ಳಬಹುದು**

ಪುತ್ರಪ್ರಾಪ್ತಿಗಾಗಿ ಅನಂತ ಕಾಲ ತಪಿಸಿದ ಮೇಲೆ ದೇವರು ಪ್ರತ್ಯಕ್ಷನಾಗಿ "ನಿನಗೆ ಮಕ್ಕಳು ಬೇಕಿದ್ದರೆ ನಿನ್ನ ತಂದೆ ತಾಯಿಗಳ ರುಂಡಗಳನ್ನು ತರಿದು ತಾ" ಎಂದು ಹೇಳಿದರೆ ಎಂಥ ಉಭಯ ಸಂಕಟ ಎದುರಾಗುವುದೋ ಅಂಥದೇ ಪ್ರಸಂಗಕ್ಕೆ ಇಂದು ಮಾನವ ಕುಲ ಸಿಲುಕಿದೆ. ಐವತ್ತು ಶತಮಾನಗಳಿಂದ ಇಜಿಪ್ತಿಗೆ ವರಪ್ರಸಾದ ಕೊಟ್ಟು ಪೋಷಿಸಿದ ನೈಲ್ ನದಿಯನ್ನು ಅದರ ನೀರಿನಿಂದ ಬದುಕುವ ಜನರು ಹೆಚ್ಚುತ್ತಿರುವ ಜನಸಂಖ್ಯೆಯ ಉದರಂಭರಣಕ್ಕಾಗಿ ಇನ್ನೂ ಹೆಚ್ಚು ನೀರು ಕೊಡೆಂದು ಕೇಳುತ್ತಿದ್ದಾರೆ. ಈ ಹಾರೈಕೆಗೆ ಅಭಿವಚನವಾಗಿ ಅಸ್ವಾನ್ ಉಚ್ಚ ಅಣೆಕಟ್ಟಿನ ಯೋಜನೆ ರೂಪುಗೊಂಡಿದೆ. ಹತ್ತು ವರ್ಷಗಳಲ್ಲಿ ೮೦ ಲಕ್ಷ ಹೆಚ್ಚಿನ ಜನರಿಗೆ ಅದು ಅನ್ನ ಕೊಡಬಹುದಾಗಿದೆ; ೩೦೦ ಮೈಲುದ್ದದ ಪ್ರದೇಶದಲ್ಲಿ ಅದು ಸಂಚಾರಕ್ಕೆ ಜಲ ಮಾರ್ಗವನ್ನು ಕೊಡಬಹುದಾಗಿದೆ. ಸುಡುಬಿಸಿಲಿನ ಬರಡು ನಿರ್ಜನ ಪ್ರದೇಶದಲ್ಲಿ

'ಯುನೆಸ್ಕೊ ಕೋರಿಯರ್' ಆಧಾರದಿಂದ

ಧಾನ್ಯದ ಕಣಜವನ್ನು, ವಿದ್ಯುತ್ತಿನ ಸೌಕರ್ಯವನ್ನು ದಾನ ಮಾಡಬಹುದಾಗಿದೆ. ಅದಕ್ಕೆ ಪ್ರತಿಯಾಗಿ ೩,೦೦೦ ವರ್ಷದ ಇತಿಹಾಸವನ್ನೇ ಬಲಿ ಕೊಡೆಂದು ನೈಲ್ ದೇವತೆ ಬೇಡುತ್ತಿದೆ ಅಷ್ಟೇ.

ಜಗತ್ತಿನ ಅತಿ ಪ್ರಚಂಡ ಅಣೆಕಟ್ಟುಗಳಲ್ಲೊಂದಾಗಿರುವ ಅಸ್ವಾನ್ ಪೂರ್ಣವಾದಾಗ ಮುಳುಗಡೆಯಾಗಲಿರುವ ೩೦೦ ಮೈಲುದ್ದದ ಪ್ರದೇಶದಲ್ಲಿ ಜಗತ್ತಿನ ಪ್ರಾಚೀನತಮ ನಾಗರಿಕತೆಯೊಂದರ ಶ್ರೇಷ್ಠತಮ, ಪ್ರಚಂಡತಮ, ಸುಂದರತಮ ಕುರುಹುಗಳು ಕೆಲವು ನೂರಾರಡಿ ನೀರಿನ ಗರ್ಭವನ್ನು ಸೇರಲಿವೆ ೨೦ಕ್ಕೂ ಹೆಚ್ಚು ದೇವಾಲಯಗಳು, ಉದ್ದಾಮ ಶಿಲಾಮೂರ್ತಿಗಳು, ಕಲ್ಮನೆಗಳು, ಕೆತ್ತನೆಗಳು, ಭಿತ್ತಿ ಚಿತ್ರಗಳು (ಮೂರು ಸಾವಿರ ವರ್ಷಗಳ ನಂತರ ಅವುಗಳ ಬಣ್ಣ ಹಾಗೇ ಇದೆ) ಅವುಗಳಲ್ಲಿವೆ. ಪ್ರಾಚೀನ ಧರ್ಮ, ಇತಿಹಾಸ, ವಿದ್ಯೆ, ವ್ಯಾಪಾರ, ಕಲೆ, ಉದ್ಯಮ ಇವೆಲ್ಲವುಗಳ ಕಥೆಯನ್ನು ಮೌನವಾಗಿ ಹೇಳುವ ಅವಶೇಷಗಳು ಇವು.

ನ್ಯೂಬಿಯ ಎಂದು ಹೆಸರಾದ ಈ ಪ್ರದೇಶದಲ್ಲಿ ತ್ರಿಲೋಕವೀರ ಹೋರಸನಿಗೆ ಐಸಿಸ್ ಜನ್ಮವಿತ್ತ ಸ್ಥಾನವಾದ ಮಾತಾದ್ವಾರ (ಮಮ್ಮಿ-ಸ್‌ಗೇಟ) ಇದೆ; ಇಲ್ಲಿ ಸ್ವಯಂ ವಿದ್ಯಾದೇವತೆ ಥೋಡ್ ಬರೆದ ಅಮೃತ ವಚನಗಳಿಗೆ ದೇವತೆಗಳು ಅಂಕಿತವಿಕ್ಕಿದ ಬರಹವಿದೆ; ಇಲ್ಲಿನ ಪ್ರಾಚೀನ ಗುಡಿಯಲ್ಲಿ ಕವಿಗಳ ಕಾವ್ಯ ಸೆಲೆಯನ್ನು ಚಿಮ್ಮಿಸಿದ ಲಾವಣ್ಯವತಿ ನೆಫರ್ಟಟಿ ನವತರುಣಿ ಕುವಲಯ ಕಾಂತಿಯನ್ನು ಸೂಸುತ್ತ ಮೂರ್ತಿ ರೂಪಿಯಾಗಿ ನಿಂತಿದ್ದಾಳೆ; ಅವಳಿಂದ ನೂರೇ ಹೆಜ್ಜೆ ದೂರದಲ್ಲಿ ಅವಳ ಗಂಡ ಪ್ರತಾಪ ಕಂಠೀರವ ರ್‍ಯಾಮೆಸೆಸ್ ಕುಳಿತಲ್ಲೇ ೬೭ ಅಡಿ ಎತ್ತರದ ಭವ್ಯ ವಿಗ್ರಹಗಳಿವೆ; ಇಲ್ಲಿ ಪ್ರಾಚೀನ ಇಜಿಪ್ಟಿನ ವೈಭವಶಾಲಿ ರಾಜಧಾನಿ ಥೀಟ್ಸ್ ಇದೆ....

ಇವನ್ನೆಲ್ಲ ಮಾನವ ಸುಮ್ಮನೆ ಬಲಿ ಕೊಡಬೇಕೆ? ಅದು ಬಲಿ ಕೊಡಲಾರದಷ್ಟು ಅಮೂಲ್ಯವಾದ ನಿಧಿ. ಆದರೂ ಅದನ್ನು ಉಳಿಸಬೇಕಾದರೆ ಕೂಡಲೆ, ತ್ವರೆಯಾಗಿ ಕೆಲಸವಾಗಬೇಕು. ಅಸ್ವಾನ್ ಉಚ್ಚ ಅಣೆಕಟ್ಟು ಕಳೆದ ವರ್ಷ ಜನವರಿಯಲ್ಲಿ ಪ್ರಾರಂಭವಾಗಿದೆ. ೧೯೬೩-೬೪ ರೊಳಗೆ ಅದು ಮುಗಿಯುವುದು. ಮುಗಿದು ಹೋದರೆ ಆಮೇಲೆ ಎಲ್ಲವೂ ಕೈಬಿಟ್ಟಂತೆ.

೧೯೦೨ ರಲ್ಲಿ ಕಟ್ಟಿ ಆಗಾಗ ಏರಿಸಲ್ಪಟ್ಟ ಅಸ್ವಾನ್ ನೀಚ ಅಣೆಕಟ್ಟಿನ ದೆಸೆಯಿಂದ ಆಗಲೆ ಅನೇಕ ಅವಶೇಷಗಳು ಮುಳುಗಿ ಹೋಗಿ ಬೇಸಗೆಯಲ್ಲಿ ನೀರು ಬತ್ತಿದಾಗ ಮಾತ್ರ ತಲೆ ತೋರಿಸುತ್ತಿವೆ.

ಸಂಯುಕ್ತ ರಾಷ್ಟ್ರ ಸಂಘದ ಶೈಕ್ಷಣಿಕ ವೈಜ್ಞಾನಿಕ, ಸಾಂಸ್ಕೃತಿಕ ಸಂಸ್ಥೆಯು (ಯುನೆಸ್ಕೊ) ನ್ಯೂಬಿಯದ ನಾಶವಾಗಲಿರುವ ಈ ನಿಧಿಯನ್ನುಳಿಸಬೇಕೆಂಬ ಇಜಿಪ್ತ, ಸುದಾನಗಳ ಮೊರೆ ಕೇಳಿ ಐದು ವರ್ಷ ಕಾಲ ಫ್ರಾನ್ಸಿನ ರಾಷ್ಟ್ರೀಯ ಭೌಗೋಲಿಕ ಸಂಸ್ಥೆಯೊಡನೆ ಸಹಕರಿಸಿ ಈ ಪ್ರದೇಶದ ಫೋಟೋಗಳನ್ನು ತೆಗೆಯಿತು; ಉತ್ಖನನ ಹೊಂದಿದ ಹಾಗು ಹೊಂದಬೇಕಾದ ಅವಶೇಷಗಳ ವಿವರಗಳನ್ನು ಕಲೆಹಾಕಿದರು. ಕಳೆದ ಮಾರ್ಚಿನಲ್ಲಿ ಯುನೆಸ್ಕೋ ಆಶ್ರಯದಲ್ಲಿ ಸೇರಿದ ಸಕಲ ರಾಷ್ಟ್ರಗಳ ಪರಿಷತ್ತಿನಲ್ಲಿ ಯುನೆಸ್ಕೋದ ನಿರ್ದೇಶಕರಾದ ಡಾ. ವಿಟ್ಟೊರಿಯೊ ವೆರೊನಿಸೋ ಅವರು ಮಾನವಕುಲಕ್ಕೇ ಮಹತ್ವದವಾದ ಈ ಅವಶೇಷಗಳನ್ನು ಉಳಿಸಲು ಧನ ಸಹಾಯಕ್ಕಾಗಿ ಪ್ರಾರ್ಥಿಸಿದರು.

ಆದರೆ ವರುಣನ ಬಾಯಿಂದ ಇವುಗಳನ್ನುಳಿಸಲು ಸಾಧ್ಯವೆ? ಅದು ಅಗಾಧ ಕಾರ್ಯ. ವೆಚ್ಚಕ್ಕೆ ರೂ. ೪೦ ಕೋಟಿ ಬೇಕಾದೀತು. ಆದರೆ ಪ್ರಯತ್ನದಿಂದ ಬಹು ಭಾಗವನ್ನು ಉಳಿಸಲು ಸಾಧ್ಯವಿದೆ. ಇಜಿಪ್ತನಲ್ಲಿ ೧೪೦ ಮೈಲು,

ಸುದಾನನಲ್ಲಿ ೧೨೦ ಮೈಲು ವಿಸ್ತರಿಸಿರುವ ನ್ಯೂಬಿಯಕ್ಕೆ ಹೋಗಲು ಇಜಿಪ್ತಿನ ಪುರಾತತ್ವ ಶೋಧನ ಸಂಸ್ಥೆಯು ಜಲ ಸಾರಿಗೆ ಸೌಕರ್ಯವನ್ನೊದಗಿಸುತ್ತಿದೆ. ಅವಶೇಷಗಳನ್ನುಳಿಸಲು ಬೇಕಾದ ಹಣ ತನ್ನಲ್ಲಿಲ್ಲದ್ದರಿಂದ ಅತಿ ಮಹತ್ವದ ಅವಶೇಷಗಳನ್ನು ಮಾತ್ರ ಇಜಿಪ್ತಿನಲ್ಲಿ ಉಳಿಸಿ ಉಳಿದದ್ದರಲ್ಲಿ ಅರ್ಧವನ್ನು ಸಹಾಯ ನೀಡುವ ವಿದೇಶಗಳಿಗೆ ಸಾಗಿಸಲು ಅದು ಅನುಮತಿ ನೀಡಿದೆ. ಈಗ ಅಲ್ಲಿ ಒಂದೊಂದು ಅಂಗುಲ ಸ್ಥಳದ ಪರಿಶೀಲನೆ ನಡೆದಿದೆ.

ದುಃಖದ ಸಂಗತಿಯೆಂದರೆ ಆಧುನಿಕ ಮಾನವನಿಗೆ ಈ ಪ್ರಾಚೀನ ಅವಶೇಷಗಳನ್ನು ಅಭ್ಯಸಿಸಲು, ಅರಿತುಕೊಳ್ಳಲು ಸಾಕಷ್ಟು ಸಮಯ ಕೂಡ ದೊರೆತಿಲ್ಲ. ಯುರೋಪಿಯನ್ನರು ಈ ದುರ್ಗಮ, ಉರಿ ಬಿಸಿಲಿನ, ಮರುಳುಗಾಡಿನ ಪ್ರದೇಶದಲ್ಲಿ ಕಾಲಿರಿಸಿದ್ದೇ ೧೮೧೨ ರ ನಂತರ. ಇಸ್ಲಾಂಧರ್ಮ ಸ್ವೀಕರಿಸಿ ಉತ್ಸಾಹದಲ್ಲಿ ಅರಬ ಜಗತ್ತಿನಲ್ಲಿ ಸಂಚರಿಸಿದ ಜಾನ್ಸನ್ ಲುಡ್ವಿಗ್ ಬರ್ಕ್‌ಹರ್ಡ್ಟ್ (ಇಬ್ರಾಹಿಮ್ ಇಬ್ನ್ ಅಬ್ದುಲ್ಲಾ) ಎಂಬ ಯುರೋಪಿಯನ್ ಶೋಧಕ ನೈಲ್ ನದಿಯ ಗುಂಟ ದಕ್ಷಿಣಕ್ಕೆ ಪ್ರವಾಸ ಮಾಡಿ ಚರಿತ್ರ ಪ್ರಸಿದ್ಧ ಅಬು ಸಿಂಬೆಲ್ ಕಲ್ಮನೆಗಳನ್ನು ೧೮೧೩ ರಲ್ಲಿ ಅಮಿತ ಶ್ರಮದ ನಂತರ ಕಂಡುಹಿಡಿದ. ಶತಮಾನಗಳ ಮಳಲು ಬಿರುಗಾಳಿಯಿಂದ ಈ ಕಲ್ಮನೆಗಳೆಲ್ಲ ಮಳಲ ರಾಶಿಯಲ್ಲಿ ಮುಚ್ಚಿ ಹೋಗಿದ್ದವು.

ಮಳಲನ್ನು ಅಗೆಯುಲು ಹಲವು ಪ್ರಯತ್ನಗಳಾದವು. ಆದರೆ ಅದು ಮತ್ತೆ ಮತ್ತೆ ತುಂಬಿತು. ೧೮೯೨ ರಲ್ಲಿ ಮಳಲನ್ನು ತಡೆಯಲು ಒಂದು ಅಡ್ಡಗೋಡೆಯನ್ನೇ ಕಟ್ಟಿದರು. ಆದರೂ ಉಪದ್ರವ ನಿಲ್ಲಲಿಲ್ಲ. ಉಸುಬನ್ನು ಪೂರ್ತಿ ಜಯಿಸಿದ್ದು ೧೯೧೦ ರಲ್ಲೇ. ಅವರು ಅದರ ಕೆಳಗೆ ಎಂಥ ಅದ್ಭುತ ಶಿಲಾ ರಚನೆಯನ್ನು ಕಂಡರು! ಅಬು ಸಿಂಬೆಲ್‌ನ ಮುಂದೆ ಅವರು ಪ್ರಕಾಶಕ್ಕೆ ತಂದ ರ್‍ಯಾಮ್ಸೆಸನ ನಾಲ್ಕು ಪ್ರತಿಮೆಗಳು ಎದೆಗೆಡಿಸುವಷ್ಟು ಅದ್ಭುತವಾಗಿದ್ದವು. ಅವುಗಳ ತುಟಿಯೇ ೪೨ ಇಂಚು ಅಗಲ, ಕಿವಿಯಿಂದ ಕಿವಿಗೆ ಅಂತರ ೧೩ ಅಡಿಯಾಗಿದ್ದವು! ಅಂದಿನಿಂದ ೫೦ ವರ್ಷ ಕಳೆದಿದೆಯಷ್ಟೆ. ಎಲ್ಲವೂ ನೀರು ಪಾಲಾಗುವ ಭಯ ತಲೆದೋರಿದೆ.

ನ್ಯೂಬಿಯಾದ ನಿಧಿಗಳನ್ನುಳಿಸಬೇಕಾದರೆ ಪ್ರಚಂಡವಾದ ಎಂಜನಿಯರಿಂಗ್ ವಿದ್ಯೆಯ ನೆರವು ಬೇಕಾದೀತು. ಜಗತ್ತಿನ ಪ್ರಥಮ ಶ್ರೇಣಿಯ ಎಂಜನಿಯರರು ಕೆಲವರು ಇದರಲ್ಲಿ ತಲೆ ಹಾಕಿದ್ದಾರೆ.

ಹಲಕೆಲವು ಗುಡಿಗಳನ್ನು ಇಟ್ಟಿಗೆ ಇಟ್ಟಿಗೆಯಾಗಿ ಬಿಚ್ಚಿ ಬೇರೆಡೆಗೆ ಒಯ್ದು ಇದ್ದಕ್ಕಿದ್ದಂತೆ ಪುನಃ ಕಟ್ಟಬೇಕೆಂದಿದ್ದಾರೆ. ಇಂಥ ಕೆಲವನ್ನು ಕೂಡಲೆ ಪ್ರಾರಂಭಿಸಬೇಕಾಗುತ್ತದೆ. ಏಕೆಂದರೆ ಅವು ಇಟ್ಟಿಗೆಯವು. ಅವು ನೀರಲ್ಲೊಮ್ಮೆ ಮುಳುಗಿದರೆ ಉಳಿಯಲೇ ಆರವು. ಅವು ಸುಟ್ಟ ಇಟ್ಟಿಗೆಗಳಲ್ಲ.

ಈ ಬಗೆಯಲ್ಲಿ ಸುಲಭವಾಗಿ ಸ್ಥಳಾಂತರಿಸಬಹುದಾದ ಕಟ್ಟಡಗಳಲ್ಲಿ ವೀರ ಚಕ್ರವರ್ತಿ ಮುಮ್ಮಡಿ ತುತ್ಮಾಸಿಸ್ ಕಟ್ಟಿಸಿದ ३೪ ಶತಮಾನ ಹಳೆಯ ಅಮಾದಾದ ಕಲ್ಲಿನ ದೇವಾಲಯ ಒಂದು. ತುಂಡು ಕಲ್ಲುಗಳಿಂದ ಕಟ್ಟಿದ ಇದರ ಕಲ್ಲುಗಳಿಗೆಲ್ಲ ಅಂಕೆಗಳನ್ನು ಹಾಕಿ ಕಿತ್ತೊಯ್ದು ಮರಳಿ ರಚಿಸಲು ಒಂದೂ ಕಾಲು ಲಕ್ಷ ರೂಪಾಯಿಗಳಿಗಿಂತ ಸ್ವಲ್ಪ ಹೆಚ್ಚು ಸಾಕು. ಎಲ್ಲೆಸಿಸ್ ಡೇರಾ ಮುಂತಾದೆಡೆಗಳ ಏಳು ದೇಗುಲಗಳನ್ನೂ ಹೀಗೆ ವರ್ಗಾಯಿಸಬಹುದು.

ಇದಕ್ಕಿಂತ ತುಸು ಶ್ರಮದಾಯಕ ಮತ್ತು ವೆಚ್ಚದ ಆದರೆ ಅಸಾಧ್ಯವಲ್ಲದ ಕೆಲಸ ಬಂಡೆಗಲ್ಲಿನಲ್ಲಿ ಕೆತ್ತಿದ ದೇವಾಲಯಗಳದು. ಎಲಿಸಿಸ್ ಮತ್ತು ಡೇರಾದಲ್ಲಿರುವ ಇಂಥ ದೇವಾಲಯಗಳನ್ನು ವಿದ್ಯುತ್ ಚಾಲಿತ ತಂತಿಗರಗಸಗಳಿಂದ ಬಂಡೆಯನ್ನೇ ಕೆತ್ತಿ, ಕಂಬಗಳನ್ನೂ ಗೋಡೆ




ನಕಾಶೆ

ಗಳನ್ನೂ ತುಂಡುಗಳಾಗಿ ಕೊಯ್ದು ಮತ್ತೆ ಕಟ್ಟಲು ಸಾಧ್ಯವುಂಟು.

ಫಿಲೇ ಮತ್ತು ಅಬುಸಿಂಬೆಲ್ ಅವಶೇಷಗಳನ್ನು ಹೀಗೆ ಕೀಳಲಿಕ್ಕೆ ಸಾಧ್ಯವಿಲ್ಲ. ಕಿತ್ತರೆ ಅವುಗಳನ್ನು ಅದೇ ಭವ್ಯತೆ, ಅವೇ ಪರಿಸರ, ಸನ್ನಿವೇಶಗಳಲ್ಲಿ ಪುನಃ ಕಟ್ಟಲು ಬಾರದು. ಅಸ್ವಾನ್ ಅಣೆಕಟ್ಟಿನ ಹತ್ತಿರವೇ ಇರುವ ಫಿಲೇ ಅವಶೇಷಗಳು "ಇಜಿಪ್ತಿನ ಮುತ್ತು" ಎನಿಸಿ ಇಜಿಪ್ತಿನ ಸಂಸ್ಕೃತಿಯ ಕೊನೆಯ ಮಹಾಕೃತಿಗಳಲ್ಲಿ (ಕ್ರಿ. ಪೂ. ೪ ನೇ ಶತಮಾನ) ಸೇರಿದವು. ಅಲ್ಲಿ ಮಾತೃದೇವತೆ ಐಸಿಸ್‌ನ ದೇವಾಲಯವು ದಕ್ಷಿಣ ಯುರೋಪಿನಲ್ಲಿ ಕೂಡ ಹಬ್ಬಿದ ಮಾತೃದೇವತಾ ಪೂಜೆಯ ಕೇಂದ್ರವಾಗಿ ಕ್ರಿಸ್ತಶಕಾನಂತರವೂ ಪ್ರಸಿದ್ಧವಾಗಿತ್ತು. ಈ ದೇವಾಲಯಗಳ ಗೋಡೆಗಳಲ್ಲಿ ಚಕ್ರವರ್ತಿಗಳಾದಿಯಾಗಿ ಕೆತ್ತಿಸಿದ ಹೆಸರುಗಳೂ ವಾಕ್ಯಗಳೂ ಇತಿಹಾಸದ ನಿಧಿಗಳಾಗಿವೆ. ಅವನ್ನು ಹೇಗೆ ಕತ್ತರಿಸಿ ಒಯ್ಯುವುದು?

ಅಬುಸಿಂಬೆಲ್ ಇಜಿಪ್ತಿನ ಅತಿ ಪ್ರಾಚೀನ ಅವಶೇಷಗಳಲ್ಲಿ ಸೇರಿದೆ. ೩೨ ಶತಮಾನಗಳ ಹಿಂದೆ ಎರಡನೇ ರ್‍ಯಾಮೆಸೆಸ್ ಕಟ್ಟಿಸಿದ ಇಲ್ಲಿನ ಗುಡಿಗಳು, ಕಡೆಸಿದ ತನ್ನ ಮೂರ್ತಿಗಳು ಎಷ್ಟು ಉದ್ದಾಮವೊ ಅಷ್ಟೇ ಸುಂದರವಾದವು. ಇಲ್ಲಿನ ಶಿಲ್ಪಿ ಸೌಂದರ್ಯಾರಾಧಕನಷ್ಟೇ ಅಲ್ಲ ಖಗೋಲ ವಿಜ್ಞಾನಿಯೂ ಇರಬೇಕು. ಇಲ್ಲಿನ ದೇವಾಲಯದ ಸೂರ್ಯ ಮೂರ್ತಿಯ ಮೇಲೆ ನಿತ್ಯ ಅರುಣೋದಯದಲ್ಲಿ ಆರಕ್ತ ಪ್ರಭೆ ಬಿದ್ದು ಒಮ್ಮೆಲೆ ಜೀವಕಳೆ ತುಂಬುತ್ತದೆ; ಕೆಳಗೆ ಪೌಳಿಯಲ್ಲಿ ವರ್ಷದ ವಿಶಿಷ್ಟ ದಿನಗಳಲ್ಲಿ ಸೂರ್ಯನ ಪ್ರಥಮ ಕಿರಣಗಳು ಬೀಳುತ್ತವೆ. ಇವೂ ಅಲುಗಿಸಲಾರದ ಅವಶೇಷಗಳು. ಅವುಗಳ ಶಿಲೆ ತೀರ ಮೆದು.



ಈ ಮೂರ್ತಿಯ ಮುಖ ಆ ಕಿವಿಯಿಂದ ಈ ಕಿವಿಯ ವರೆಗೆ ೧೩ ಅಡಿ ಅಗಲವಿದೆ

ಆದರೂ ಎಂಜನಿಯುರರು ಇವೆರಡನ್ನೂ ಇದ್ದಲ್ಲೆ ಉಳಿಸಲು ಯುಕ್ತಿ ತೆಗೆದಿದ್ದಾರೆ. ಎರಡಕ್ಕೂ ಅಣೆಕಟ್ಟುಗಳನ್ನು ಹಾಕಿ ನೀರು ಹತ್ತಿರ ಸೇರದಂತೆ ರಕ್ಷಿಸುವ ವಿಚಾರ ಅವರದು. ಫಿಲೀಯ ಅವಶೇಷಗಳ ರಕ್ಷಣೆಗೆ ತಗ್ಗಾದ ಕೋಟೆ ಸಾಕು. ಆದರೆ ಅಬುಸಿಂಬೆಲ್‌ನ ಸುತ್ತ ಬಲು ಎತ್ತರದ ಅರ್ಧಚಂದ್ರ ಅಣೆಕಟ್ಟೆ ಬೇಕು. ಮೊದಲನೆಯದಕ್ಕೆ ೧.೩ ಕೋಟಿ ರೂಪಾಯಿ ಸಾಕು; ಎರಡನೆಯದಕ್ಕೆ ೧೩ ರಿಂದ ೨೬ ಕೋಟಿ ರೂಪಾಯಿ ಬೇಕು.

ಸಾವಿರಾರು ವರ್ಷಗಳಿಂದ ತಮ್ಮ ನಿಚ್ಚಳ ಬಣ್ಣಗಳನ್ನು ಉಳಿಸಿಕೊಂಡು ಹೃದಯಂಗಮವಾಗಿ ಮೆರೆಯುತ್ತಿರುವ ಭಿತ್ತಿ ಚಿತ್ರಗಳನ್ನೇನು ಮಾಡಬೇಕು? ಅವುಗಳನ್ನು ಎಚ್ಚರದಿಂದ ಕಚ್ಚು ಹಾಕಿ ಪದರುಪದರಾಗಿ ಎಬ್ಬಿಸಿ ಬೇರೆ ಕಡೆ ಅದೇ ಕ್ರಮದಲ್ಲಿ ಹಚ್ಚುವ ಹಂಚಿಕೆ ಮಾಡಿದ್ದಾರೆ.

ಮುನ್ನೂರು ಮೈಲುದ್ದದ ನ್ಯೂಬಿಯಾ ಪ್ರದೇಶದಲ್ಲಿ ಹಂಚಿರುವ ಅವಶೇಷಗಳನ್ನು ಕಾಪಾಡುವುದು ಇಡೀ ಜಗತ್ತೇ ಆಸ್ಥೆ ವಹಿಸಬೇಕಾದ ಕಾರ್ಯ. ಏಕೆಂದರೆ ಇಲ್ಲಿ ಕೇವಲ ಪ್ರಾಚೀನ ಇಜಿಪ್ತಿನ ಇತಿಹಾಸ ಗಂಡಾಂತರಕ್ಕೊಳಗಾಗಿಲ್ಲ. ಪ್ರಾಚೀನ ಕಾಲದ ಸಂಸ್ಕೃತಿಯ ಬಹುಭಾಗಕ್ಕೆ ಇಜಿಪ್ತಿನೊಡನೆ ಸಂಪರ್ಕವಿದೆ. ಹಿಟ್ಟೈಟ್, ಬೆಬಿಲೋನಿಯನ್, ಪರ್ಶಿಯನ್, ಅರಬ ಸಂಸ್ಕೃತಿಗಳೊಡನೆ ಸಂಪರ್ಕ ಹಾಗು ಸಂಘರ್ಷ ಬಂದ ಸಾಮ್ರಾಜ್ಯ ಇಜಿಪ್ತಿನದು; ಗ್ರೀಕ್ ಸಂಸ್ಕೃತಿ ಮತ್ತು ವಿಜ್ಞಾನವನ್ನು ಪ್ರಭಾವಿತಗೊಳಿಸಿದ, ರೋಮನ್ ಸಾಮ್ರಾಜ್ಯಕ್ಕೆ ಕೊನೆಗೆ ಅಡಿಯಾಳಾದ ನಾಗರಿಕತೆ ಅದರದು. ಈ ಎಲ್ಲ ಘಟನೆಗಳಿಗೆ ಸಂಬಂಧಿಸಿದ ಅವಶೇಷಗಳು ನ್ಯೂಬಿಯುದಲ್ಲಿವೆ. ಪ್ರಾಕ್ತನ ಶಾಸ್ತ್ರಜ್ಞರು ಈ ಅವಶೇಷಗಳ ಪರೀಕ್ಷೆಯ ಕೊನೆಯನ್ನು ಇನ್ನೂ ಕಂಡಿಲ್ಲ. ಅಸ್ವಾನ್ ಅಣೆಕಟ್ಟು ಅವುಗಳನ್ನು ಮುಳುಗಿಸಿದರೆ ಪ್ರಾಚೀನ ಇತಿಹಾಸವನ್ನು ಪುನಾರಚಿಸಲು ನೆರವಾಗುವ ಅನೇಕ ತಥ್ಯಗಳು ಸದಾ ಕಾಲಕ್ಕಾಗಿ ನಷ್ಟವಾದಂತೆ ಮಕ್ಕಳನ್ನು ಪಡೆಯುವುದಕ್ಕಾಗಿ ತಂದೆಯನ್ನು ಬಲಿಕೊಟ್ಟನೆಂಬ ಅಪವಾದ ಈ ಶತಮಾನಕ್ಕೆ ಅಂಟಬಾರದಾದರೆ ನ್ಯೂಬಿಯುದ ನಿಧಿಯನ್ನು ರಕ್ಷಿಸಲು ಬೇಗನೆ ನೆರವಾಗಬೇಕು. *



ಹದ್ದಿನಾಕಾರದ ಶಿರೋಭೂಷಣವುಳ್ಳ ದೇವತೆ

---

* ಯುನೆಸ್ಕೊ ನ್ಯೂಬಿಯು ನಿಧಿಗೆ ನೆರವಾಗಬಯಸುವವರು, ನ್ಯೂಬಿಯು ನಿಧಿಗಾಗಿ ಎಂದು ತಿಳಿಸಿ ಹೊಸ ದಿಲ್ಲಿಯು ಲಾಯ್ಡ್ ಬ್ಯಾಂಕ್ ಲಿಮಿಟೆಡ್ ವಿಳಾಸಕ್ಕೆ ಹಣ ಕಳಿಸಬಹುದು.



# ಅಜ್ಞಾತ ಜಗತ್ತನ್ನು ತೋರಿಸಿಕೊಟ್ಟ ಲುವೆನ್ ಹಾಕ್

ಎಸ್. ಬಿ. ಮಠದ

ವಿಜ್ಞಾನಿಗಳು ದೇಶದ ದೊಡ್ಡ ಸೊತ್ತು. ಯಾವುದೇ ದೇಶದ ತ್ವರಿತ ಬೆಳವಣಿಗೆ ಪ್ರಗತಿ ಸುಖಸೌಲಭ್ಯಗಳು ವೈಜ್ಞಾನಿಕ ಸಂಶೋಧನೆಗಳನ್ನೇ ಅವಲಂಬಿಸಿವೆ. ಅದು ಕಾರಣ ವಿಜ್ಞಾನವೆಂದರೆ ಈ ಯುಗದಲ್ಲಿ ಅಷ್ಟು ಗೌರವ, ಮನ್ನಣೆ

ಆದರೆ ಹದಿನೇಳನೆಯ ಶತಮಾನದ ಕಾಲವೇ ಬೇರೆ ಆಗಿತ್ತು. ಆ ಕಾಲದಲ್ಲಿ ಮೂಢ ನಂಬಿಕೆಗಳೇ ಸತ್ಯ; ಮಠಾಧಿಪತಿಗಳು ಬೋಧಿಸಿದ್ದೇ ವೇದವಾಕ್ಯ; ದೇವರೇ ಎಲ್ಲ ಘಟನೆಗಳಿಗೂ ಕಾರಣೀಭೂತ. ವೈಜ್ಞಾನಿಕ ಸತ್ಯವನ್ನು ನುಡಿದವ ಧರ್ಮದ್ರೋಹಿ, ಸಮಾಜದ್ರೋಹಿ; ಅಷ್ಟೇ ಅಲ್ಲದೆ ದೇಶದ್ರೋಹಿ. ಪೃಥ್ವಿಯು ಸೂರ್ಯನ ಸುತ್ತಲು ತಿರುಗುತ್ತದೆ ಎಂಬ ನಿತ್ಯ ಸತ್ಯವನ್ನು ನುಡಿದ ಗಲಿಲಿಯೊ ಜೀವಾವಧಿ ಶಿಕ್ಷೆಗೆ ಗುರಿಯಾಗಬೇಕಾಯಿತು. ಸತ್ತವನ ದೇಹವನ್ನು ಕೊಯ್ದು ಪರೀಕ್ಷಿಸಿದ್ದಕ್ಕಾಗಿ ಸರ್ವಿಟಿಸನ ದೇಹವನ್ನು ಜೀವಂತ ಸುಡಲಾಯಿತು.

ಆ್ಯಂಟೊನಿ ಲುವೆನಹಾಕ್‌ನು ಇಂತಹ ಶತಮಾನದಲ್ಲಿ ಜೀವಿಸಿದವ. ಅವನು ಹುಟ್ಟಿದ್ದು ೧೬೩೨ ರಲ್ಲಿ. ಅವನ ಊರು ಡೆಲ್ಫ್ಟ. ಅವನ ದೇಶ ಹಾಲಿನ ನಾಡು; ಹಾಲಂಡ್. ಅವನ ತಾಯಿ ತಂದೆ ಬುಟ್ಟಿ ಹೆಣೆದು, ಮದ್ಯಮಾಡಿ ಹೊಟ್ಟೆ ಹೊರೆಯುವವರು. ಅವನ ತಂದೆ ಬಹು ಬೇಗ ತೀರಿಕೊಂಡ. ತನ್ನ ಮಗನು ಸರಕಾರಿ ಅಧಿಕಾರಿ ಆಗಬೇಕೆಂಬ ಆಶೆಯಿಂದ ಅವನ ತಾಯಿ ಅವನನ್ನು ಶಾಲೆಗೆ ಹಾಕಿದಳು. ಆದರೆ ಅವನಿಗೆ ಶಾಲೆಯ ಶಿಕ್ಷಣ ಹಿಡಿಸಲಿಲ್ಲವೇನೋ; ಹದಿನಾರನೆಯ ವಯಸ್ಸಿನಲ್ಲಿಯೇ ಶಾಲೆಗೆ ಶರಣು ಹೊಡೆದು, ಆ್ಯಮಸ್ಟರ್ಡಂ ಪಟ್ಟಣದ ಒಂದು ಅಂಗಡಿಯಲ್ಲಿ ಉಮೇದುವಾರನಾಗಿ ಕೆಲಸಕ್ಕೆ ನಿಂತುಕೊಂಡ. ಆರು ವರುಷಗಳ ತರುವಾಯ ಅದಕ್ಕೂ ಶರಣು ಹೊಡೆದು, ತನ್ನೂರಿಗೆ ಮರಳಿ ತನ್ನದೇ ಆದ ಒಂದು ಅಂಗಡಿ ಸ್ಥಾಪಿಸಿದ. ಅಲ್ಲದೆ ತನ್ನೂರಿನಲ್ಲಿಯೇ 'ಸಿಟಿಹಾಲ್' ನಲ್ಲಿ ದ್ವಾರಪಾಲಕನಾಗಿ ಕೆಲಸ ಮಾಡಹತ್ತಿದ. ಈ ಮಧ್ಯೆ ಲಗ್ನವಾಗಿ ಕೆಲವು ಮಕ್ಕಳ ತಂದೆಯಾದ. ಲುವೆನ್ ಹಾಕ್‌ನಂಥ ಸಾಮಾನ್ಯ ಮನುಷ್ಯ ಮಹಾ ವಿಜ್ಞಾನಿಯಾಗಬಹುದೆಂದು ಯಾರೂ ಊಹಿಸಿರಲಿಲ್ಲ. ಅವನು ಮಹಾವಿಜ್ಞಾನಿಯಾದ ಕತೆ ಬಹಳ ಸ್ವಾರಸ್ಯವಾಗಿದೆ.

ಗಾಜಿನ ತುಂಡುಗಳನ್ನು ಜಾಣ್ಮೆಯಿಂದ ಕೊರೆದು, ತಿಕ್ಕಿ ಅವುಗಳ ಸಹಾಯದಿಂದ ನೋಡಿದರೆ, ವಸ್ತುಗಳು ಎಷ್ಟೋ ಪಟ್ಟು ದೊಡ್ಡವಾಗಿ ಕಾಣುತ್ತವೆಂದು ಲುವೆನ್ ಹಾಕ್ ಎಲ್ಲಿಯೋ ಕೇಳಿದ್ದ. ಇಂತಹ ಕಾಜಿನ ಗೋಲಕಗಳನ್ನು ತಾನೇಕೆ ಮಾಡಬಾರದು? ಎಂಬ ಯೋಚನೆ ಅವನಲ್ಲಿ ಹುಟ್ಟಿತು. ಆದರೆ ಮಾಡುವ ಬಗೆ ಹೇಗೆ? ಮನವಿದ್ದಲ್ಲಿ ಮಾರ್ಗವಿದ್ದೇ ಇದೆಯಲ್ಲವೆ? ಕನ್ನಡಕ ಸಿದ್ಧಪಡಿಸುವವರಿಂದ

ಗೋಲಕ ತಯಾರಿಸುವ ವಿಧಾನ ತಿಳಿದುಕೊಂಡ. ಅಕ್ಕಸಾಲಿಗರ ಕಲೆಯನ್ನು ಕಲಿತು ಧಾತುಗಳನ್ನು ಮಾಡುವ ಬಗೆಯನ್ನು ಅರಿತುಕೊಂಡ. ಹಗಲು ರಾತ್ರಿಯೆನ್ನದೆ ಶ್ರಮಿಸಿದ. ಆಹಾರ ಮರೆತ. ಸ್ನೇಹಿತರಿಂದ ದೂರವಾದ. ಹೆಂಡಿರು ಮಕ್ಕಳ ನೆನಪೂ ಮರೆಯಾಯಿತು. ಅವನ ಗುರಿ ಒಂದೇ ಒಂದು. ಗೋಲಕಗಳನ್ನು ಸಿದ್ಧ ಮಾಡಬೇಕು. ಅವನ ನೆರಹೊರೆಯವರು ಇವನಿಗೆಲ್ಲೋ ಹುಚ್ಚು ಹಿಡಿದಿದೆ ಎಂದು ಹಾಸ್ಯ ಮಾಡಿದರು ಆದರೂ ಆತ ತನ್ನ ನಿರ್ಧಾರವನ್ನು ಬಿಡಲಿಲ್ಲ. ಕೊನೆಗೆ ಅವನ ಪ್ರಯತ್ನಕ್ಕೆ ಫಲ ಸಿಕ್ಕಿತು. ಒಂದು ಎಂಟಾಂಶ ಅಂಗುಲಕ್ಕಿಂತಲೂ ಚಿಕ್ಕದಾದ ಸರ್ವಾಂಗ ಪರಿಪೂರ್ಣವಾದ ಗೋಲಕಗಳನ್ನು ಅವನು ಸಿದ್ಧಮಾಡಿದ್ದ.

ಲುವೆನ್‌ಹಾಕ್ ಈ ಸಂಶೋಧನೆಯಿಂದ ಹುಚ್ಚನಂತಾದ. ತಾನೇ ತಯಾರಿಸಿದ ತಾಮ್ರ ಬೆಳ್ಳಿ ಬಂಗಾರಗಳ ಕಟ್ಟಿನಲ್ಲಿ ಈ ಗೋಲಕಗಳನ್ನು ಕೂಡ್ರಿಸಿ ಸೂಕ್ಷ್ಮದರ್ಶಕವನ್ನು ನಿರ್ಮಿಸಿದ. ಕೈಗೆ ಸಿಕ್ಕ ಎಲ್ಲ ವಸ್ತುಗಳನ್ನೂ ತನ್ನ ಸೂಕ್ಷ್ಮದರ್ಶಕದಲ್ಲಿಟ್ಟು ನೋಡಲು ಆರಂಭಿಸಿದ. ಕಟುಕರ ಮನೆಗೆ ಹೋಗಿ ಎತ್ತಿನ ಕಣ್ಣು ತಂದು ನೋಡಿದ. ತನ್ನ ತ್ವಚೆಯನ್ನು ನೋಡಿಕೊಂಡ. ತಿಮಿಂಗಿಲುಗಳ ಸ್ನಾಯುವನ್ನು ನೋಡಿದ. ಕುರಿಯ ಕೂದಲು ನೋಡಿದ. ನೊಣದ ತಲೆಯನ್ನು ಕತ್ತರಿಸಿ ಅದರ ಮೆದುಳನ್ನು ಪರೀಕ್ಷಿಸಿದ. ಇವನ್ನೆಲ್ಲ ಸೂಕ್ಷ್ಮದರ್ಶಕದಲ್ಲಿ ನೋಡಿದ ಅವನು ತನ್ನನ್ನು ತಾನೇ ನಂಬದಾದ. ತನ್ನ ಕಾಲದಲ್ಲಿ ಅಷ್ಟೇ ಏಕೆ? ಯಾವ ಕಾಲದಲ್ಲೂ ಯಾರೂ ಕಾಣಲಾರದ ಅದ್ಭುತಗಳನ್ನು ಅವನು ಕಂಡಿದ್ದ. ಅವನು ಕಂಡ ಜಗತ್ತೇ ಬೇರೆಯಾಗಿತ್ತು.

ಅದೊಂದು ದಿನ ಲುವೆನ್‌ಹಾಕ್ ಗಾಜಿನ ಕೊಳವೆಯೊಂದನ್ನು ಉರಿಯಲ್ಲಿ ಕಾಯಿಸಿ ಜಾಣ್ಮೆಯಿಂದ ಜಗ್ಗಿ ಕೂದಲೆಳೆಯಷ್ಟು ಸೂಕ್ಷ್ಮವಾದ ಕೊಳವೆಯನ್ನು ತಯಾರಿಸಿದ. ಈ ಕೊಳವೆಯಲ್ಲಿ ಭೂಮಿಯ ಮೇಲೆ ಬಿದ್ದ ಮಳೆಯ ನೀರನ್ನು ಸಂಗ್ರಹಿಸಿದ. ಮಳೆಯ ನೀರನ್ನು ತನ್ನ ಸೂಕ್ಷ್ಮದರ್ಶಕದಲ್ಲಿ ನೋಡುವ ಆಶೆ ಅವನಿಗೆ. ಮಳೆಯ ನೀರಿನಲ್ಲೇನಿದೆ? ಅದನ್ನೇಕೆ ಹೀಗೆ ನೋಡಬೇಕು? ಲುವೆನ್ ಹಾಕ್ ಮೂರ್ಖನಲ್ಲದೆ ಇನ್ನೇನು ? ಎಂದು ಜನರು ಬಾಯಿಗೆ ಬಂದಂತೆ ಆಡಿಕೊಂಡರು ಆದರೆ ಅವನು ಮೂರ್ಖನಾಗಿರಲಿಲ್ಲ. ವಿಜ್ಞಾನಿಯಾಗಿದ್ದ. ಅವನಿಗೆ ತನ್ನದೇ ಆದ ವಿಚಾರ; ತನ್ನದೇ ಆದ ಕನಸು; ತನ್ನದೇ ಆದ ಜಗತ್ತು. ಜನರ ಮಾತಿಗೆ ಕಿವಿಗೊಡಲಿಲ್ಲ. ಮಳೆಯ ನೀರನ್ನು ಸೂಕ್ಷ್ಮದರ್ಶಕದಲ್ಲಿಟ್ಟು ನೋಡಿಯೇ ಬಿಟ್ಟ. ಅದರಲ್ಲಿ ನೋಡಿದ್ದು ಒಂದೇ ಒಂದು ಕ್ಷಣ. ಮರುಕ್ಷಣದಲ್ಲಿಯೆ ಜಿಗಿದು ಆವೇಶದಿಂದ ಕೂಗಿದ. "ಬನ್ನಿ ! ಇಲ್ಲಿ ಬನ್ನಿ ! ಬೇಗ ಬನ್ನಿ !!! ಈ ಮಳೆ ನೀರಿನಲ್ಲಿ ಪುಟ್ಟ ಪ್ರಾಣಿಯಿವೆ. ಅವು ಈಸುತ್ತವೆ. ಆಹಾರ ಸೇವಿಸುತ್ತವೆ. ಮರಿಗಳನ್ನು ಹುಟ್ಟಿಸುತ್ತವೆ. ಕೊನೆಗೆ ಎಲ್ಲ ಪ್ರಾಣಿಗಳಂತೆ ಸಾಯುತ್ತವೆ. ಅವು ನಮ್ಮ ಬರಿಗಣ್ಣಿಗೆ ಕಾಣುವ ಎಂಥ ಚಿಕ್ಕ ಪ್ರಾಣಿಗಳಿಗಿಂತಲೂ ಸಾವಿರಾರು ಪಟ್ಟು ಚಿಕ್ಕವಾಗಿವೆ. ನೋಡಿರಿ; ನಾನು ಏನು ಶೋಧಿಸಿದ್ದೇನೆ." ಲುವೆನ್‌ಹಾಕ್ 'ಯುರೇಕಾ' 'ಯುರೇಕಾ' ಎಂದು ಒದರುತ್ತ ಬೀದಿಗುಂಟ ಬತ್ತಲೆಯಾಗಿ ಓಡಿದ. ಅವನೂ ಆರ್ಕಿಮಿಡಿಸನಂತೆ ಭಾವಪರವಶನಾಗಿದ್ದ.

ಅವನು ಎಲ್ಲ ತರದ ನೀರನ್ನು ಪರೀಕ್ಷಿಸಿದ. ಹೊಂಡದ ನೀರು, ಹಳ್ಳದ ನೀರು, ಹೊಳೆಯ ನೀರು, ಗಟಾರದಲ್ಲಿ ಹರಿಯುವ ಕೊಳಚೆ ನೀರು ಎಲ್ಲೆಲ್ಲಿಯೂ ಆ ಪುಟ್ಟ ಪ್ರಾಣಿಗಳೆ ! ಲುವೆನ್ ಹಾಕ್‌ನಿಗಿಂತ ಮೊದಲು ಎಷ್ಟೋ ಜನ ದೊಡ್ಡವರು ಹುಟ್ಟಿ ಸತ್ತಿದ್ದರು. ಅವರಾರೂ ಇಂಥ ಪ್ರಾಣಿಗಳನ್ನು ಕಂಡಿರಲಿಲ್ಲ. ಈ ಚಿಕ್ಕ ಪ್ರಾಣಿಗಳು ಮನುಷ್ಯರಿಗಿಂತ ಕೋಟ್ಯವಧಿ ಪಾಲು

ಚಿಕ್ಕವುಗಳಾದರೂ, ಅವು ಮನುಷ್ಯ ಕುಲವನ್ನೇ ಹೆದರಿಸುವಂತಹವು. ಅವು ಅಸಂಖ್ಯಾತ ಜನ-ಬಡವರು ಬಲ್ಲಿದರು, ರಾಜಮಹಾರಾಜರು, ಕಲಾಕಾರರು, ಕವಿಗಳು, ಸಾಧುಸತ್ಪುರುಷರು-ಜೀವನವನ್ನು ಆಹುತಿ ತೆಗೆದುಕೊಂಡಿವೆ. ಕಾರಖಾನೆ, ಗಿರಣಿ, ಮತ್ತು ಇನ್ನಿತರ ಎಷ್ಟೋ ಉದ್ಯಮಗಳನ್ನು ಹಾಳುಗೆಡವಿವೆ. ರಾಷ್ಟ್ರಗಳ ಪ್ರಗತಿಯನ್ನು ಕುಂದಿಸಿವೆ. ಆದರೂ ಅದುವರೆಗೆ ಲುವೆನ್‌ಹಾಕನ ಹೊರತು ಬೇರಾರ ಕಣ್ಣಿಗೂ ಕಂಡಿರಲಿಲ್ಲ ಅವು.

೧೭ ನೆಯ ಶತಮಾನದ ಮಧ್ಯದಲ್ಲಿ ಸ್ವತಂತ್ರ ವಿಚಾರಮನೋವೃತ್ತಿಯುಳ್ಳ ಹಾಗೂ ಧೈರ್ಯದಿಂದ ಮಾತನಾಡುವ ಕೆಲವೊಂದು ಜನರು ಕಾಣಿಸಿಕೊಂಡರು. ವೈಜ್ಞಾನಿಕವಾಗಿ ಸಿದ್ಧಮಾಡದ ಯಾವುದನ್ನೂ ಅವರು ಒಪ್ಪುವಂತಿರಲಿಲ್ಲ. ವಿಜ್ಞಾನದ ಬೆಳವಣಿಗೆಗಾಗಿ ಅವರು ಇಂಗ್ಲಂಡಿನಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ಅದರ ಹೆಸರು 'ಇನ್‌ವಿಜಬಲ್ ಕಾಲೇಜ್." ಈ ಕಾಲೇಜಿನ ಸದಸ್ಯರು ಗುಪ್ತವಾಗಿ ಕೆಲಸಮಾಡಬೇಕಾಗಿತ್ತು. ಇಲ್ಲವಾದರೆ ಕ್ರಾಮ್‌ವೆಲ್ಲನು ಅವರನ್ನು ಗಲ್ಲಿಗೆ ಹಾಕುತ್ತಿದ್ದ. ಯಾಕೆಂದರೆ ಆಗಿನ ಕಾಲದ ನಂಬಿಕೆಗಳಲ್ಲಿ ಸಂಶಯ ವ್ಯಕ್ತಮಾಡಿ, ಅವುಗಳ ಸತ್ಯತೆಯನ್ನು ಪ್ರಶ್ನಿಸುವದು ಒಂದು ಮಹಾಪರಾಧವಾಗಿತ್ತು. ಆದರೂ ಆ ಕಾಲೇಜು ತನ್ನ ಕಾರ್ಯವನ್ನು ಮುಂದುವರೆಸಿತು. ಅದೇನೂ ಸಣ್ಣ ಕಾಲೇಜಲ್ಲ. ರಸಾಯನ ವಿಜ್ಞಾನ ಸಂಸ್ಥಾಪಕ ರಾಬರ್ಟ ಬಾಯಲ್, ಪ್ರಖ್ಯಾತ ಭೌತವಿಜ್ಞಾನಿ ಐಸಾಕ್ ನ್ಯೂಟನ್, ಜೀವಕಣಗಳನ್ನು ಶೋಧಿಸಿದ ರಾಬರ್ಟ ಹುಕ್‌ರಂತಹ ಮಹಾ ವಿಜ್ಞಾನಿಗಳು ಆ ಕಾಲೇಜದ ಸದಸ್ಯರಾಗಿದ್ದರು. ೨ ನೆಯ ಚಾರ್ಲಸನ ಆಳಿಕೆಯಲ್ಲಿ ಹುಟ್ಟಿದ ಈ ಅಜ್ಞಾತ ಸಂಸ್ಥೆಯೇ ಇಂದಿನ ಜಗತ್ಪ್ರಸಿದ್ಧವಾದ 'ರಾಯಲ್ ಸೊಸಾಯಿಟಿ ಆಫ್ ಇಂಗ್ಲಂಡ' ಆಗಿ ಮಾರ್ಪಟ್ಟಿತು. ಆಗಿನ ಎಷ್ಟೋ ವಿಜ್ಞಾನಿಗಳು ಗುಂಪು ಕಟ್ಟಿಕೊಂಡು, ಒಬ್ಬರನ್ನೊಬ್ಬರು ಟೀಕಿಸಿ, ಅಪಹಾಸ್ಯ ಮಾಡುತ್ತಿದ್ದರು. ಅದಕ್ಕಾಗಿ ಲುವೆನ್‌ಹಾಕನಿಗೆ ಆ ಕಾಲೇಜಿನ ಸದಸ್ಯರಲ್ಲಿ ವಿಶ್ವಾಸವಿರಲಿಲ್ಲ. ಅವನು ನಂಬಿದ ಸದಸ್ಯ ಒಬ್ಬನೇ ಒಬ್ಬ. ಅವನು ಗ್ರಾಫ್. ಗ್ರಾಫ್‌ನಿಗೆ ತನ್ನ ಸೂಕ್ಷ್ಮದರ್ಶಕದಲ್ಲಿ ನೋಡಲು ಅವನು ಅವಕಾಶವಿತ್ತಾಗ ಗ್ರಾಫನು ಬೆರಗಾಗಿ ಹೋದ. ಆ ಕೂಡಲೇ ರಾಯಲ್ ಸೊಸಾಯಿಟಿಗೆ ಈ ವಿಷಯವನ್ನು ತಿಳಿಸಿದ.

ರಾಯಲ್ ಸೊಸಾಯಿಟಿಯು ಲುವೆನ್‌ಹಾಕನಿಗೆ ಅವನ ಸಂಶೋಧನೆಗಳ ವಿಷಯವಾಗಿ ಬರೆದು ತಿಳಿಸಲು ಬಿನ್ನವಿಸಿಕೊಂಡಿತು. ಅವನು ಎಲ್ಲವನ್ನೂ ಸವಿಸ್ತಾರವಾಗಿ ಬರೆದು ಒಂದೇ ಒಂದು ಉಸುಬಿನ ಕಣದ ಗಾತ್ರದಲ್ಲಿ, ಸೂಕ್ಷ್ಮದರ್ಶಕದಲ್ಲಿ ಕಾಣುವ ಈ ಜೀವಿಗಳು ಒಂದು ದಶಲಕ್ಷದಷ್ಟು ಜೀವಿಸುವದು ಸಾಧ್ಯವಿದೆಯೆಂದು ತಿಳಿಸಿದ. ಇದನ್ನು ಓದಿದ ಎಷ್ಟೋ ಸದಸ್ಯರು ಇವನೊಬ್ಬ ಮೂರ್ಖ ಶಿರೋಮಣಿ ಎಂದು ಗಹಗಹಿಸಿ ನಕ್ಕರು. ಕೆಲವರು ಮಾತ್ರ ಅವನ ಹೇಳಿಕೆಯಲ್ಲಿ ವಿಶ್ವಾಸ ತಳೆದರು. ರಾಯಲ್ ಸೊಸಾಯಿಟಿಯು ಇವರ ಪರವಾಗಿ ಲುವೆನ್‌ಹಾಕನಿಗೆ ಪತ್ರಬರೆದು ಅವನ ಸೂಕ್ಷ್ಮದರ್ಶಕ ರಹಸ್ಯದ ರಚನೆ ಮತ್ತು ಅದನ್ನು ಉಪಯೋಗಿಸುವ ರೀತಿನೀತಿಗಳನ್ನು ಸವಿಸ್ತಾರವಾಗಿ ಬರೆದು ತಿಳಿಸಲು ಕೇಳಿಕೊಂಡಿತು. ತನ್ನ ಸೂಕ್ಷ್ಮದರ್ಶಕದ ರಹಸ್ಯ ತಿಳಿಸುವುದೇ ? ಅದೆಂದಿಗೂ ಅಸಾಧ್ಯ. ರಾಯಲ್ ಸೊಸಾಯಿಟಿಗೆ 'ಅದು ತನ್ನಿಂದ ಅಸಾಧ್ಯ' ಎಂದು ಬರೆದು ತಿಳಿಸಿದ. ಯಾರು ಬಂದರೂ ತನ್ನ ಸೂಕ್ಷ್ಮದರ್ಶಕದಲ್ಲಿ ನೋಡಲು ಅನುಮತಿ ಕೊಡುತ್ತಿದ್ದ. ಆದರೆ ಅವರೇನಾದರೂ 'ಇದರ ರಹಸ್ಯವೇನು ? ಇದನ್ನು ಹೇಗೆ ಮಾಡಿದಿ ? ನಾವು ಕಲಿಯಬಹುದೆ ?' ಎಂದ. ಕೇಳಿದರೆ ಅವರನ್ನು ದಬ್ಬಿ ಹೊರಗೆ ಹಾಕುತ್ತಿದ್ದ.

ಆದರೂ ಲುವೆನ್‌ಹಾಕನ ಸಂಶೋಧನೆಯನ್ನು ರಾಯಲ್ ಸೊಸಾಯಿಟಿಯವರು ಅಲ್ಲಗಳೆಯುವಂತಿರಲಿಲ್ಲ. ಆದ್ದರಿಂದ ಅವನ ಸಂಶೋಧನೆಯ ಸತ್ಯವನ್ನರಿಯಲು, ಅತ್ಯುತ್ತಮ ಸೂಕ್ಷ್ಮದರ್ಶಕವನ್ನು ರಚಿಸಲು ರಾಬರ್ಟ ಹುಕ್‌ನನ್ನು ಕೇಳಿಕೊಂಡಿತು. ೧೬೬೬ ರಲ್ಲಿ ರಾಬರ್ಟ ಹುಕ್‌ನು ಸೂಕ್ಷ್ಮದರ್ಶಕವನ್ನು ಸಿದ್ಧಪಡಿಸಿದನು. ಲುವೆನ್ ಹಾಕ್ ಸುಳ್ಳಾಡಿರಲಿಲ್ಲ. ಸೂಕ್ಷ್ಮ ಜಂತುಗಳು ಇರುವವೆಂದು ಮನದಟ್ಟಾಯಿತು. ಈ ಸುವಾರ್ತೆ ರಾಯಲ್ ಸೊಸಾಯಿಟಿಗೆ ತಲುಪಿದ್ದೇ ತಡ, ಲುವೆನ್ ಹಾಕನ ಕೀರ್ತಿ ಎಲ್ಲೆಡೆಗೂ ಹಬ್ಬಿತು. ಇಂಗ್ಲಂಡದ ಮಹಾರಾಣಿ ತನ್ನ ಅರಮನೆ ಬಿಟ್ಟು ಲುವೆನ್ ಹಾಕನ ಪ್ರಯೋಗ ಶಾಲೆಗೆ ಬಂದು ಅವನ ಸೂಕ್ಷ್ಮ ದರ್ಶಕದಲ್ಲಿ ತಾನು ಹಿಂದೆಂದೂ ಕಾಣದ ಸೂಕ್ಷ್ಮ ಜಂತುಗಳ ಜಗತ್ತನ್ನು ಕಂಡು ಆನಂದಭರಿತಳಾಗಿ ಅವನನ್ನು ಹೃತ್ಪೂರ್ವಕ ಅಭಿನಂದಿಸಿದಳು. ರಶಿಯಾದ ಪೀಟರ 'ದಿ ಗ್ರೇಟ' ಸ್ವತಃ ಹಾಲಂಡಿಗೆ ಬಂದು ಲುವೆನ್ ಹಾಕನಿಗೆ ತನ್ನ ಕತಜ್ಞತೆಗಳನ್ನು ಅರ್ಪಿಸಿದ. ನ್ಯೂಟನ್, ರಾಬರ್ಟ ಬಾಯಲ್ ಅವರಂತೆ ಲುವೆನ್ ಹಾಕನೂ ಈಗ ಒಬ್ಬ ದೊಡ್ಡ ವಿಜ್ಞಾನಿ. ರಾಯಲ್ ಸೊಸಾಯಿಟಿಯು ಅವನನ್ನು ಸಕಲ ಮರ್ಯಾದೆಯೊಂದಿಗೆ ಬರಮಾಡಿಕೊಂಡು ಅತ್ಯುಚ್ಚ ಗೌರವ ಪದವಿಯನ್ನು ದಯಪಾಲಿಸಿ, ಎಫ್. ಆರ್. ಎಸ್. ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿತು. ಬಟ್ಟೆ ಹೆಣೆಯುವ, ಮದ್ಯ ಮಾಡುವವರ ಮಗನೊಬ್ಬ ದೊಡ್ಡ ವಿಜ್ಞಾನಿಯಾದ.

ಲುವೆನ್ ಹಾಕನನ್ನು ಭೆಟ್ಟಿಯಾದ ಪ್ರತಿಯೊಬ್ಬನೂ ಅವನ ಪ್ರಯೋಗಕ್ಕೆ ಬಲಿಯಾಗಬೇಕಾಗುತ್ತಿತ್ತು. ತನ್ನನ್ನೇ ತಾನು ಬಿಟ್ಟುಕೊಡಲಿಲ್ಲ. ತನ್ನ ಹಲ್ಲಿನ ಮಧ್ಯದ ಬಿಳಿಯ ವಸ್ತುವನ್ನು ಸಂಗ್ರಹಿಸಿ, ಅದನ್ನು ಶುದ್ಧವಾದ ನೀರಿನಲ್ಲಿ ಬೆರಿಸಿ, ಪರೀಕ್ಷಿಸಿದ. ಆ ಸೂಕ್ಷ್ಮ ಜಂತುಗಳು ಅಲ್ಲಿಯೂ ಇರಬೇಕೆ? ಅವನಿಗೆ ತನ್ನ ಬಾಯಿಯೂ ಒಂದು ಪ್ರಾಣಿ ಸಂಗ್ರಹಾಲಯವೇ ಎನಿಸಿತು. ಆ ಮೇಲೆ ಹಲವು ಬಗೆಯ ಸೂಕ್ಷ್ಮ ಜಂತುಗಳನ್ನು, ಕಪ್ಪೆ, ಕುದುರೆಗಳ ಕರುಳಿನಲ್ಲಿ ಹಾಗೂ ಸ್ವಂತ ಕರುಳಿನಲ್ಲಿಯೆ ಕಂಡು ಹಿಡಿದ.

ಈಗ ಲುವೆನ್ ಹಾಕನಿಗೆ ೮೫ ವರ್ಷ. ಆದರೇನಾಯಿತು? ತನಗೆ ವಯಸ್ಸಾಯಿತು. ತಾನು ಮುಪ್ಪಿನ ಮುದುಕ. ಇನ್ನು ತನಗೆ ವಿಶ್ರಾಂತಿ ಬೇಕು ಎಂದು ಗೊಣಗಲಿಲ್ಲ. ಹಳೆಯವಾಗಿ ಸಡಿಲಾದ ಹಲ್ಲುಗಳನ್ನು ಕಿತ್ತುಕೊಂಡು ಹೊಸ ಹೊಸ ಸೂಕ್ಷ್ಮ ಜಂತುಗಳನ್ನು ಪರೀಕ್ಷಿಸುವ ಹಂಬಲದಿಂದ ಅವನ್ನು ತನ್ನ ಸೂಕ್ಷ್ಮ ದರ್ಶಕದಲ್ಲಿ ಪರೀಕ್ಷಿಸುತ್ತಿದ್ದ. ಅವನ ಸ್ನೇಹಿತರು ಇನ್ನು 'ವಿಶ್ರಾಂತಿ ತೆಗೆದುಕೊಳ್ಳಿ' ಎಂದು ಹೇಳಿದರು. ಅದಕ್ಕೆ ಅವನು, 'ಶರತ್ಕಾಲದಲ್ಲಿ ಫಲಿತ ಹಣ್ಣುಗಳು ಹೆಚ್ಚು ತಾಳುತ್ತವೆ' ಎಂದು ಹೇಳಿದನು. ಎಂಬತ್ತೈದರ ವಯಸ್ಸು ಅವನಿಗೆ ಶರತ್ಕಾಲ. ಆದರೆ ಸಾವಿನ ದವಡೆಯಿಂದ ಜಾರಿಕೊಂಡವರು ಯಾರು? ೧೭೨೩ ರಲ್ಲಿ ತನ್ನ ೯೧ನೆಯ ವಯಸ್ಸಿನಲ್ಲಿ ಲುವೆನ್‌ಹಾಕನು ಪರಲೋಕವಾಸಿಯಾದ.

ಲುವೆನ್‌ಹಾಕ ತನ್ನ ಜೀವನದುದ್ದಕ್ಕೂ ಸೂಕ್ಷ್ಮದರ್ಶಕವನ್ನು ರಚಿಸುತ್ತ ಸೂಕ್ಷ್ಮ ಜಂತುಗಳ ಅಭ್ಯಾಸ ನಡೆಸಿದ. ಆದರೆ ಅವನ ಕಾರ್ಯದ ಅಪಾರ ಮಹತ್ವ ಅವನಿಗೆ ತಿಳಿಯಲಿಲ್ಲ. ಅವನು ಶೋಧಿಸಿದಂತಹ ಸೂಕ್ಷ್ಮ ಜಂತುಗಳೇ ವಿಷಮಜ್ವರ, ಚಳಿಜ್ವರ, ಆಮಾಂಶ, ಮಾರಿಕಾ ಬೇನೆ, ಪ್ಲೇಗ, ಕ್ಷಯರೋಗ, ಮಹಾರೋಗ ಮುಂತಾದ ಹಲವು ರೋಗಗಳಿಗೆ ಮೂಲ ಕಾರಣವೆಂದು ಅವನಿಗೆ ಆಗ ಹೊಳೆಯಲಿಲ್ಲ. ಅವನ ತರುವಾಯ ಜನ್ಮವೆತ್ತಿ ಬಂದ ಲುಯಿ ಪಾಶ್ಚರ, ರಾಬರ್ಟ ಸ್ಕಾಚ್, ಬ್ರೂಸ್, ರಾಸ್, ರಾವುಕ್ಸ್, ಬೇರಿಂಗ ಮೊದಲಾದವರು ಇದನ್ನು ಸಿದ್ಧಮಾಡಿ ತೋರಿಸಿದರು. *

ಮೆಚ್ಚಿಸಲಾಗದವರನ್ನೂ
ಮೆಚ್ಚಿಸುವ
ಮನೋಹರ ಬಟ್ಟೆಗಳು

# ಮಫತ್‌ಲಾಲ್

2×2 ವಾಯಿಲ್ಸ್
ಮತ್ತು
ಲಿನೋ



ದಿ ಮಫತ್‌ಲಾಲ್ ಫೈನ್ ಸ್ಪಿ. ಅಂಡ್ ಮೆ. ಕಂ. ಲಿ., ನವಸಾರಿ



MF-46

ಅನುದ್ದಿಶ್ಯವೇ
ಅವರ ಚಿತ್ರಗಳ
ವೈಶಿಷ್ಟ್ಯವಾಗಿತ್ತು

# ಕವಿ ರವೀಂದ್ರರ ಚಿತ್ರಕಲೆ



ಇಂಥ 'ಕಾಟು'ಗಳೇ ಅವರ ಚಿತ್ರಕಲೆಗೆ ಸ್ಫೂರ್ತಿಯಿತ್ತವು

ಭಯ್ಯಾಸಾಹೇಬ ಓಂಕಾರ

ವಸಂತ ಋತು ಬಂದೊಡನೆ ಚರಾಚರ ಸೃಷ್ಟಿಗೆಲ್ಲ ನವಚೇತನ ಬರುತ್ತದೆ. ಬಂಗಾಲ ಪ್ರಾಂತದ ಜೀವನದಲ್ಲೂ ಇಂಥ ಒಂದು ವಸಂತ ಋತು ಬಂದು ಹೋಯಿತು. ಈ ವಸಂತದ ಮಹಿಮೆಯಿಂದ ಬಂಗಾಲದ ಜೀವನದ ಸಕಲ ಕ್ಷೇತ್ರಗಳೂ ನವಸ್ಫೂರ್ತಿಯಿಂದ ತುಂಬಿದವು. ಕಾವ್ಯ, ನಾಟ್ಯ, ನೃತ್ಯ, ಗಾಯನ, ಚಿತ್ರಕಲೆ,ದೇಶಾಭಿಮಾನ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಆಮೂಲಾಗ್ರ ಬದಲಾವಣೆಯಾಯಿತು. ಬ್ರಿಟಿಶ್ ರಾಜ್ಯಭಾರದಲ್ಲಿ ಸತ್ವಹೀನವಾಗಿದ್ದ ಭಾರತದ ಬಂಗಾಲದಲ್ಲಿ ಒಂದು ನೂತನ ಜ್ಯೋತಿ ಬೆಳಗಿತು. ಬಂಗಾಲದ ಸರ್ವ ಕ್ಷೇತ್ರಗಳಲ್ಲೂ ಈ ಬದಲಾವಣೆಯನ್ನು ಸಾಧಿಸಿದ ಜಾದೂಗಾರನೆಂದರೆ ರವೀಂದ್ರನಾಥ ಟಾಗೋರರ ಅದ್ವಿತೀಯ ಕಲಾಪ್ರತಿಭೆ.

ರವೀಂದ್ರನಾಥರು ಹುಟ್ಟಿದರು, ಬಂಗಾಲದ ಭಾಗ್ಯರೇಷೆ ಬದಲಾಯಿತು; ಈ ಕವಿಶ್ರೇಷ್ಠರ ಪ್ರತಿಭೆಯಿಂದ ಬಂಗಾಲದ ರಾಜಕೀಯ ಮತ್ತು ಕಲಾಕ್ಷೇತ್ರಗಳಲ್ಲಿ ನವಚೈತನ್ಯ ಬಂದಿತು. ಕವಿಶ್ರೇಷ್ಠರೆಂದು ರವೀಂದ್ರನಾಥರ ಕೀರ್ತಿ ಜಗತ್ತಿನ ತುಂಬೆಲ್ಲ ಪಸರಿಸಿತು. ಜೊತೆಗೆ ಇತರ ಕ್ಷೇತ್ರಗಳಲ್ಲೂ ಅವರ ಕಾರ್ಯ ಅಮೌಲ್ಯವೆನಿಸಿತು.

ಶಾಂತಿನಿಕೇತನದ ನಿಸರ್ಗರಮ್ಯ ವಾತಾವರಣದಲ್ಲಿ ಚಿತ್ರಕಲೆ, ನೃತ್ಯಕಲೆ, ಸಂಗೀತ ಕಲೆ, ವಾಙ್ಮಯ ಕಲೆ, ನಾಟ್ಯಕಲೆ ಮುಂತಾದ ಸಕಲ ಲಲಿತ ಕಲೆಗಳನ್ನು ಕಣ್ವ ಮುನಿಯ ವಾತ್ಸಲ್ಯದಿಂದ ಗುರುದೇವ ರವೀಂದ್ರರು ಪೋಷಿಸಿದರು. ಈ ಎಲ್ಲ ಕಲೆಗಳಿಗೂ ಒಂದು ಹೆಚ್ಚಿನ ಸ್ವರೂಪವನ್ನು ಕೊಡಲು ಅವರು ಪ್ರಯತ್ನಿಸಿದರು. ರವೀಂದ್ರನಾಥರ ಬಳಿಗೆ ಬರುವ ನೂರಾರು ವಿದ್ಯಾರ್ಥಿಗಳು ಜೀವನದ ಒಂದು ಹೊಸ ದೃಷ್ಟಿಕೋಣವನ್ನು ಅವರಿಂದ ಪಡೆದುಕೊಂಡು ತೆರಳುತ್ತಿದ್ದರು. ರವೀಂದ್ರನಾಥರ ಜೀವನದಲ್ಲಿ ತುಂಬಿತುಳುಕುತ್ತಿದ್ದ ಕಾವ್ಯವು ಈ ವಿದ್ಯಾರ್ಥಿ

'ಮನೋಹರ' ದಿಂದ



ರಾಜಕುಮಾರಿ

ಗಳ ಕೃತಿಗಳಲ್ಲಿ ಪ್ರಕಟವಾಗತೊಡಗುತ್ತಿತ್ತು. ಅಂತೆಯೆ ಭಾರತದ ಮಾತ್ರವಲ್ಲ, ಇತರ ದೇಶಗಳ ವಿದ್ಯಾರ್ಥಿಗಳೂ ರವೀಂದ್ರನಾಥರ ಶಾಂತಿ-ನಿಕೇತನದತ್ತ ಆಕರ್ಷಿಸಲ್ಪಡುತ್ತಿದ್ದರು.

ಶಾಂತಿನಿಕೇತನದಲ್ಲಿ ವರ್ಗಗಳು ವಟವೃಕ್ಷದ ನೆರಳಿನಲ್ಲಿ ನಡೆಯುತ್ತಿದ್ದವು. ಕೆಲ ವಿದ್ಯಾರ್ಥಿಗಳು ಗಿಡದ ಟೊಂಗೆಗಳ ಮೇಲೆ ಕುಳಿತು ಗುರುದೇವರ ಮುಖದಿಂದ ಪ್ರವಹಿಸುವ ಜ್ಞಾನ ಗಂಗೆಯನ್ನು ಸ್ವೀಕರಿಸುತ್ತಿದ್ದರು. ನಿಸರ್ಗ ಸೌಂದರ್ಯವನ್ನು ಬದಿಗೊತ್ತಿ ಮನುಷ್ಯ ನಿರ್ಮಿಸುವ ಕೃತಕ ಸೌಂದರ್ಯವನ್ನು ರವೀಂದ್ರರು ತಿರಸ್ಕರಿಸುತ್ತಿದ್ದರು. "ಗಿಡಗಳಿಗೆ ಬೇಕಾದ ಹಾಗೆ ಬೆಳೆಯಲು ಕೊಡಿರಿ. ಹಣ್ಣಾದ ಎಲೆಗಳು ಗಾಳಿಗೆ ತೂರಿ ಹೋಗುವದನ್ನು ನೋಡಿರಿ. ಚಿಗಿತ ಸಸಿ ಹೇಗೆ ಬೆಳೆಯುವದೆಂದು ನಿರೀಕ್ಷಿಸಿರಿ. ಪುಟ್ಟ ಹಕ್ಕಿಗಳು ತಮ್ಮ ಗೂಡುಗಳನ್ನು ಹೇಗೆ ಕಟ್ಟುತ್ತವೆ! ಬಣ್ಣ ಬಣ್ಣದ ಹಕ್ಕಿ ಕೀಟಕಗಳು ಪುಷ್ಪ ಪರಾಗದ ಶೋಧಕ್ಕಾಗಿ ಅಲೆಯುವುದನ್ನು ಕಣ್ತುಂಬ ನೋಡಿರಿ. ದೇವರ ಈ ಆಟವನ್ನು ನೋಡುವುದರಲ್ಲಿ ಆನಂದವಿದೆ. ಅದರಲ್ಲಿಯೇ ಜೀವನದ ನಿಜ ತತ್ತ್ವಜ್ಞಾನವಿದೆ" ಎಂದು ರವೀಂದ್ರನಾಥರು ಹೇಳುತ್ತಿದ್ದರು.

ರವೀಂದ್ರರ ದೃಷ್ಟಿ ಕಲಾವಂತರ ದೃಷ್ಟಿ. ಅವರು ಸ್ವತಃ ಅತಿ ಅಚ್ಚುಕಟ್ಟಿನಿಂದ ಇರುತ್ತಿದ್ದರು. ಅವರ ಬಟ್ಟೆ, ನಡೆ, ನುಡಿ, ಬರವಣಿಗೆ ಎಲ್ಲದರಲ್ಲಿ ಸೌಂದರ್ಯದೃಷ್ಟಿ ಹೆಜ್ಜೆ ಹೆಜ್ಜೆಗೆ ಪ್ರತ್ಯಯಕ್ಕೆ ಬರುತ್ತಿತ್ತು. ಕಾವ್ಯ ಬರೆಯುವಾಗ ಒಂದು ಶಬ್ದವನ್ನು ಕಾಟು ಹಾಕಬೇಕಾದರೆ ಆ ಕಾಟಿಗೆ ಅವರು ಒಂದು ಬಳ್ಳಿಯ ಎಲೆಯ ರೂಪವನ್ನು ಕೊಡುತ್ತಿದ್ದರು. ಆ ಮೇಲೆ ಈ ಕಾಟು ಹಾಕಿದ ಶಬ್ದಗಳಿಂದ ತಯಾರಿಸಿದ ಎಲೆಗಳನ್ನು ಒಂದಕ್ಕೊಂದು ಜೋಡಿಸಿ ಕಾವ್ಯ ಪಂಕ್ತಿಗಳಲ್ಲಿ ಹಾಯ್ದು ಹೋಗುವ ಒಂದು ಬಳ್ಳಿಯನ್ನೇ ತಯಾರಿಸುತ್ತಿದ್ದರು. ಕಾವ್ಯದಲ್ಲಿ ಎಲ್ಲಾದರೊಂದು ಕಡೆ ಶಬ್ದ ಕೂಡದಿದ್ದಾಗ ಅವರು ಸುಮ್ಮನೆ ಗೆರೆಗಳನ್ನು ಹಾಕತೊಡಗುತ್ತಿದ್ದರು. ಆ ಗೆರೆಗಳಿಗೆ ಒಂದು ಆಕಾರ ಬರುತ್ತಿತ್ತು. ಆ ಮೇಲೆ ಅದಕ್ಕೆ ಕೈಕಾಲುಗಳನ್ನು ಜೋಡಿಸಿದಾಗ ಆ ಗೆರೆಗಳಿಂದ ಹುಟ್ಟಿದ ಆಕಾರ ಒಂದು ಚಮತ್ಕಾರಿಕವಾದ ಚಿತ್ರಾಕೃತಿಯ ರೂಪವನ್ನು ಧರಿಸುತ್ತಿತ್ತು. ರವೀಂದ್ರನಾಥರ ಕವಿತೆಗಳು ಹಸ್ತಲಿಖಿತಗಳು ಪುಟಗಳು ಇಂಥ ಅನೇಕ ಚಿತ್ರಕೃತಿಗಳಿಂದ ತುಂಬಿವೆ.

ಈ ಸೌಂದರ್ಯಪೂಜೆಯ ಸ್ವಭಾವದಿಂದಲೇ ಅವರ ಚಿತ್ರಕಲೆ ಜನ್ಮ ತಾಳಿತು. ಆದರೆ ರವೀಂದ್ರನಾಥರು ಕುಂಚವನ್ನೆತ್ತಿ ಕೊಂಡಿದ್ದು ಬಹಳ ತಡವಾಗಿ– ವಯಸ್ಸಿನ ೬೭ನೆಯ ವರ್ಷದಲ್ಲಿ. ಯಾವ ವಯಸ್ಸಿನಲ್ಲಿ :ಸರಕಾರೀ ನೌಕರರು ನಿವೃತ್ತಿ ಹೊಂದಿ ಹತ್ತು ವರ್ಷಗಳು ಕಳೆದಿರುವವೊ, ಯಾವ ವಯಸ್ಸಿನಲ್ಲಿ ಸಾಮಾನ್ಯವಾಗಿ ಎಲ್ಲರ ದೃಷ್ಟಿ ಪರಲೋಕದಲ್ಲಿ ನಟ್ಟಿರುವುದೊ ಆ ವಯಸ್ಸಿನಲ್ಲಿ ರವೀಂದ್ರನಾಥರ ಪ್ರತಿಭೆಯು ಒಂದು ಹೊಸ ಕಲಾಮಾಧ್ಯಮದಲ್ಲಿ ಚಿಗಿಯ ತೊಡಗಿತು. ಎಪ್ಪತ್ತರ ಸನಿಹಕ್ಕೆ ಬಂದಿದ್ದ ಈ ವೃದ್ಧ ಕವಿ ಚಿಕ್ಕ ಬಾಲಕನಂತೆ

ಉತ್ಸಾಹದಿಂದ ಚಿತ್ರಕಲೆಯ ಉಪಾಸನೆಗೆ ತೊಡಗಿದರು. ತಮ್ಮ ಈ ಹೊಸ ಉಪಕ್ರಮವನ್ನು ಕಂಡು ಉಪಹಾಸಗೈಯುವವರಿಗೆ ಅವರು ಅತ್ಯಂತ ಕಾವ್ಯಮಯ ರೀತಿಯಲ್ಲಿ ಉತ್ತರ ನೀಯುತ್ತಿದ್ದರು. "ನನ್ನ ಜೀವನದ ಪ್ರಭಾತವು ಮಂಜುಳ ಕುಹೂರವದಿಂದ ಪ್ರಫುಲ್ಲವಾಗಿತ್ತು. ಈಗ ಅದರ ಸಾಯಂಕಾಲವು ವಿವಿಧ ಬಣ್ಣಗಳ ಛಾಯೆಯಿಂದ ಆಹ್ಲಾದಕರವಾಗಲಿ."

ಕಾವ್ಯದೇವತೆಯ ಉಪಾಸನೆಯಲ್ಲಿ ಜೀವಿತವನ್ನು ಸವೆಸಿದರೂ ಜಗತ್ತಿನ ತುಂಬ ಕೀರ್ತಿ ಸಂಪಾದಿಸಿದರೂ ರವೀಂದ್ರನಾಥರ ಮನದ ತಳಮಳ ಶಾಂತವಾಗಲಿಲ್ಲ. "ಏನು ಬರೆಯಬೇಕೆಂದಿದ್ದೆನೊ ಅದನ್ನು ಬರೆಯುವುದಾಗಲಿಲ್ಲ. ಏನು ಹೇಳಬೇಕಾಗಿತ್ತೋ ಹೇಳುವುದಾಗಲಿಲ್ಲ. ನನ್ನ ಹೃದಯದ ವ್ಯಥೆ ಹೃದಯದಲ್ಲಿಯೆ ಉಳಿಯಿತು. ಆದ್ದರಿಂದ ಹೊಸ ಮಾಧ್ಯಮವನ್ನು ಬಳಸಿಕೊಳ್ಳಬೇಕಾಗಿದೆ. ಹೊಸ ರೂಪದಲ್ಲಿ, ಯಾವುದರಿಂದ ಜನರಿಗೆ ಅವು ಸುಲಭವಾಗಿ ತಿಳಿದಾವೊ ಆ ರೂಪದಲ್ಲಿ ನನ್ನ ಹೃದಯದ ಭಾವನೆ ಮತ್ತು ಕಲ್ಪನೆಗಳನ್ನು ಮುಂದಿಡಬೇಕಾಗಿದೆ." ರವೀಂದ್ರನಾಥರು ಕುಂಚವನ್ನೆತ್ತಿಕೊಂಡಿದ್ದು ಈ ಉದ್ದೇಶದಿಂದಲೇ.

ಚಿತ್ರಕಾರನಾಗುವವನು ಅದರ ಶಿಕ್ಷಣಹೊಂದಬೇಕಾಗುತ್ತದೆ. ಶೇಡ್‌ಲ್ಯಾಟ್, ಪರಸ್ಪೆಕ್ಟಿವ್, ಅನಾಟಮಿ ಇತ್ಯಾದಿಗಳ ಶಿಕ್ಷಣವನ್ನೂ ವರ್ಷಗಟ್ಟಲೆ ಪಡೆಯಬೇಕಾಗುತ್ತದೆ. ಆದರೆ ಇಂಥ ಶಿಕ್ಷಣದ ಅಗತ್ಯ ರವೀಂದ್ರನಾಥರಿಗೆ ಅನಿಸಲಿಲ್ಲ. ಈ ತಾಂತ್ರಿಕ ವಿಚಾರಗಳು ಮಹತ್ವದ್ದಾಗಿರದೆ ಕಲಾವಿದನಲ್ಲಿರುವ ಸಹೃದಯತೆ ಮತ್ತು ಸೌಂದರ್ಯ ದೃಷ್ಟಿಯ ಕೊಡುಗೆಯೆ ಹೆಚ್ಚು ಅಗತ್ಯವಿದೆ. ರವೀಂದ್ರನಾಥರಲ್ಲಿ ಇವೆರಡೂ ತುಂಬಿದ್ದವು. ಅಂತಲೇ ಎಪ್ಪತ್ತರ ಸಮಯದಲ್ಲಿ ಆರಂಭಿಸಿದರೂ ಅವರ ಚಿತ್ರಕಲೆ ರಸಪೂರ್ಣ ಚಿತ್ರಗಳನ್ನು ಸೃಷ್ಟಿಸಿತು. ಅವರ ಚಿತ್ರಗಳಲ್ಲಿ ಬಣ್ಣ ಮತ್ತು ಆಕಾರ ಸ್ವಚ್ಛಂದವಾಗಿ ಮೂರ್ತ ಸ್ವರೂಪ ಪಡೆಯುತ್ತಿದ್ದವು.



ಗೆರೆಗಳಿಂದ ಮೂಡಿದ ಮನುಷ್ಯ

ಚಿತ್ರ ಬಿಡಿಸುವಾಗ ಮನಬಂದ ಮಾಧ್ಯಮವನ್ನು ಅವರು ಉಪಯೋಗಿಸುತ್ತಿದ್ದರು. ಒಮ್ಮೆ ಬ್ರಶ್, ಒಮ್ಮೆ ಹತ್ತಿಯ ಚಂಡು, ಮತ್ತೊಮ್ಮೆ ಕೇವಲ ಬೆರಳುಗಳಿಂದ ಅವರು ಬಣ್ಣ ಬಳೆಯುತ್ತಿದ್ದರು. ಹಲವು ಸಲ ಬಣ್ಣಗಳ ಬದಲು ಕೊಬ್ಬರಿ ಎಣ್ಣೆ, ಸರೀಸು, ಕಾಚು, ಸುಣ್ಣ, ಶಾಯಿಗಳನ್ನುಪಯೋಗಿಸುತ್ತಿದ್ದರು. ಕೆಲ ಸಲ ಹೂ ಎಲೆಗಳನ್ನು ಕಾಗದದ ಮೇಲೆ ಹಿಂಡಿ ಬಣ್ಣ ತಯಾರಿಸುತ್ತಿದ್ದರು. ಮಾಧ್ಯಮದಂತೆ ಅವರ ವಿಷಯವೂ ನಿಶ್ಚಿತವಾಗಿರುತ್ತಿರಲಿಲ್ಲ. ಇಂಥದೇ ಚಿತ್ರವನ್ನು ಬಿಡಿಸಬೇಕೆಂದು ನಿಶ್ಚಯಿಸುವ ಬದಲು "ಯಾವ ಚಿತ್ರವಾಗುತ್ತದೆನೋಡೋಣ" ಎಂಬ ದೃಷ್ಟಿಯಿಂದಲೇ ಚಿತ್ರ ಬರೆಯ ತೊಡಗುತ್ತಿದ್ದರು. "ಅನುದ್ದಿಶ್ಯ" ವೇ ಅವರ ಚಿತ್ರಕಲೆಯ ವೈಶಿಷ್ಟ್ಯವಾಗಿತ್ತು. ಕಾಗದದ ಮೇಲೆ ಅವರು ಬಣ್ಣಗಳ ಕಲೆಗಳನ್ನು ಮಾಡುತ್ತಿದ್ದರು, ಗೆರೆಗಳನ್ನು ಗೀಚುತ್ತಿದ್ದರು. ಆಮೇಲೆ ಅವುಗಳಲ್ಲಿ ಅವರಿಗೆ ಏನಾದರೊಂದು ಆಕಾರ ಗೋಚರಿಸುತ್ತಿತ್ತು. ಆಗ ಆಕಾರದ ಸ್ಪಷ್ಟೀಕರಣಕ್ಕಾಗಿ ಅವರು ಇನ್ನಿಷ್ಟು ಗೆರೆಗಳನ್ನು ಎಳೆದಾಗ ಅವರ ಚಿತ್ರ ತಯಾರಾಗುತ್ತಿತ್ತು. ಆಕಾಶದಲ್ಲಿ ತೇಲುವ ಮೋಡಗಳನ್ನು ನೋಡುವಾಗ ನಮಗೆ ಅಲ್ಲಿ ಏನಾದರೊಂದು ಆಕಾರ ಕಾಣುವುದಲ್ಲವೆ ? ಅಲ್ಲಿ ಒಮ್ಮೆ ರಥಾಕೃತಿ ಕಂಡರೆ ಮತ್ತೊಂದು ನಿಮಿಷದಲ್ಲಿ ಆನೆಯ ಆಕೃತಿ



ಕಾಣುವುದು. ಅದರಂತೆ ರವೀಂದ್ರನಾಥರ ಚಿತ್ರಗಳ ಅವಸ್ಥೆಯೂ ಇತ್ತೆನ್ನಬಹುದು.

ಸಾಮಾನ್ಯರ ಸ್ವಪ್ನಕ್ಕೂ ರವೀಂದ್ರನಾಥರಂಥ ಅಭಿಜಾತ ಕಲಾವಿದರ ಸ್ವಪ್ನಕ್ಕೂ ಅಂತರವಿರುತ್ತದೆ. ಪರುಷಮಣಿಯ ಸ್ಪರ್ಶದಿಂದ ಕಬ್ಬಿಣ ಬಂಗಾರವಾಗುವಂತೆ ಅರ್ಥಹೀನ ಸ್ವಪ್ನಗಳು ಕೂಡ ಕವಿ ಪ್ರತಿಭೆಯ ಕುಲುಮೆಯಿಂದ ಹೊರಬಿದ್ದೊಡನೆ ಏನಾದರೊಂದು ಅರ್ಥ ತಾಳುತ್ತವೆ. ರವೀಂದ್ರನಾಥರು ಒಂದು ಆಟವೆಂದು ಬರೆದ ಆ ಚಿತ್ರಗಳು, ಒಂದು ಮೋಡಕ್ಕೆ ಇನ್ನೊಂದು ಮೋಡವನ್ನು ಜೋಡಿಸಿ ತಯಾರಿಸಿದ ಆ ಆಕೃತಿಗಳು ಅರ್ಥಹೀನವಾದವುಗಳಲ್ಲ. ಆದರೆ ಶಬ್ದಗಳಿಂದಲೂ ವರ್ಣಿಸಲು ಸಾಧ್ಯವಿರದಂಥ ಮನಸ್ಸಿನಾಳದಲ್ಲಿಯ ಭಾವಗಳನ್ನು ನಿದರ್ಶಿಸುವವಾಗಿವೆ. ಈ ಕಲಾಕೃತಿಗಳನ್ನು ಕಂಡಾಗ "ಇದೇನೂ ಹುಡುಗಾಟಿಕೆಯ ಗೆರೆಗಳಲ್ಲ. ಇದರಲ್ಲಿ ಜೀವವಿದೆ, ರಹಸ್ಯವಿದೆ, ಅಂತರ್ವೇದನೆಯಿದೆ. ವ್ಯಕ್ತಿತ್ವವಿದೆ" ಎಂದು ಅನಿಸುತ್ತದೆ.

ಜಗತ್ತಿನ ಕಲಾಪ್ರಪಂಚದಲ್ಲಿ ಅಮರಳಾಗಿರುವ ಭಾರತದ ಶ್ರೇಷ್ಠ ಚಿತ್ರಕಾರ ಅಮೃತಾ ಶೇರಗಿಲ್ ರವೀಂದ್ರನಾಥರ ಚಿತ್ರಗಳನ್ನು ಕಂಡಾಗ "ಅವರ ಕಾವ್ಯಗಳಿಗಿಂತಲೂ ಅವರ ಚಿತ್ರಗಳು ನನಗೆ ಹೆಚ್ಚು ಮೆಚ್ಚಿಗೆಯಾಗಿವೆ" ಎಂದಳು.

ರವೀಂದ್ರನಾಥರ ಚಿತ್ರಗಳ ಪ್ರದರ್ಶನ ಲಂಡನ್, ಪ್ಯಾರಿಸ್, ಮಾಸ್ಕೊ, ನ್ಯೂಯಾರ್ಕಗಳಲ್ಲಿ ಜರುಗಿ ಅಲ್ಲಿ ಕೂಡ ಅವುಗಳ ಪ್ರಶಂಸೆಯಾಯಿತು.

ಪ್ರಶಂಸೆಯಂತೆ ಕಟುಟೀಕೆಯೂ ರವೀಂದ್ರನಾಥರ ಪಾಲಿಗೆ ಬಂತು. ಭಾರತದಲ್ಲಿ ಆಗ ವಾಸ್ತವವಾದೀ ಕಲಾವಿಷ್ಕಾರದ ಭರಭರಾಟಿಯಿತ್ತು. ರವೀಂದ್ರನಾಥರ ಚಿತ್ರಕಲೆ ವಾಸ್ತವ ಶೈಲಿಗೆ ಬಲವಾದ ಧಕ್ಕೆಯನ್ನಿತ್ತಿತ್ತು. "ವಾಙ್ಮಯದ ಅತಿ ಪರಿಚಯದಿಂದ ಪ್ರತ್ಯೇಕ ಕಲಾಕ್ಷೇತ್ರದ ಆವಿಷ್ಕಾರಕ್ಕೆ ಅರ್ಥ ಹಚ್ಚಿ ನೋಡುವ ಕೆಟ್ಟ ಚಟ ನಮಗೆ ಅಂಟಿಕೊಂಡಿದೆ. ಸೌಂದರ್ಯದ ಅರ್ಥವನ್ನೇನು ಮಾಡುತ್ತೀರಿ?" ಎಂದು ರವೀಂದ್ರರು ಅನ್ನುತ್ತಿದ್ದರು.

ರವೀಂದ್ರನಾಥರಂಥ ಜಗನ್ಮಾನ್ಯ ವ್ಯಕ್ತಿ ಚಿತ್ರಕಲಾ ಜಗತ್ತಿನಲ್ಲಿ ಪುರಸ್ಕರಿಸಿದ ಈ ತತ್ವಜ್ಞಾನ ಒಂದು ವಜ್ರಾಘಾತವೇ ಆಗಿತ್ತು. ರವೀಂದ್ರನಾಥರು ಜಗತ್ತಿನ ತುಂಬೆಲ್ಲ ಪ್ರವಾಸ ಮಾಡಿದ್ದರು. ಇತರ ದೇಶಗಳಲ್ಲಿ ಬೆಳೆಯುತ್ತಿದ್ದ ನವಕಲೆಯ ಕಲ್ಪನೆ ಅವರಿಗಿತ್ತು. ಭಾರತದ ಕಲೆಯ ಪರಂಪರಾಗತ ಪ್ರವೃತ್ತಿಯು ವಾಸ್ತವತೆಗಿಂತ ಹೆಚ್ಚು ಆಧ್ಯಾತ್ಮಿಕವಾಗಿದ್ದು ಆಂತರಿಕ ಸೌಂದರ್ಯವೇ ಅದರ ಆತ್ಮವೆಂಬುದು ಅವರಿಗೆ ತಿಳಿದಿತ್ತು. ಆದ್ದರಿಂದ ತಾವು ನೆಡುತ್ತಿದ್ದ ಹೊಸ ಕಲಾವಿಚಾರದ ಬೀಜವು ಭಾರತದ ಭೂಮಿಗೆ ಹೆಚ್ಚು ಯೋಗ್ಯವಾದೀತು ಎಂದು ಅವರಿಗೆ ಬಲವಾದ ನಂಬಿಕೆಯಿತ್ತು.

ಆದರೆ ಇತರ ಸಮಕಾಲೀನರಿಗೆ ಈ ದೂರದೃಷ್ಟಿಯಿರಲಿಲ್ಲ. ಅವರು ರವೀಂದ್ರರ ಮೇಲೆ ಟೀಕಾಸ್ತ್ರವೆತ್ತಿದರು. "ರವೀಂದ್ರನಾಥರು ಕವಿಗಳೆಂದು ಜಗನ್ಮಾನ್ಯರಾಗಿರಬಹುದು. ಅಂದ ಮಾತ್ರಕ್ಕೆ ಅವರು ಚಿತ್ರಕಲಾ ರಂಗದಲ್ಲಿ ಕೈ-

ಹಾಕಬೇಕೇನು?" ಎಂದು ಅವರಲ್ಲಿ ಕೆಲವರೆಂದರೆ "ಇದು ಮುದಿ ಹುಚ್ಚು" ಎಂದು ಇನ್ನು ಕೆಲವರೆಂದರು.

ರವೀಂದ್ರನಾಥರೊಡನೆ ವಾದ ಹಾಕಲೆಂದು ಅವರ ಬಳಿ ಹೋದ ಟೀಕಾಕಾರರು "ಗುರುದೇವ, ನಿಮ್ಮ ಚಿತ್ರಗಳ ಅರ್ಥವೇನು!" ಎಂದು ಮುಗ್ಧರಂತೆ ಸೋಗು ಹಾಕಿ ಕೇಳುತ್ತಿದ್ದರು. ಅದಕ್ಕೆ ರವೀಂದ್ರರು "ಅರ್ಥವನ್ನು ಆ ಚಿತ್ರಗಳೇ ಹೇಳುವವು. ಅರ್ಥವನ್ನು ನಾನು ಹೇಳಿದರೆ ನಿಮ್ಮ ಮತ್ತು ಆ ಚಿತ್ರಗಳ ಕಿವಿಮಾತಿನ ನಡುವೆ ಬಾಯಿ ಹಾಕಿದಂತಾದೀತು. ನಿಮ್ಮ ಅಭಿಪ್ರಾಯದಲ್ಲಿ ಅವು ಮೂಕವಾಗಿವೆಯಾದರೆ ಅವುಗಳ ಹವ್ಯಾಸವನ್ನು ನೀವು ಹಿಡಿಯಬೇಡಿರಿ. ಅವು ನಿರುಪಯೋಗಿ, ಹೀನ ಎಂದು ತಿಳಿಯಿರಿ. ಅರ್ಥವನ್ನು ತಿಳಿಸಿ ಹೇಳಲು ಒಬ್ಬಾತ ಬೇಕಾಗುವಂಥ ಕಲಾಕೃತಿಗಳಲ್ಲ ಇವು." ಎನ್ನುತ್ತಿದ್ದರು.

ರವೀಂದ್ರನಾಥರು ತಮ್ಮ ಚಿತ್ರಗಳ ವಿಷಯವಾಗಿ ಏನನ್ನೂ ಎಂದೂ ಬರೆಯಲಿಲ್ಲ. ಹೂಗಳ ಸುವಾಸನೆಯನ್ನು ವರ್ಣಿಸಲಾದೀತೆ? ಚಿತ್ರಗಳ ರಸಗ್ರಹಣವನ್ನು ಕಣ್ಣುಗಳಿಂದಲೇ ಮಾಡಿಕೊಳ್ಳಬೇಕು ಎಂದು ಅವರ ಅಭಿಪ್ರಾಯವಿತ್ತು.

ಇಂದು ನವ ಕಲೆಯ ವೃಕ್ಷ ವಿಶಾಲವಾಗಿ ಬೆಳೆದಿರುವುದರಿಂದ ರವೀಂದ್ರನಾಥರ ಚಿತ್ರಗಳು ಕ್ರಾಂತಿಕಾರಕವೆಂದು ಜನರಿಗನಿಸುವುದಿಲ್ಲ. ಭಾರತದ ಚಿತ್ರಕಲೆಯ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟ ಎಂದು ಈ ಚಿತ್ರಗಳನ್ನೀಗ ಭಾರತ ಸರಕಾರವು ಸಂಗ್ರಹಾಲಯದಲ್ಲಿರಿಸಿದೆ. *



ದುಃಖದ ಛಾಯೆ



ಪೂರ್ಣತಾವಾದಿ: ತಾನೂ ಕಷ್ಟಪಟ್ಟು ಇನ್ನೊಬ್ಬರಿಗೂ ಕಷ್ಟ ಕೊಡುವವನು.

— ಕೆನ್ನೆಥ ಎಲ್. ಕ್ರಿಚ್ ಬಾವುಮ್.

ಅರ್ಹತೆ: ತನಗೆ ಬೇಡವಾದ ಕೆಲಸವನ್ನು ಮಾಡಲು ಇನ್ನೊಬರನ್ನು ಹುಡುಕುವ ಕೌಶಲ.

— ಎಡ್ವರ್ಡ ಎಚ್. ಡ್ರೆಶನಾಕ್.

ಪ್ರಗತಿ ಅಪವಾದ; ನಿಯಮವಲ್ಲ.

— ಹೆನ್ರಿ ಮೋರ್

ಸರಕಾರಿ ಕಚೇರಿ: ಟ್ಯಾಕ್ಸಕೊಡುವವರ ಜೇಬು ಇದ್ದಲ್ಲಿ.

ಸದ್ಯದಲ್ಲೆ ಭಾರತ ಈ ವಿಷಯದಲ್ಲಿ ಸ್ವಾವಲಂಬಿಯಾಗಬಹುದು

# ಇಂದಿನ ಯುಗದ ಅತ್ಯಾವಶ್ಯಕ ವಸ್ತು—ಪೆಟ್ರೋಲಿಯಂ

ಟಿ. ಎಸ್. ಶ್ರೀಕಂಠಯ್ಯ

ಮಾನವನಿಗಿಂತಲೂ ಮೊದಲು ಪ್ರಕೃತಿಯಲ್ಲಿ ಪೆಟ್ರೋಲಿಯಮ್ ಜನಿಸಿತು. ೫೦೦,೦೦,೦೦೦ ವರ್ಷಗಳಿಗೆ ಹಿಂದಿನಿಂದಲೂ ಪೆಟ್ರೋಲಿಯಮ್ ಇರುವುದುಂಟು ಎಂದು ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ ಇಂದು ಅದಕ್ಕೋಸ್ಕರ ಮಾನವ ಅನವರತ ಯತ್ನ ನಡೆಸುತ್ತಿದ್ದಾನೆ. ತನ್ನ ಯತ್ನ ವ್ಯರ್ಥವಾದಾಗ ಅದಕ್ಕೋಸ್ಕರ ಸುರಿದ ಲಕ್ಷಗಟ್ಟಲೆ ರೂಪಾಯಿಗಳನ್ನು ಕುರಿತು ಯೋಚಿಸುತ್ತಾನೆ. ಅದೇರೀತಿ, ದೊರೆತಾಗ ಅದರಿಂದ ಕೋಟಿಗಟ್ಟಲೆ ಹಣವನ್ನು ಗಳಿಸುವ ಯೋಚನೆ ಮಾಡುತ್ತಾನೆ. ಕಲ್ಲೆಣ್ಣೆಯ ಇತಿಹಾಸ, ಉಪಯೋಗ ಕ್ರಮವಾಗಿ ಬೆಳೆದು ಬಂದು ಇಂದು ಯುದ್ಧತಂತ್ರದ ಅತ್ಯವಶ್ಯಕ ಖನಿಜವೆಂದು ಜಗತ್ತಿನಲ್ಲಿ ಅಗ್ರಸ್ಥಾನ ಗಳಿಸಿದೆ.

ಕಲ್ಲೆಣ್ಣೆಯ ಉದ್ಭವ ಹೇಗೆ ? ಎಂಬುದರ ಬಗ್ಗೆ ಸಾಕಷ್ಟು ಬಿಸಿ ಚರ್ಚೆ ನಡೆದಿದೆ. ಅದಕ್ಕಾಗಿ ವಿಜ್ಞಾನಿಗಳು ಮೇಜು ಕುಟ್ಟಿ, ವಿವಿಧ ರೀತಿಯ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಸ್ಥೂಲವಾಗಿ ತೈಲ ಈ ರೀತಿಯಾಗಿ ಆಗುತ್ತದೆಯೆಂದು ಹೇಳಬಹುದು. ಪುರಾತನ ಕಾಲದಲ್ಲಿ ಅಖಂಡವಾಗಿ ಬೆಳೆದಿದ್ದ ಅನೇಕ ಜಾತಿಯ ಸಸ್ಯಗಳು, ಜೀವಿಸಿದ್ದ ಪ್ರಾಣಿಗಳು, ಕ್ರಮವಾಗಿ ಸಮುದ್ರ ತಳವನ್ನು ಸೇರಿದವು. ಮರಳಿನ ಕಣ ಮುಂತಾದವುಗಳಿಂದ ಆಗುತ್ತಿದ್ದ ಜಲಜ ಶಿಲೆಗಳಲ್ಲಿ ಈ ರಾಸಾಯನಿಕ ಪದಾರ್ಥಗಳು ಬೆರಕೆ ಹೊಂದಿದವು. ಕೆಸರಿನ ಮೇಲುಭಾಗದಲ್ಲಿ ಜೀವಿಸುವ ಸೂಕ್ಷ್ಮಜೀವಿಗಳಿಂದ ನೈಟ್ರೋಜನ್ ಮತ್ತು ಆಕ್ಸಿಜನ್ ಬೇರ್ಪಟ್ಟವು. ಮುಂದೆ, ಶಾಖ ಒತ್ತಡ ಮತ್ತು ರಾಸಾಯನಿಕ ಕಾರ್ಯಗಳಿಂದ, ವಿದ್ಯುತ್ ವಿಕಿರಣ ಕ್ರಿಯಾಶಕ್ತಿಯಿಂದ ಮತ್ತು ಇನ್ನೂ ಗೊತ್ತಿಲ್ಲದ ಎಷ್ಟೋ ವಿಧಾನಗಳಿಂದ ಜಲಜನಕ ಮತ್ತು ಇಂಗಾಲಗಳು ಒಂದು ಪ್ರಮಾಣದಲ್ಲಿ ಬೆರೆತು ತೈಲವಾಗಿ ಮಾರ್ಪಟ್ಟವು. ಈ ರೀತಿಯಿಂದ ಉಂಟಾದ ಕಲ್ಲೆಣ್ಣೆ ಮೇಲಕ್ಕೆ ಶಿಲೆಗಳಲ್ಲಿರುವ ರಂಧ್ರಗಳ ಮೂಲಕ ತಳ್ಳಲ್ಪಡುತ್ತದೆ. ಈ ರೀತಿಯಾಗಿ ತಳ್ಳಲ್ಪಟ್ಟ ತೈಲ ಅನುಕೂಲವಾದ ಸ್ಥಳಗಳಿಗೆ ಹರಿದು ಶೇಖರಣೆ ಹೊಂದುತ್ತದೆ. ಇದಕ್ಕೆ "ಬಲೆಗಳು" (Traps) ಎಂದು ಕರೆಯುತ್ತಾರೆ. ಈ ಟ್ರಾಪ್‌ಗಳು ಎರಡು ವಿಧವಾಗಿರುತ್ತವೆ. ಒಂದು, ಯಾವುದೋ ಒಂದು ನಿರ್ದಿಷ್ಟವಾದ ಕಾಲದಲ್ಲಿ ಉಂಟಾದ ಭೂಸ್ತರಗಳಲ್ಲೂ ಮತ್ತೊಂದು ಪದರಗಳು ಮಡಿಕೆ ಬಿದ್ದೋ, ಅಥವಾ ಬೇರೆ ಯಾವುದೋ

ರೀತಿಯಲ್ಲಿ ವ್ಯತ್ಯಾಸ ಹೊಂದಿದ ಪದರಗಳಲ್ಲೂ ಸಿಗುತ್ತದೆ. ಇದನ್ನು ಕ್ರಮವಾಗಿ ಸ್ಟ್ರಾಟಿಗ್ರಾಫಿಕ್ (Stratigraphic) ಮತ್ತು ಸ್ಟ್ರಕ್ಚರಲ್ ( Structural ) ಎಂದು ಕರೆಯುತ್ತಾರೆ. ಪ್ರಪಂಚದ ಬಹುಭಾಗದ ತೈಲ ನಿಕ್ಷೇಪಗಳು ಎರಡನೆಯ ಗುಂಪಿಗೇ ಸೇರಿವೆ. ಈ ರೀತಿಯ ಟ್ರಾಪ್ ಒಂದನ್ನು ಉದಾಹರಣೆಗಾಗಿ ಚಿತ್ರದಲ್ಲಿ ತೋರಿಸಿದೆ. ಎರಡೂ ಕಡೆಯ ಒತ್ತಡಗಳಿಂದ ಮನೆಯ ಇಪ್ಪಾರಿನಂತೆ ದ್ವಿಮುಖವಾಗಿ ಇಳಿಜಾರುತ್ತಾ ಹೋಗುವ ಈ ರಚನೆಗೆ ಆಂಟಿಕ್ಲೈನ್ (Anticline) ಎಂದು ಕರೆಯುತ್ತಾರೆ.



ಆಂಟಿಕ್ಲೈನ್

ಪ್ರಕೃತಿಯಲ್ಲಿ ತೈಲವು ಘನ, ದ್ರವ ಮತ್ತು ಅನಿಲ ರೂಪಗಳಲ್ಲಿ ದೊರೆಯುತ್ತದೆ. ಸಾಧಾರಣವಾಗಿ ತೈಲವು ಕಪ್ಪುಛಾಯೆಯಲ್ಲಿದ್ದು ಜೇಡಿಮಣ್ಣು ಅಥವಾ ಜೇಡಿ ಪದರಗಲ್ಲು ( Clays or shales ) ಎಂಬ ಶಿಲೆಗಳಲ್ಲಿ ದೊರೆಯುತ್ತದೆ.

ತೈಲಕ್ಕಿರುವ ಮಹತ್ವವನ್ನರಿತು ೧೯೫೫ ರಲ್ಲಿ ಡೆಹ್ರಾಡೂನಿನಲ್ಲಿ ಸರಕಾರದಿಂದ ಸ್ಥಾಪಿತವಾದ ಆಯಿಲ್ ಆಂಡ್ ನ್ಯಾಚರಲ್ ಗ್ಯಾಸ್ ಕಮೀಷನ್ (ಓ ಎನ್. ಜಿ. ಸಿ.) ಹಗಲಿರಳೂ ತೈಲದ ಶೋಧನೆಯಲ್ಲಿ ತೊಡಗಿದೆ. ಓ. ಎನ್. ಜಿ. ಸಿ. ತನ್ನ ತಾಂತ್ರಿಕಜ್ಞರ ಬಲವನ್ನು ಕ್ರಮವಾಗಿ ಹೆಚ್ಚಿಸಿಕೊಳ್ಳುತ್ತಾ ನಡೆದಿದೆ. ಎರಡನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗೆ ೧,೪೭೨ ಇಂಜನಿಯರರನ್ನೂ, ೬೯೫ ಭೂ-ಭೌತಶಾಸ್ತ್ರಜ್ಞರನ್ನೂ, ೫೫೩ ಭೂ-ಶಾಸ್ತ್ರಜ್ಞರನ್ನೂ ಮೂರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗೆ ೫,೫೪೦ ಇಂಜನಿಯರರನ್ನೂ, ೧,೭೧೦ ಭೂ-ಭೌತ ಶಾಸ್ತ್ರಜ್ಞರನ್ನೂ ಮತ್ತು ೧,೧೭೫ ಭೂ ಶಾಸ್ತ್ರಜ್ಞರನ್ನೂ ಹೊಂದಬೇಕೆಂದು ಯೋಚಿಸಿದೆ. ಈ ರೀತಿ ತನ್ನ ಬಲವನ್ನು ಹೆಚ್ಚಿಸಿಕೊಳ್ಳುತ್ತಾ ತೈಲಕ್ಕಾಗಿ ಹೆಚ್ಚಿನ ಅನ್ವೇಷಣೆಯನ್ನು ಮಾಡಬೇಕೆಂದಿದೆ.

ತೈಲದ ಶೋಧನೆಗೆ ಹಲವಾರು ಸರ್ವೆ ವಿಧಾನಗಳಿವೆ. ಇವುಗಳಲ್ಲಿ ಜಿಯಲಾಜಿಕಲ್ ಸರ್ವೆ, ಮ್ಯಾಗ್ನಟಿಕ್ ಸರ್ವೆ, ಗ್ರಾವಿಟಿ ಸರ್ವೆ, ಸಿಸ್ಮಿಕ್ ಸರ್ವೆ ಎಂಬುವು ಮುಖ್ಯವಾಗಿವೆ. ಇವುಗಳಿಂದ ತೈಲದ ಇರುವಿಕೆಗೆ ಅನುಕೂಲವಾದ ಸ್ಥಳಗಳನ್ನು ಪತ್ತೆಹಚ್ಚಬಹುದು. ಆದರೆ, ಶಿಲೆಗಳನ್ನು ಕೊರೆದು, ತೈಲವನ್ನು ಕಾಣುವವರಿಗೆ 'ಸಿಕ್ಕೇ-ಸಿಕ್ಕುತ್ತದೆ' ಎಂದು ಹೇಳುವುದು ಅಸಾಧ್ಯದ ಮಾತು. ಮೇಲಾಗಿ ತೈಲವನ್ನು ಹೊಂದುವುದಕ್ಕೆ ತಗಲುವ ಸಮಯ ಇಷ್ಟೇ ಎಂದು ಹೇಳಲು ಅಸಾಧ್ಯ. ಉದಾಹರಣೆಗೆ.— ಆಸ್ಟ್ರೇಲಿಯಾ ೧೫ ದಶಲಕ್ಷ ಪೌಂಡುಗಳನ್ನು ಖರ್ಚುಮಾಡಿ ೫೦ ವರ್ಷಗಳವರೆಗೆ ಸತತವಾಗಿ ಶೋಧನೆ ನಡೆಸಿದನಂತರ ತೈಲವನ್ನು ಕಂಡಿತು. ಕೆನಡಾ ೧೨೫ ದಶಲಕ್ಷ ಡಾಲರುಗಳನ್ನು ಮುವತ್ತು ವರ್ಷಗಳ ಕಾಲ ನೀರಿನಂತೆ ಖರ್ಚು ಮಾಡಿ ತೈಲವನ್ನು ಹೊಂದಿತು. ಪಾಕಿಸ್ತಾನವು ಏಳುಕೋಟಿ ರೂಪಾಯಿಗಳನ್ನು ( ೧೯೫೪ ರ ವರೆಗೆ ) ಖರ್ಚು ಮಾಡಿದರೂ ತೈಲದ ಇರುವಿಕೆಯನ್ನು ತಿಳಿಯಲು ಅಷ್ಟಾಗಿ ಯಶಸ್ವಿಯಾಗದೆ ಇನ್ನೂ ಕಣ್ಣು ಕಣ್ಣುಬಿಡುತ್ತದೆ

ಇದನ್ನು ಗಮನಿಸಿದರೆ, ಭಾರತ ನಿಜವಾಗಿಯೂ ಅದೃಷ್ಟಶಾಲಿ. ತಾನು ಖರ್ಚುಮಾಡುತ್ತಿರುವ ಹಣಕ್ಕೆ ತಕ್ಕಂತೆ ಪ್ರತಿಸಾರಿಯೂ ಜಯವೇ ಲಭಿಸುತ್ತಿದೆ. ಭಾರತದಲ್ಲಿ ತೈಲದ

ಮೊದಲನೆಯ ಉತ್ಪಾದನೆಯ ಕೀರ್ತಿ 'ದಿಗ್ ಬಾಯ್' ಪ್ರದೇಶಕ್ಕೆ ಸಲುತ್ತದೆ. ೧೮೯೯ ಕ್ಕೆ ಆಸ್ಸಾಂ ಆಯಿಲ್ ಕಂಪನಿಯವರಿಂದ ನಡೆಸಲ್ಪಡುತ್ತಿದ್ದ ಈ ಪ್ರದೇಶವೊಂದೇ ಭಾರತಕ್ಕೆ ಮೊದಲು ತೈಲವನ್ನು ಒದಗಿಸುತ್ತಿತ್ತು. ಈಗಲೂ ದಿಗ್‌ಬಾಯ್ ದೇಶಕ್ಕೆ ಮಹತ್ತರ ಸೇವೆ ಸಲ್ಲಿಸುತ್ತದೆ.

ಹಲವಾರು ದಶಕಗಳು ಕಳೆದ ನಂತರ ೧೯೫೪ ರಲ್ಲಿ ಈ ಪ್ರದೇಶದಿಂದ ನೈರುತ್ಯಕ್ಕೆ ನಹರ್ ಕೋಟಿಯಾ ಎಂಬಲ್ಲಿ ಹೊಸದೊಂದು ತೈಲ ಕ್ಷೇತ್ರವು ಪತ್ತೆಯಾಯಿತು. ಹತ್ತಿರದಲ್ಲೇ ಮೊರಾನ್ ಮತ್ತು ಹಗ್ರಿಜನ್ ಕ್ಷೇತ್ರಗಳೂ ಪತ್ತೆಯಾಗಿವೆ.

ಜಗತ್ತಿನ ಒಟ್ಟು ಉತ್ಪಾದನೆಯಲ್ಲಿ (೧೯೫೯ ರಲ್ಲಿ ೧,೦೦,೬೫,೦೦,೦೦೦ ಟನ್) ಭಾರತ ಕೇವಲ ೦·೦೬% ತೈಲವನ್ನು ಉತ್ಪಾದಿಸುತ್ತಿದ್ದರೆ ಅಮೇರಿಕ ೩೮%ರಷ್ಟು ಉತ್ಪಾದಿಸುತ್ತಿದೆ. ಭಾರತ ಸದ್ಯ ಉತ್ಪಾದಿಸುತ್ತಿರುವ ೪,೦೦,೦೦೦ ಟನ್ನು ತೈಲದಿಂದ ಭಾರತದ ಬೇಡಿಕೆಯ ಶೇ-ಕಡಾ ೮ ರಷ್ಟು ಮಾತ್ರ ದೊರೆಯುತ್ತದೆ; ಪ್ರತಿ ವರ್ಷವೂ ಭಾರತ ಕಚ್ಚಾತೈಲ ಹಾಗೂ ಮತ್ತಿತರ ಪೆಟ್ರೋಲಿಯಮ್ ಪದಾರ್ಥಗಳನ್ನು ಆಮದು ಮಾಡಿಕೊಳ್ಳಲು ವಿದೇಶಿ ವಿನಿಮಯ ರೂಪದಲ್ಲಿ ೧೫೦ ಕೋಟಿ ರೂಪಾಯಿಗಳಿಗೂ ಹೆಚ್ಚು ಖರ್ಚು ಮಾಡುತ್ತಿದೆ.

ಸದ್ಯದಲ್ಲಿ ಹಿಮಾಲಯ ಪರ್ವತಗಳ ತಪ್ಪಲು ಪ್ರದೇಶ, ಸಿಂಧೂ ಗಂಗಾ ನದಿಗಳ ಬಯಲು ಪ್ರದೇಶ, ಕಚ್ಛ, ಸೌರಾಷ್ಟ್ರ, ರಾಜಸ್ಥಾನ, ಮುಂಬಯಿ (ಕ್ಯಾಂಬೆ,) ಆಸ್ಸಾಂ, ಪಶ್ಚಿಮ ಬಂಗಾಲ, ಪೂರ್ವ ಪಶ್ಚಿಮ ತೀರ ಪ್ರದೇಶಗಳು, ಈ ಪ್ರದೇಶಗಳಲ್ಲಿ (ಒಟ್ಟು ೪ ಲಕ್ಷ ಚದರ ಮೈಲು) ತೈಲ ಇರಬಹುದೆಂದು ಊಹೆಮಾಡಲಾಗಿದೆ. ಸೋವಿಯತ್ ತಜ್ಞರ ಸೂಚನೆಯಂತೆ, ಪುರಾತನ ಕಾಲದಿಂದ ಪ್ರಸಿದ್ಧಿ ಹೊಂದಿದ್ದ, ಜ್ವಾಲಾಮುಖಿ ಪ್ರದೇಶದಲ್ಲಿ ೧೯೫೭ ರ ಎಪ್ರಿಲ್ ೨೦ ರಂದು ಭಾವಿ ತೋಡಲಾಯಿತು. ಇಲ್ಲಿ, ೬೦೦೦ ಅಡಿ ತಲುಪುವುದರಲ್ಲೇ ನೈಸರ್ಗಿಕ ಅನಿಲವು ಪತ್ತೆಯಾಯಿತು. ಆದರಿಂದ ಉತ್ಸಾಹಗೊಂಡ ಪರಿಣಿತರು ಹೊಶಿಯಾರಪುರ ಪ್ರದೇಶದಲ್ಲೂ ಭೈರಿಗೆಯಿಂದ ಕೊರೆದು ತೈಲವನ್ನು ಪತ್ತೆ ಹಚ್ಚಿದ್ದಾರೆ. ಜಾನೋರಿಯಲ್ಲಿ ತೈಲದ ಇರುವಿಕೆಯನ್ನು ಊಹೆ ಮಾಡಿದ್ದಾರೆ.

ಭಾರತದ ತೈಲಶೋಧದ ದಿಕ್ಕನ್ನೇ ಬದಲಿಸು



ವಂತಹ ದಿವಸ, ೧೯೫೮ ರ ಸಪ್ಟೆಂಬರ್ ಮೊದಲನೆಯ ವಾರದಲ್ಲಿ ಬಂದಿತು. ಕ್ಯಾಂಬೆ ಪ್ರದೇಶದ ಪಶ್ಚಿಮಕ್ಕೆ ಲೂನಜ್ ಎಂಬ ಹಳ್ಳಿಯಲ್ಲಿ ತೋಡಲಾದ ಮೊದಲ ಭಾವಿಯಲ್ಲೇ ಕೇವಲ ೫,೩೬೮ ಅಡಿಗಳ ಆಳದಲ್ಲಿ ಉನ್ನತ ಒತ್ತಡದ ತೈಲ ಸಿಕ್ಕಿತು ಎಂದು ಸಾರಿದ್ದ ವರ್ತಮಾನ ಪತ್ರಿಕೆಗಳನ್ನು ಓದಿ ಆನಂದಪಟ್ಟವರಿಗೆ ಲೆಕ್ಕವೇ ಇಲ್ಲ. ಮೊದಲನೆಯ ಭಾವಿಯ ಹತ್ತಿರ ವೀಕ್ಷಿಸುತ್ತಾ ನಿಂತಿದ್ದ ಪ್ರಧಾನಿ ನೆಹರೂರವರ ಶುಭ್ರವಾದ ಬಿಳಿಯ ಉಡುಪಿಗೆ ಅಂದು ತೈಲಾಭಿಷೇಕವಾಯಿತು. ಮೊದಲ ಭಾವಿಯಲ್ಲಿ ತೈಲ ದೊರೆತಿದ್ದು ಉತ್ಸಾಹಕ್ಕೆ ರೆಕ್ಕೆ ಮೂಡಿದಂತಾಗಿ ಮತ್ತೆ ಏಳು ಭಾವಿಗಳನ್ನು ತೋಡಲಾಯಿತು. ಏಳು ಭಾವಿಗಳಲ್ಲೂ ತೈಲ ಸೂಚನೆ ಕಂಡುಬಂದಿತೆಂದ ಮೇಲೆ ಭಾರತದ ಅದೃಷ್ಟವನ್ನು ಹೇಳಬೇಕೇ? ಸದ್ಯಕ್ಕೆ ಕ್ಯಾಂಬೆ ಪ್ರದೇಶದಲ್ಲಿ ಒಟ್ಟು ಒಂಭತ್ತು ಭಾವಿಗಳನ್ನ ತೋಡಲಾಗಿದ್ದು ಎಂಟು ಭಾವಿಗಳಲ್ಲಿ ತೈಲದ ಇರುವಿಕೆ ಪತ್ತೆಯಾಗಿದೆ. ಇದು ತೈಲಾನ್ವೇಷಣ ಇತಿಹಾಸದಲ್ಲಿ ಅಪರೂಪವೇ. ಎರಡು ರುಮೇನಿಯನ್ ಮತ್ತು ಎರಡು ಸೋವಿಯತ್ ಕೊರೆತದ ಯಂತ್ರಗಳು ಈ ಪ್ರದೇಶದಲ್ಲಿ ಹಾಲಿ ಕೆಲಸ ಮಾಡುತ್ತಿವೆ. ಇನ್ನೂ ಹೆಚ್ಚಿನ ಯಂತ್ರಗಳ ನಿರೀಕ್ಷಣೆಯಲ್ಲಿದ್ದು, ೧೯೬೧ರ ಅಂತ್ಯದೊಳಗೆ ೫೦ ಕ್ಕ ಮೇಲ್ಪಟ್ಟು ಭಾವಿಗಳನ್ನು ತೋಡಬೇಕೆಂದಿದ್ದಾರೆ. ಇಲ್ಲಿಂದ ನೂರು ಮೈಲಿ ದೂರದಲ್ಲಿರುವ ಅಂಕಲೇಶ್ವರವೂ ತೈಲಕ್ಷೇತ್ರವಾಗಿದೆಯೆಂದು ೧೯೬೦ ಜೂನ್‌ನಲ್ಲಿ ರುಜುವಾತಾಯಿತು.

ಇದಲ್ಲದೆ, ಓ. ಎನ್. ಜಿ. ಸಿ ಯವರ ಕಾರ್ಯದಿಂದ ತೈಲದ ಪರಿಶೋಧನೆಗೆ ಮಿಕ್ಕ ಪ್ರದೇಶಗಳಲ್ಲೂ ಕಾರ್ಯ ನಡೆದಿದೆ. ಓಡಿಸ, ಮತ್ತು ಕಾವೇರಿ ನದಿ ಬಯಲು ಪ್ರದೇಶಗಳಲ್ಲಿ ಪೂರ್ವಭಾವಿ ಪರಿಶೀಲನೆ ನಡೆದಿದೆ. ಆಸ್ಸಾಮಿನ ಶೀತ ಸಾಗರದಲ್ಲಿ ಭೈರಿಗೆಯಿಂದ ಕೊರೆದು ಎಣ್ಣೆ ಸಿಗುವ ಆಸೆ ವ್ಯಕ್ತಪಡಿಸಿದ್ದಾರೆ. ಬ್ರಹ್ಮಪುತ್ರಾ ನದಿ ಕಣಿವೆಯ ತೈಲ ಪ್ರದೇಶವು ವರ್ಷಕ್ಕೆ ಒಟ್ಟು ೨೫,೦೦,೦೦೦ ಟನ್ನುಗಳಷ್ಟು ತೈಲವನ್ನು ಕೊಡಬಹುದೆಂದು ಅಂದಾಜು ಮಾಡಿದ್ದಾರೆ. ಡಿಸೆಂಬರ್ ೧೯೫೩ ರಲ್ಲಿ ಭಾರತ ಸರಕಾರ ಮತ್ತು ಸ್ಟಾಂಡರ್ಡ್ ವಾಕ್ಯುಂ ಆಯಿಲ್ ಕಂಪನಿಯವರಿಗೆ ಆದ ಕರಾರಿನ ಮೇರೆಗೆ ಪಶ್ಚಿಮ ಬಂಗಾಳದ ತೀರ ಪ್ರದೇಶಗಳಲ್ಲಿ ತೈಲಕ್ಕಾಗಿ ಶೋಧನೆ ನಡೆಯುತ್ತಿದೆ. ಇದರಲ್ಲಿ ಭಾರತ ಸರಕಾರಕ್ಕೆ ಶೇಕಡಾ ೨೫ ರಷ್ಟು ಖರ್ಚು ತಗುಲುತ್ತದೆ. ಇಲ್ಲಿಯವರೆಗೂ ಈ ಶೋಧನೆಯೊಂದೇ ತುಸು ನಿರಾಶಾದಾಯಕವಾದದ್ದು. ಖರ್ಚಾಗಿರುವ ೭.೩೬ ಕೋಟಿ ರೂಪಾಯಿಗಳಲ್ಲಿ, ಕಾರ್ಯ ಅಷ್ಟಾಗಿ ಫಲಕಾರಿಯಾಗಿಲ್ಲ. ಅದಕ್ಕಾಗಿ ನೂತನ ವಿಧಾನಗಳನ್ನು ಅಳವಡಿಸಬೇಕೆಂದು ಕಂಪನಿಯವರ ಯೋಜನೆ ಇದೆ.

ಜನವರಿ, ೧೯೫೮ ರಲ್ಲಿ, ತೈಲದ ಶೋಧನೆ ನಡೆಸಲು ಆಸ್ಸಾಂ ಆಯಿಲ್ ಕಂ. ಬರ್ಮಾ ಆಯಿಲ್ ಕಂ. ಮತ್ತು ಭಾರತದ ಸರಕಾರಗಳು ಕೂಡಿ ಒಂದು ಕರಾರಿಗೆ ಸಹಿ ಹಾಕಿದವು. 'ಆಯಿಲ್ ಇಂಡಿಯಾ ಲಿಮಿಟೆಡ್' ಎಂಬ ನೂತನ ಹೆಸರಿನಿಂದ ಶೋಧನೆಯ ಕಾರ್ಯ ನಡೆದಿದೆ. ೧೯೬೨ ರಿಂದ ನಹರ್‌ಕೋಟಿಯಾ, ಹಗ್ರಿಜನ್ ಮತ್ತು ಮೊರಾನ್ ಪ್ರದೇಶಗಳಿಂದ ಪ್ರತಿ ವರ್ಷವೂ ೨೭೫ ಲಕ್ಷ ಟನ್ನುಗಳಷ್ಟು ತೈಲವನ್ನು ಉತ್ಪಾದಿಸಬೇಕೆಂದು ಭಾರತ ಸರಕಾರ ಅಂದಾಜು ಮಾಡಿದೆ. ಭಾರತದ ಪಶ್ಚಿಮ ಕರಾವಳಿಯಲ್ಲಿ ಸಮುದ್ರ ತಳದಲ್ಲಿ ತೈಲದ ಇರುವಿಕೆ ಪತ್ತೆಯಾಗಿ, ಅದಕ್ಕಾಗಿ 'ಸಮುದ್ರಗತ ಪ್ಲಾಟ್‌ಫಾರಂ' ಒಂದನ್ನು ತಯಾರಿಸಿ ಕೊರೆತವನ್ನು ಪ್ರಾರಂಭಿಸಬೇಕೆಂದು ಆಲೋಚನೆ ಮಾಡಲಾಗಿದೆ. ರಾಜಸ್ಥಾನ, ಕಚ್ಛ, ಸೌರಾಷ್ಟ್ರ

ಗಳಲ್ಲಿ ಉತ್ತಮ ತೈಲ ದೊರೆತರಂತೂ ಭಾರತಕ್ಕೆ ಸುವರ್ಣ ವೃಷ್ಟಿಯೇ ಸರಿ.

೧೯೬೧ ರ ಉಡುಗರೆಯೋ ಎಂಬಂತೆ ಜನವರಿ ಒಂದರಂದು ಆಸ್ಸಾಮಿನ ರುದ್ರಸಾಗರ ಪ್ರದೇಶದಲ್ಲಿ ತೈಲ ಪತ್ತೆಯಾಗಿದೆಯೆಂದೂ ಇನ್ನೂ ಹೆಚ್ಚಿನ ಭಾವಿಗಳನ್ನು ತೋಡಲು ಯೋಜನೆ ಮಾಡಲಾಗಿದೆಯೆಂದೂ ಶ್ರೀಮಾನ್ ಕೆ. ಡಿ. ಮಾಲವೀಯರು ಹೇಳಿಕೆ ಇತ್ತಿದ್ದಾರೆ. ಓ. ಎನ್. ಜಿ. ಸಿ. ಯವರು ಕಂಡು ಹಿಡಿದಿರುವ ತೈಲ ಕ್ಷೇತ್ರಗಳಲ್ಲಿ ಇದು ಮೂರನೆಯದಾಗಿದೆ.

ಭಾರತದಲ್ಲಿ ತೈಲ ದೊರೆಯುವದು ಹೆಚ್ಚಿದಂತೆ ತೈಲವನ್ನು ಶುದ್ಧಿಮಾಡುವ ಕಾರಖಾನೆಗಳು ಹೆಚ್ಚುತ್ತಿವೆ. ಈ ಕಾರಖಾನೆಗಳನ್ನು ಅನುಕೂಲವಾದ ಸ್ಥಳಗಳಲ್ಲಿ ಸ್ಥಾಪಿಸಿ, ತೈಲವನ್ನು ಹೊರತೆಗೆಯುತ್ತಿರುವ ಪ್ರದೇಶದಿಂದ ಶೋಧನಾಗಾರದ ವರೆಗೂ ಪೈಪ್ ಲೈನನ್ನು ಹಾಕುತ್ತಾರೆ. ನೆಲವನ್ನು ಆಳದ ವರೆಗೂ ಅಗೆದು, ದೊಡ್ಡ ದೊಡ್ಡ ಪೈಪುಗಳನ್ನು ಹಾಕಬೇಕಾದರೆ ಒಂದು ಪರಿಣಿತರ ತಂಡವೇ ಬೇಕಾಗುತ್ತದೆ ಭಾರತದಲ್ಲಿ, ದಿಗ್‌ಬಾಯ್ ಪ್ರದೇಶದಿಂದ ಬಕೌನಿ ಶೋಧನಾಗಾರದ ವರೆಗೂ ಪೈಪ್ ಲೈನನ್ನು ಹಾಕಬೇಕೆಂದಿದ್ದಾರೆ (ನಕಾಶೆ ನೋಡಿರಿ.) ನಮ್ಮಲ್ಲಿರುವ ಖಾಸಗಿ ಶೋಧನಾಗಾರಗಳು ಮಾತ್ರ ಈ ವರೆಗೆ ಕಚ್ಚಾ ತೈಲವನ್ನು ಬೇರೆ ಕಡೆಯಿಂದ ತರಿಸಿ ಶುದ್ಧಮಾಡುತ್ತಿವೆ. ಭಾರತಕ್ಕೆ, ಐದು ವರ್ಷಗಳ ಕೆಳಗೆ ಬಹಳ ಕಾಲದಿಂದಲೂ ನಡೆಸಲ್ಪಡುತ್ತಿದ್ದ ಅಸ್ಸಾಂ ಆಯಿಲ್ ಕಂಪನಿಯವರು ದಿಗ್‌ಬಾಯ್ ಶೋಧನಾಗಾರ ಒಂದೇ ಶುದ್ಧಿ ಮಾಡಿದ ತೈಲವನ್ನು ಒದಗಿಸುತ್ತಿತ್ತು. ೧೯೫೪-೧೯೫೭ ರಲ್ಲಿ ಮೂರು ಶೋಧನಾಗಾರಗಳು ಖಾಸಗಿ ವಲಯದಲ್ಲಿ ಸ್ಥಾಪಿಸಲ್ಪಟ್ಟವು. ಬರ್ಮಾಷೆಲ್ ಮತ್ತು ಸ್ಟ್ಯಾನ್‌ವಾಕ್ ಸಂಸ್ಥೆಗಳು ಮುಂಬಯಿನ ಟ್ರಾಂಬೆಯಲ್ಲಿ ತಮ್ಮ ಶೋಧನಾಗಾರಗಳನ್ನು ಸ್ಥಾಪಿಸಿದವು. ಕಾಲ್ಟೆಕ್ಸ್ ಸಂಸ್ಥೆಯು ವಿಶಾಖಪಟ್ಟಣದಲ್ಲಿ ತನ್ನ ಶೋಧನಾಗಾರವನ್ನು ಸ್ಥಾಪಿಸಿತು. ಅಲ್ಲಿಂದೀಚೆಗೆ ಭಾರತ ಸರ್ಕಾರ ಗೌಹಾತಿ ಮತ್ತು ಬಕೌನಿ ಪ್ರದೇಶಗಳಲ್ಲಿ ಶೋಧನಾಗಾರಗಳನ್ನು ಸ್ಥಾಪಿಸುವ ಬಗ್ಗೆ ಹೆಚ್ಚಿನ ಗಮನ ಕೊಟ್ಟಿದೆ. ಇವೆರಡು ಶೋಧನಾಗಾರಗಳೂ ರಷ್ಯಾ ಹಾಗೂ ರುಮೇನಿಯಾ ದೇಶದ ಪರಿಣಿತರ ನೆರವು ಪಡೆಯುತ್ತಲಿದ್ದು, ಸದ್ಯದಲ್ಲೇ ತೈಲ ಶುದ್ಧೀಕರಣ ಮಾಡಲು ಯೋಜಿಸಲಾಗಿದೆ. ಸದ್ಯಕ್ಕೆ ಶುದ್ಧಿ ಮಾಡುತ್ತಿರುವ ನಾಲ್ಕು ಶೋಧನಾಗಾರಗಳ ಬಲ ಈ ರೀತಿ ಇದೆ.

| | | | |
|---|---|---|---|
| ಬರ್ಮಾಷೆಲ್ ಶೋಧನಾಗಾರ | ೨೫ | ಲಕ್ಷ | ಟನ್ನು |
| ಸ್ಟ್ಯಾನ್‌ವಾಕ್ ಶೋಧನಾಗಾರ | ೧೬ | ,, | ,, |
| ಕಾಲ್ಟೆಕ್ಸ್ ಶೋಧನಾಗಾರ | ೭ | ,, | ,, |
| ಆಸ್ಸಾಂ ಆಯಿಲ್ ಕಂ. ,, | ೪ | ,, | ,, |

ಆಸ್ಸಾಂ ಆಯಿಲ್ ಕಂಪನಿ, ಪ್ರತಿವರ್ಷವೂ ಹೆಚ್ಚಿನ ತೈಲವನ್ನು ತನ್ನ ಶೋಧನಾಗಾರದಲ್ಲಿ ಶುದ್ಧಿಮಾಡುತ್ತಿದೆ. ೧೯೫೮ ರಲ್ಲಿ ಅದು ೧,೧೪೪,೯೨ ೬೨೭ ಗ್ಯಾಲನ್ನುಗಳಷ್ಟು ತೈಲವನ್ನು ಶುದ್ಧಿಮಾಡಿತು. ೧೯೫೯ ರಲ್ಲಿ ಹಿಂದಿನ ಎಲ್ಲಾ ದಾಖಲೆಗಳನ್ನೂ ಮೀರಿ, ಇನ್ನೂ ಹೆಚ್ಚಿನ ಅಂದರೆ ೧೮,೮೦,೦೦,೦೦೦ ಗ್ಯಾಲನ್ನುಗಳಷ್ಟು ತೈಲವನ್ನು ಶುದ್ಧಿಮಾಡಿತು. ಸದ್ಯದಲ್ಲೆ ಪ್ರಾರಂಭವಾಗಲಿರುವ ಗೌಹಾತಿ ಶೋಧನಾಗಾರ ೭೫ ಲಕ್ಷ ಟನ್ನುಗಳಷ್ಟು ತೈಲವನ್ನೂ ಬಕೌನಿ ಶೋಧನಾಗಾರಗಳಲ್ಲಿ ೨೦ ಲಕ್ಷ ಟನ್ನುಗಳಷ್ಟು ತೈಲವನ್ನೂ ಶುದ್ಧಿಮಾಡಲು ಯೋಜಿಸಲಾಗಿದೆ. ಕ್ಯಾಂಬೆ ಪ್ರದೇಶದಲ್ಲಿ ಶೋಧನಾಗಾರವನ್ನು ಸ್ಥಾಪಿಸುವ ಬಗ್ಗೆ ಯೋಜನೆ ತೀವ್ರವಾಗಿ ನಡೆದಿದೆ. ಮದ್ರಾಸಿನಲ್ಲೂ ಶೋಧನಾಗಾರವನ್ನು ಸ್ಥಾಪಿಸಬಹುದು. ತೈಲ ಶುದ್ಧಿ ಮಾಡುವ ಸಂಶೋಧನಾ ಶಾಲೆಯೊಂದನ್ನು ಗುಜರಾತಿನಲ್ಲಿ ತೆರೆಯಬೇಕೆಂದಿರುವ ಸಮಾಚಾರವನ್ನು ಕೆಲವೇ ದಿವಸಗಳ

ಹಿಂದೆ ಓದಿದ್ದೇವೆ.

ಪಂಚವಾರ್ಷಿಕ ಯೋಜನೆಗಳು ತೈಲದ ಪರಿಶೋಧನೆಗೆ ಶುದ್ಧೀಕರಣಕ್ಕೆ ಹೆಚ್ಚಿನ ಗಮನ ಕೊಟ್ಟಿವೆ. ಸರಕಾರವು ಎಣ್ಣೆ ತರಿಸಲು ಪ್ರತಿವರ್ಷವೂ ಖರ್ಚು ಮಾಡುತ್ತಿರುವ ಕೋಟ್ಯಂತರ ರೂಪಾಯಿಗಳನ್ನು ತಡೆದು, ಲಾಭ ನಷ್ಟದ ಲೆಕ್ಕ ಹಾಕದೆ ಭಾರತದಲ್ಲೇ ತೈಲದ ಉದ್ಯಮವನ್ನು ವಿಸ್ತರಿಸಬೇಕೆಂದು ಯೋಜಿಸಿದೆ. ಕೆಲವು ದೇಶಗಳು ತಮ್ಮಲ್ಲಿ ಸಾಕಷ್ಟು ತೈಲದ ನಿಕ್ಷೇಪಗಳು ಇದ್ದರೂ, ಕೃತ್ರಿಮ ತೈಲವನ್ನು ತಯಾರು ಮಾಡಲು ಪ್ರಯತ್ನ ಪಡುತ್ತಿವೆ. ಭಾರತದಲ್ಲಿ ಕಲ್ಲಿದ್ದಲು ಹೇರಳವಾಗಿ ಸಿಗುವುದರಿಂದ ಅದರಿಂದ ಪೆಟ್ರೋಲಿಯಮ್ ತಯಾರು ಮಾಡಲು ಸರಕಾರ ಯೋಜಿಸಿದೆ. ಮಾನ್ಯ ಮಂತ್ರಿ ಶ್ರೀ ಕೆ. ಡಿ. ಮಾಲವೀಯರು ತೋರಿಸುತ್ತಿರುವ ಹೆಚ್ಚಿನ ಆಸಕ್ತಿಯಿಂದ ಭಾರತ ತಲೆಎತ್ತಿ ನಿಲ್ಲಬಹುದಾಗಿದೆ.

ಸದ್ಯಕ್ಕೆ ಭಾರತದಲ್ಲಿ ೬೦ ಲಕ್ಷ ಟನ್ ಕಚ್ಚಾ ತೈಲಕ್ಕಾಗಿ ಬೇಡಿಕೆ ಇದೆ. ೬೧-೬೨ ರ ಹೊತ್ತಿಗೆ ೮೦ ಲಕ್ಷ ಟನ್‌ಗಳಿಗೆ ಏರಬಹುದೆಂದು ಅಂದಾಜು ಮಾಡಲಾಗಿದೆ. ಅಂದರೆ ಕೇವಲ ನಾಲ್ಕು ಲಕ್ಷ ಟನ್‌ಗಳಷ್ಟು ತೈಲವನ್ನು ಉತ್ಪಾದಿಸುತ್ತಿರುವ ಭಾರತ ತನ್ನ ಕಾಲುಗಳ ಮೇಲೆ ನಿಂತುಕೊಳ್ಳಲು ಎಷ್ಟು ಕೋಟಿ ರೂಪಾಯಿಗಳನ್ನು ಸುರಿಯಬೇಕಾಗಿ ಬರಬಹುದು ಎಂಬುದು ಸ್ವಲ್ಪ ಧೈರ್ಯಗುಂದಿಸುವ ವಿಷಯವಾಗಿದೆ.

ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಭಾರತ ತನಗೆ ಬೇಕಾಗುವ ಸಲಕರಣೆಗಳನ್ನು ಸ್ವತಃ ತಯಾರಿಸುವ ಯೋಜನೆ ಮಾಡಿದೆ. ತೈಲದ ಉದ್ಯಮಕ್ಕೆ ಬೇಕಾಗುವ ಬೈರಿಗೆಗಳು ಮತ್ತು ಇತರ ಸಲಕರಣೆಗಳನ್ನು ಕೊಳ್ಳುವುದರಲ್ಲಿ ಒಂದು ಬ್ಯಾಂಕೇ ದಿವಾಳಿಯೇಳಬಹುದು. ಒಂದು ಪ್ರಾಯೋಗಿಕ ತೈಲದ ಬಾವಿಯನ್ನು ತೋಡಲು ಏನಿಲ್ಲವೆಂದರೂ ೫೦ ಲಕ್ಷ ರೂಪಾಯಿಗಳಾಗಬಹುದು. ಓ. ಎನ್ ಜಿ ಸಿ. ಸದ್ಯಕ್ಕೆ ೨೦೦೦ ಕೆಲಸಗಾರರನ್ನು ಹೊಂದಿದ್ದರೂ (ಎಲ್ಲಾ ರೀತಿಯವರೂ ಸೇರಿ) ಕೊನೆಯ ಪಕ್ಷ, ವಿಶೇಷ ತರಬೇತು ಪಡೆದ ೩೦-೩೫ ತೈಲ ತಾಂತ್ರಿಕರ ನೆರವು ಅತ್ಯಗತ್ಯವಾಗಿದೆ. ಓ. ಎನ್. ಜಿ. ಸಿ, ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ, ಹಲವಾರು ತಿಂಗಳು ತೈಲದ ಅನ್ವೇಷಣೆಯ ಬಗ್ಗೆ ಉತ್ತಮ ಶಿಕ್ಷಣವನ್ನು ಕೊಡುತ್ತಿರುವುದೂ ಹಲವರನ್ನು ವಿದೇಶಗಳಿಗೆ ಕಳುಹಿಸಿ ವಿಶೇಷ ಅಭ್ಯಾಸಕ್ಕೆ ಪ್ರೋತ್ಸಾಹ ಕೊಡುತ್ತಿರುವುದೂ ಅಭಿನಂದನೀಯವಾಗಿದೆ. ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ತೈಲದ ಗುರಿ ೩೦ ಲಕ್ಷ ಟನ್ನುಗಳಷ್ಟು ಇದ್ದರೂ, ತೃತೀಯ ಯೋಜನೆಯಲ್ಲಿ ೧೨೦ ಲಕ್ಷ ಟನ್ನುಗಳಷ್ಟು ಕಚ್ಚಾ ತೈಲವನ್ನು ಉತ್ಪಾದಿಸಬೇಕೆಂದು ಸರಕಾರ ನಿರ್ಧರಿಸಿದೆ. ಬರ್ಮಾಷೆಲ್ ರಿಫೈನರಿಯ ಚೇರಮನ್ ಒಂದು ಹೇಳಿಕೆ ಇತ್ತು, ಭಾರತದ ಸದ್ಯದ ಪರಿಸ್ಥಿತಿಯನ್ನು ಗಮನಿಸಿದರೆ, ೧೯೬೭ ರ ಒಳಗೆ ೧೨ ಲಕ್ಷ ಟನ್ನುಗಳಷ್ಟಾದರೂ ತೈಲವನ್ನು ಉತ್ಪಾದಿಸಬೇಕೆಂದೂ ಅದಕ್ಕೆ ಏನಿಲ್ಲವೆಂದರೂ ೨೭೦ ಕೋಟಿ ರೂಪಾಯಿಗಳಷ್ಟು ಖರ್ಚಾಗಬಹುದೆಂದೂ ಹೇಳಿದ್ದಾರೆ. ಕೆ. ಡಿ. ಮಾಳವೀಯರು ತೃತೀಯ ಯೋಜನೆಯಲ್ಲಿ, ೪೦೦ ಕೋಟಿ ರೂಪಾಯಿಗಳಷ್ಟು ತೈಲದ ಉದ್ಯಮಕ್ಕೆ ಹಾಕಬೇಕೆಂದು ಆಗಾಗ್ಗೆ ಹೇಳುತ್ತಿದ್ದರೂ ಸರಕಾರ ಕೇವಲ ೧೧೫ ಕೋಟಿ ರೂಪಾಯಿಗಳನ್ನು ತೈಲದ ಉದ್ಯಮಕ್ಕೆ, ತೃತೀಯ ಯೋಜನೆಯಲ್ಲಿ ಮೀಸಲಾಗಿಟ್ಟಿದೆಯೆಂದು ಪ್ರಕಟಿಸಿರುವುದು ಸ್ವಲ್ಪ ಹಿಂದೇಟು ಹೊಡೆದಂತಾಗಿದೆ.

ಭಾರತ ಎಂದು ಸ್ವಾವಲಂಬಿಯಾಗಬಹುದು ಎಂಬ ಪ್ರಶ್ನೆಗೆ ಉತ್ತರ ಕೊಡುವದು ಅಸಾಧ್ಯದ ಮಾತು. ಪ್ರತಿವರ್ಷವೂ ತೈಲಕ್ಕಾಗಿ ಏರುತ್ತಿರುವ ಬೇಡಿಕೆಯನ್ನೂ ಉತ್ಪಾದನೆಯನ್ನೂ ಗಮನಿಸಿದರೆ ತೈಲದ ಭವಿಷ್ಯವನ್ನು ನಿರ್ಧರಿಸುವುದು

ಸಾಧ್ಯವೇ ಎನಿಸುತ್ತದೆ. ೧೯೬೭ ರ ಒಳಗೆ ಪ್ರತಿ ವರ್ಷವೂ ಬೇಡಿಕೆ ೫.೦೦ ಕೋಟಿ ಟನ್ನುಗಳಷ್ಟಾಗಬಹುದೆಂದೂ ೧೯೭೧ ರಲ್ಲಿ ಪ್ರತಿವರ್ಷವೂ ೭.೫ ಕೋಟಿ ಟನ್ನುಗಳಷ್ಟು ಬೇಡಿಕೆ ಬರಬಹುದೆಂದೂ ೧೯೭೬ ರಲ್ಲಿ (ಅಂದರೆ, ಐದನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗೆ) ಪ್ರತಿವರ್ಷವೂ ತೈಲದ ಬೇಡಿಕೆ ೫.೦೦ಕೋಟಿ ಟನ್ನುಗಳಿಗೆ ಏರಬಹುದೆಂದೂ ಅಂದಾಜು ಮಾಡಲಾಗಿದೆ. ಅಂದರೆ ಭಾರತ ತೈಲದ ಉದ್ಯಮದಲ್ಲಿ ಸ್ವಾವಲಂಬಿಯಾಗಬೇಕಾದರೆ ಇನ್ನು ೧೫-೨೦ ವರ್ಷಗಳಲ್ಲಿ ಕೊನೆಯ ಪಕ್ಷ ೩,೦೦೦ ಕೋಟಿ ರೂಪಾಯಿಗಳನ್ನಾದರೂ ವ್ಯಯ ಮಾಡಬೇಕಾಗುತ್ತದೆ. ಏನೇ ಆದರೂ, ಎಷ್ಟೇ ಆದರೂ ಇತರ ದೇಶಗಳ ಸರಿಸಮಾನವಾಗಿ ನಿಲ್ಲಲು ಭಾರತದಲ್ಲಿ ಹರಡಿರುವ ೪೦೦,೦೦೦ ಚ. ಮೈ. ಗಳ ಪ್ರದೇಶದಲ್ಲಿ ತೈಲಾನ್ವೇಷಣೆ ಮಾಡಲೇಬೇಕಾಗಿದೆ. "ತೈಲದ ಶೋಧನೆ ಪ್ರಕೃತಿಯೊಡನೆ ಆಡುವ ಒಂದು ಜೂಜಾಟ" ಎಂಬ ಪರಿಣಿತರ ಹೇಳಿಕೆಯಲ್ಲಿ ಭಾರತಕ್ಕೆ ಅದೃಷ್ಟದ ಬಲ ಚೆನ್ನಾಗಿರಲಿ ಎಂದು ಹಾರೈಸಬೇಕು ಅಷ್ಟೆ.*

* ತೈಲದ ವಿಷಯದಲ್ಲಿ ಭಾರತವು ಮೂರನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲೇ ಸ್ವಾವಲಂಬಿಯಾಗಬಹುದೆಂದು ಕೆ. ಡಿ. ಮಾಲವೀಯರು ಈಚೆಗೆ ಹೇಳಿಕೆಯಿತ್ತಿದ್ದಾರೆ.



## ನಿರುತ್ಸಾಹ

ಒಂದೇ ಬಗೆಯ ಕೆಲಸಗಳನ್ನು ಮಾಡುತ್ತ ಮಾಡುತ್ತ ಒಂದು ದಿನ ಸೈತಾನನಿಗೆ ಬೇಸರ ಬಂತು. ಸಂನ್ಯಾಸವನ್ನು ಸ್ವೀಕರಿಸಲು ಆತ ನಿಶ್ಚಯಿಸಿ ತನ್ನ ಗುಲಾಮರನ್ನೆಲ್ಲ ಮಾರಿ ಬಿಡಲು ನಿರ್ಧರಿಸಿದ. "ದುರ್ಗುಣ," "ಹೊಟ್ಟೆಕಿಚ್ಚು," "ಕಲಹ" "ಅಹಂಕಾರ" ಮುಂತಾಗಿ ಅವನ ಎಲ್ಲ ಗುಲಾಮರು ಸಾಲಾಗಿ ನಿಂತುಕೊಂಡರು.

ಸೈತಾನನ ಭಕ್ತರು ಬರತೊಡಗಿದರು. ತಮತಮಗೆ ಪರಿಚಯವಿದ್ದ ಗುಲಾಮರನ್ನು ಕೊಂಡುಕೊಂಡು ಹೋಗತೊಡಗಿದರು. ಆದರೆ ಮೂಲೆಯಲ್ಲಿ ನಿಂತಿದ್ದ ಒಬ್ಬ ಅತ್ಯಂತ ಕೃಶಕಾಯನಾದ, ವೃದ್ಧನಾದ, ಕುರೂಪಿಯಾದ ಗುಲಾಮನನ್ನು ಯಾರೂ ವಿಚಾರಿಸಲೇ ಇಲ್ಲ. ಅವನ ಪರಿಚಯ ಯಾರಿಗೂ ಇರಲಿಲ್ಲ. ಆದರೆ ಆಶ್ಚರ್ಯದ ಮಾತೆಂದರೆ ಅವನ ಬೆಲೆಯೆ ಎಲ್ಲರಿಗಿಂತಲೂ ಹೆಚ್ಚಾಗಿತ್ತು.

ಕೊನೆಗೆ ಒಬ್ಬ ಗಿರಾಕಿ ಪ್ರಶ್ನಿಸಿದ: "ಈತ ಯಾರು?"

ಸೈತಾನ ನಕ್ಕು ಉತ್ತರವಿತ್ತ "ಈತನೇ? ಕೇಳಿ. ಈತ ನನ್ನ ಅತ್ಯಂತ ಪ್ರೀತಿಯ ಮತ್ತು ಮೆಚ್ಚಿಗೆಯ ಗುಲಾಮನಾಗಿದ್ದಾನೆ. ಈತ ನನಗೆ ನನ್ನ ಬಲಗೈಯಂತಿದ್ದಾನೆ. ಆದರೆ ಈತನ ಪರಿಚಯ ಮಾತ್ರ ಬಹಳ ಕಡಿಮೆ ಜನರಿಗಿದೆ. ಈತನ ಸಹಾಯದಿಂದ ನಾನು ಅತಿ ಸುಲಭವಾಗಿ ಜನರನ್ನು ನನ್ನ ಹಿಡಿತದಲ್ಲಿ ಸಿಲುಕಿಸಿಕೊಳ್ಳುವೆ. ಏನು, ಇಷ್ಟು ಹೇಳಿದರೂ ಈತ ಯಾರೆಂದು ಗುರುತಿಸಲಾರಿರಾ? ಕೇಳಿ,ಈತನ ಹೆಸರು "ನಿರುತ್ಸಾಹ" ಎಂದು. "ನಿರುತ್ಸಾಹ!" ತಿಳಿಯಿತೆ?

# ರಂಗವಿಲಾಸದ ಹತ್ಯಾಕಾಂಡ



# “ರಂಗವಿಲಾಸ”ದ ಹತ್ಯಾಕಾಂಡ

೧೯೫೮, ಡಿಸೆಂಬರ್ ೧೭ ರಂದು ರಾತ್ರಿ ಬೆಂಗಳೂರಿನ ಸೆಂಟ್ರಲ್ ಜೇಲಿನಲ್ಲಿ ಮೂವರು ಹತಾಶರಾಗಿ ಬಿದ್ದುಕೊಂಡಿದ್ದರು. ೧೮ ರಂದು ಮುಂಜಾನೆ ಅವರು ಗಲ್ಲಿಗೇರಬೇಕಾಗಿತ್ತು. ಸಾವಿನಿಂದ ತಪ್ಪಿಸಿಕೊಳ್ಳಲು ಅವರು ಮಾಡಿದ್ದ ಯತ್ನವೆಲ್ಲ ವಿಫಲವಾಗಿತ್ತು. ಆದರೆ ಆಸೆಯ ತಂತಿ ಇನ್ನೂ ಮಿಡಿಯುತ್ತಲೇ ಇತ್ತು. ದೇವರ ಮೇಲೆ ಭಾರ ಹಾಕಿ ಆ ಮೂವರೂ ಸತತವಾಗಿ ರಾಮನಾಮ ಜಪವನ್ನು ನಡೆಸಿದ್ದರು. ಬಾಯಿ ರಾಮನಾಮವನ್ನುಚ್ಚರಿಸುತ್ತಿದ್ದರೂ ಮನಶ್ಚಕ್ಷು ಗಳೆದುರು ಮೃತ್ಯುವಿನ ಕರಾಳ ರೂಪ ಕಾಣಿಸು ತ್ತಲೇ ಇತ್ತು.

ಬೆಂಗಳೂರಿನ ಪ್ರಸಿದ್ಧ ವಕೀಲರಾದ ಬೇಲೂರು ಶ್ರೀನಿವಾಸ ಅಯ್ಯಂಗಾರ್ ಮತ್ತು ಅವರ ಕುಟುಂಬದ ಐವರ ಕೊಲೆ ಮಾಡಿದ ಆರೋಪಕ್ಕಾಗಿ ಈ ಮೂವರಿಗೆ ಫಾಶಿ ಶಿಕ್ಷೆ ವಿಧಿಸಲ್ಪಟ್ಟಿತ್ತು.

ಬೇಲೂರು ಶ್ರೀನಿವಾಸ ಅಯ್ಯಂಗಾರರು ಪ್ರಸಿದ್ಧ ವ್ಯಕ್ತಿ. ಐವತ್ತು ವರ್ಷಗಳ ತಮ್ಮ ವಕೀಲಿ ವೃತ್ತಿಯಲ್ಲಿ ಅವರು ಅಪಾರ ಕೀರ್ತಿ, ಯಶಸ್ಸು ಮತ್ತು ಸಂಪತ್ತನ್ನು ಗಳಿಸಿದ್ದರು. ಗಾಂಧಿ ನಗರದಲ್ಲಿ ಅವರ “ರಂಗವಿಲಾಸ” ಬಂಗಲೆ ಡೌಲಿನಿಂದ ತಲೆಯೆತ್ತಿ ನಿಂತಿತ್ತು. ಬಂಗಲೆಯ ಸುತ್ತಲೂ ಅಂದವಾದ ತೋಟ. ಪ್ರವೇಶದ್ವಾರದಿಂದ ಬಂಗಲೆಯ ವರೆಗಿನ ಹಾದಿಯ ಇಕ್ಕೆಲಗಳಲ್ಲಿ ತೆಂಗಿನ ಗಿಡಗಳು ಶೋಭಿಸುತ್ತಿದ್ದವು. ಪ್ರವೇಶದ್ವಾರದಲ್ಲಿರುವ ಕಾರಂಜಿ ಯಜಮಾನರ ಐಶ್ವರ್ಯ, ವೈಭವಗಳನ್ನು ಸಾರುತ್ತಿತ್ತು.

ರಂಗವಿಲಾಸದಲ್ಲಿ ಬೇಲೂರು ಶ್ರೀನಿವಾಸ ಅಯ್ಯಂಗಾರರೊಡನೆ ಅವರ ಪತ್ನಿ ವೆಂಗಮ್ಮ; ರಂಗಲಕ್ಷ್ಮಿ, ರತ್ನಾ ಮತ್ತು ಪ್ರಸನ್ನಾ ಎಂಬ ಮೂವರು ಹುಡುಗಿಯರು; ಮತ್ತು ಲವ-ಕುಶ ರೆಂಬ ಅವಳಿ ಗಂಡುಮಕ್ಕಳು ಇದ್ದರು. ಅಯ್ಯಂಗಾರರ ಮೊದಲನೆಯ ಹೆಂಡತಿಯ ಮಗ ಮುತ್ತಣ್ಣ ಜನ್ಮತಃ ಹುಚ್ಚ. ಆತ ಜನರನ್ನು ಹೊಡೆಯುವುದು ಬಡಿಯುವುದು ಮಾಡುತ್ತಿದ್ದು ದರಿಂದ ತಂದೆ ತೋಟದಲ್ಲಿ ಒಂದು ಕೋಣೆ ಯನ್ನು ಕಟ್ಟಿಸಿ ಅದರಲ್ಲಿ ಅವನನ್ನಿಟ್ಟಿದ್ದರು. ಈ ಬಂಧನ ಸೇರಿಬಾರದ ಮುತ್ತಣ್ಣ ಬಾಗಿಲು ಬಡಿಯುತ್ತ ಅರುಚುತ್ತ ಬರಹೋಗುವವರಿಗೆ ತನ್ನ ಅಸ್ತಿತ್ವದ ಅರಿವು ಮಾಡಿಕೊಡುತ್ತಿದ್ದ.

ರಂಗವಿಲಾಸದಲ್ಲಿ ಇವರೆಲ್ಲರ ಜೊತೆಯಲ್ಲಿ ಅಯ್ಯಂಗಾರರ ಅತ್ತೆ ಸಿಂಗಮ್ಮ, ಆಳು ರಾಮು ಮತ್ತು ಡ್ರೈವರ್ ಯೇಸುದಾಸರು ಇರುತ್ತಿದ್ದರು. ಅಯ್ಯಂಗಾರರ ಸಂಪತ್ತನ್ನು ಹಗಲು ರಾತ್ರಿ ಕಾಯುತ್ತಿದ್ದ ಆಲ್‌ಶೇಶನ್ ನಾಯಿ ಟೈಗರ್ ಕೂಡ ಈ ಕುಟುಂಬದ ಸದಸ್ಯನಾಗಿತ್ತು.

೧೯೫೪ ರ ಸುಮಾರಿಗೆ ವೃದ್ಧಾಪ್ಯದ ದೆಸೆಯಿಂದ ಶ್ರೀನಿವಾಸ ಅಯ್ಯಂಗಾರರು ವಕೀಲಿ ವೃತ್ತಿಯಿಂದ ನಿವೃತ್ತರಾದರು. ಗಾಂಧೀನಗರದಲ್ಲಿ ಅವರಿಗಿದ್ದ ಆಸ್ತಿಯಿಂದ ತಿಂಗಳಿಗೆ ಮೂರು ನಾಲ್ಕು ಸಾವಿರ ರೂಪಾಯಿಗಳ ಉತ್ಪನ್ನ ಬರುತ್ತಿದ್ದುದರಿಂದ ಅವರಿಗೆ ಏನೂ ತೊಂದರೆಯಿರಲಿಲ್ಲ. ನೋಟುಗಳು, ದಾಗಿನೆಗಳಿಂದ ತಿಜೋರಿಗಳು ತುಂಬಿದ್ದವು.

೧೯೫೬, ಜೂನ್ ೧ ರಂದು ಮಹಡಿಯಿಂದ

ಇಳಿಯುವಾಗ ಜಾರಿ ಬಿದ್ದುದರಿಂದ ಅಯ್ಯಂಗಾರರ ಒಂದು ಕಾಲಿನ ಎಲುವು ಮುರಿಯಿತು. ಅಂದಿನಿಂದ ಅವರು ತಮ್ಮ ಕೋಣೆಯಲ್ಲಿಯೇ ಮಲಗಿಕೊಂಡಿರುತ್ತಿದ್ದರು. ಆಪ್ತ ಮಿತ್ರರು ಬಂದು ಅವರ ಯೋಗಕ್ಷೇಮ ವಿಚಾರಿಸಿಕೊಂಡು ಹೋದರು. ತಮ್ಮ ಈ ಭೆಟ್ಟಿಯೆ ಕೊನೆಯದಾದೀತೆಂದು ಅವರಲ್ಲಾರೂ ಆಗ ಕನಸಿನಲ್ಲಿ ಕೂಡ ಯೋಚಿಸಿರಲಿಕ್ಕಿಲ್ಲ.

ಜೂನ್ ೫ ರಂದು ರಾತ್ರಿ ಅಯ್ಯಂಗಾರರು ತಮ್ಮ ಮಂಚದ ಮೇಲೆ ಮಲಗಿದ್ದರು. ಮಗ್ಗಲಿನ ಕೋಣೆಯಲ್ಲಿ ಜೋಡಿಸಿಟ್ಟಿದ್ದ ಮೂರು ಮಂಚಗಳ ಮೇಲೆ ಲವ, ಕುಶ, ರಂಗಲಕ್ಷ್ಮಿ, ವೆಂಗಮ್ಮ ಮತ್ತು ಸಿಂಗಮ್ಮ ಮಲಗಿದ್ದರು. ರತ್ನಾ ಮತ್ತು ಪ್ರಸನ್ನಾ ಹಿಂದಿನ ಮಗ್ಗಲಿನ ಕೋಣೆಯಲ್ಲಿ ಮಲಗಿದ್ದರು. ಕೆಲಸ ಮುಗಿಸಿ ಯೇಸುದಾಸ ಮನೆಗೆ ಹೋಗಿದ್ದ. ದೀಪಗಳನ್ನೆಲ್ಲ ಆರಿಸಿ ರಾಮು ನಿತ್ಯದಂತೆ ಹೊರಗ ಜಗಲಿಯ ಮೇಲೆ ಮಲಗಿದ್ದ. ನಿತ್ಯದಂತೆ ಟೈಗರ್ ತೋಟದಲ್ಲಿ ಓಡಾಡುತ್ತಿತ್ತು.

ಎಲ್ಲವೂ ನಿತ್ಯಕ್ರಮದಂತೆ ಜರುಗುತ್ತಿದ್ದಾಗ ಹೊರಗೆ ಕತ್ತಲಲ್ಲಿ ಒಂದು ವ್ಯಕ್ತಿ ರಂಗವಿಲಾಸದ ಮೇಲೆ ಕಣ್ಣಿಟ್ಟು ಅಲ್ಲಿ ನಡೆಯುವುದನ್ನೆಲ್ಲ ನೋಡುತ್ತಿತ್ತು.

ಜೂನ್ ೬ ನೆಯ ದಿನಾಂಕ ಉದಯಿಸಿತು. ತೋಟದಲ್ಲಿಯ ಹೂ ಹಣ್ಣುಗಳನ್ನು ಕೊಯ್ಯಲು ನಸುಕಿನಲ್ಲಿಯೆ ರಾಮುವಿನ ಹೆಂಡತಿ ಯೇಲಾ ಬಂದಳು. ತೋಟಕ್ಕಿದ್ದ ಎರಡು ಗೇಟುಗಳಲ್ಲಿ ಒಂದು ತೆರೆದೇ ಇತ್ತು. ಆ ಬಾಗಿಲಿಂದ ಒಳಗೆ ಬಂದ ಯೇಲಾಗೆ ಬಂಗಲೆಯಲ್ಲಿ ಯಾರೂ ಎದ್ದಂತೆ ಕಾಣಿಸಲಿಲ್ಲ. ಸಣ್ಣ ಶಬ್ದವಾದರೂ ಸರಿ, ಗರ್ಜಿಸುವ ಟೈಗರನ ಸುಳಿವೂ ಇರಲಿಲ್ಲ. ಯೇಲಾಗೆ ಈ ನಿಸ್ತಬ್ಧತೆ ತುಸು ವಿಚಿತ್ರವೆನಿಸಿ ವೆಂಗಮ್ಮಳನ್ನು ಕೂಗುತ್ತ ಅವಳು ಜಗಲಿಗೆ ಬಂದಳು ಅಲ್ಲಿಯ ದೃಶ್ಯವನ್ನು ಕಂಡು ಅವಳು ಹೌಹಾರಿ ಹೋದಳು. ತನ್ನ ಕಣ್ಣುಗಳ ಮೇಲೆ ಅವಳಿಗೆ ವಿಶ್ವಾಸವುಂಟಾಗಲಿಲ್ಲ.

ರಾಮು ರಕ್ತದ ಮಡುವಿನಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದ. ಅವನ ಮುಖ, ತಲೆ ಮತ್ತು ಕುತ್ತಿಗೆಗಳ ಮೇಲೆ ಬಲವಾದ ಗಾಯಗಳಾಗಿದ್ದುದರಿಂದ ಆತ ವಿದ್ರೂಪನಾಗಿ ಕಾಣಿಸುತ್ತಿದ್ದ. ರಾಮುವಿನ ಕಳೇವರವನ್ನಪ್ಪಿಕೊಂಡು ಯೇಲಾ ದೊಡ್ಡ ದನಿಯಿಂದ ಅಳತೊಡಗಿದಳು.

ಅವಳ ಆಕ್ರೋಶವನ್ನು ಕೇಳಿ ರತ್ನಾ ಎಚ್ಚತ್ತಳು. ಅವಳು ಅವಸರದಿಂದ ಜಗಲಿಗೆ ಬಂದಳು. ಅಲ್ಲಿಯ ಭೀಕರ ದೃಶ್ಯವನ್ನು ಕಂಡು ಹೌಹಾರಿದ ಆ ಹುಡುಗಿ ವೆಂಗಮ್ಮಳಿಗೆ ಸಮಾಚಾರ ತಿಳಿಸಲೆಂದು ಒಳಗೆ ನಡೆದಳು. ಆದರೆ ಅಲ್ಲಿ ಕಂಡ ದೃಶ್ಯ ಇನ್ನಿಷ್ಟು ಭಯಾನಕವಾಗಿತ್ತು.

ವೆಂಗಮ್ಮ, ಸಿಂಗಮ್ಮ, ಲವ ಮತ್ತು ಕುಶರ ದೇಹಗಳು ಮಂಚದ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಮಂಚದ ಮೇಲೆ ರಕ್ತ ಹರಿದಿತ್ತು. ಕೋಣೆಯ ಒಂದು ಮೂಲೆಯಲ್ಲಿ ರಂಗಲಕ್ಷ್ಮಿ ಬಿದ್ದಿದ್ದಳು. ಅವರೆಲ್ಲರ ತಲೆಗಳ ಮೇಲೆಯೆ ಗಾಯವಾಗಿತ್ತು. ಇದನ್ನೆಲ್ಲ ಕಂಡು ಎದೆಯೊಡೆದ ರತ್ನಾ ಶ್ರೀನಿವಾಸ ಅಯ್ಯಂಗಾರರ ಕೋಣೆಗೆ ಬಂದಳು. ಅವರು ಕೂಡ ಮಂಚದ ಮೇಲೆ ಸ್ಮೃತಿ ತಪ್ಪಿ ಬಿದ್ದಿದ್ದರು. ಅವರ ತಲೆಯ ಕೆಳಗಿದ್ದ ತಲೆದಿಂಬು ರಕ್ತದಿಂದ ತೊಯ್ದುಹೋಗಿತ್ತು. ಒಂದರ ಹಿಂದೊಂದು ಈ ಭೀಕರ ದೃಶ್ಯಗಳನ್ನು ಕಂಡ ರತ್ನಾಳ ಅವಸ್ಥೆ ಏನಾಗಿರಬಹುದೆಂಬುದನ್ನು ಊಹಿಸಿಯೆ ತಿಳಿಯಬೇಕು.

"ರಂಗ ವಿಲಾಸ"ದ ಹಿಂದೆ ಅಯ್ಯಂಗಾರರ ಒಡೆತನದ ಕಟ್ಟಡಗಳಿದ್ದವು. ಅಲ್ಲಿ ಬಾಡಿಗೆಗಿದ್ದ ನಾಗರಾಜ ಎಂಬವರನ್ನು ಭೆಟ್ಟಿಯಾಗಿ ರತ್ನಾ ಅವರಿಗೆ ಎಲ್ಲ ವಿಷಯಗಳನ್ನು ಹೇಳಿದಳು. ನಾಗ

ರಾಜ ಕೂಡಲೆ ಬಂದು ಎಲ್ಲವನ್ನೂ ನೋಡಿದರು. ಪಡಸಾಲೆಯನ್ನು ಪ್ರವೇಶಿಸುವ ಬಾಗಿಲ ಬಳಿ ಇದ್ದ ಎರಡು ಕಿಟಕಿಗಳಲ್ಲಿ ಒಂದರ ಸರಳು ಗಳನ್ನು ಬಗ್ಗಿಸಿ ಕೊಲೆಗಡಕರು ಮನೆಯನ್ನು ಪ್ರವೇಶಿಸಿದ್ದರು. ಅಯ್ಯಂಗಾರ ಮತ್ತು ರಂಗ ಲಕ್ಷ್ಮಿಯನ್ನುಳಿದು ಉಳಿದವರೆಲ್ಲರ ಪ್ರಾಣ ಪಕ್ಷಿ ಆಗಲೇ ಹಾರಿಹೋಗಿತ್ತು.

ತಿಜೋರಿಗಳಿದ್ದ ಕೋಣೆಯಲ್ಲಿ ವಿದ್ಯುದ್ದೀಪ ಉರಿಯುತ್ತಲಿತ್ತು. ಅಲ್ಲಿದ್ದ ತಿಜೋರಿ, ಕಪಾಟು, ಪೆಟ್ಟಿಗೆಗಳ ಮುಚ್ಚಳ ತೆರೆದಿತ್ತು. ದಾಗಿನೆ, ನಗದು ಹಣ, ಬೆಲೆಬಾಳುವ ಇತರ ವಸ್ತುಗಳೆಲ್ಲ ಮಾಯವಾಗಿದ್ದವು. ದಾಗಿನೆಗಳ ಖಾಲಿ ಡಬ್ಬಿ ಗಳು, ಬೆಳ್ಳಿಯ ಕೆಲವು ಪಾತ್ರೆಗಳು, ಅರಿವೆಗಳು ಕೋಣೆಯಲ್ಲಿ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದವು.

ಇದುವರೆಗೂ ನಿದ್ದೆ ಮಾಡುತ್ತಲಿದ್ದ ಪ್ರಸನ್ನಾ ರತ್ನಾಳ ಅಳುವಿನ ಧ್ವನಿ ಕೇಳಿ ಎದ್ದು ಬಂದ ವಳು ಆ ಕ್ರೂರ ದೃಶ್ಯವನ್ನು ಕಂಡವಳೇ ಎಚ್ಚರ ತಪ್ಪಿ ಬಿದ್ದುಬಿಟ್ಟಳು. ರಂಗವಿಲಾಸದ ಎದುರು ಗಡೆ ಇದ್ದ ತಾಜಮಹಲ್ ಹೋಟೆಲಿಗೆ ಹೋಗಿ ನಾಗರಾಜರು ಪೋಲೀಸರಿಗೆ ಫೋನ್ ಮಾಡಿ ದರು.

•

ಸರಿಯಾಗಿ ೬-೩೦ ಗಂಟೆಗೆ ಪೋಲೀಸ್ ಜೀಪ್ ಬಂತು. ಸಬ್ ಇನ್‌ಸ್ಪೆಕ್ಟರ್ ಶಿವಚರಣ ಸಿಂಗರು ತೋಟದಲ್ಲಿ ಪ್ರವೇಶಿಸಿದ್ದ ಪ್ರೇಕ್ಷಕ ರನ್ನು ಹೊರಗೆ ಹಾಕಿ ' ರಂಗವಿಲಾಸ ' ವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಪ್ರವೇಶ ದ್ವಾರ ದಲ್ಲಿ ಪೋಲೀಸರನ್ನು ನಿಲ್ಲಿಸಿ ಯಾರೂ ಒಳಗೆ ಬಾರದಂತೆ ಮಾಡಿದರು.

ರತ್ನಾ, ಪ್ರಸನ್ನಾ ಮತ್ತು ಯೇಲಾ ಅಳುತ್ತಲೇ ಇದ್ದರು. ಶಿವಚರಣರು ವೆಂಗಮ್ಮಳ ಕೋಣೆ ಯನ್ನು ಪರೀಕ್ಷಿಸಿದರು. ಗೋಡೆಗೆ ಆನಿಸಿಟ್ಟಿದ್ದ ಒಂದು ಕಬ್ಬಿಣದ ಹಾರೆಗೆ ರಕ್ತ ಮೆತ್ತಿತ್ತು. ಮಾಂಸದ ಸಣ್ಣ ಸಣ್ಣ ತುಣುಕುಗಳೂ ಅಂಟಿ ಕೊಂಡಿದ್ದವು. ರಕ್ತ ಮೆತ್ತಿದ ಇನ್ನೆರಡು ಹಾರೆ ಗಳು ವೆಂಗಮ್ಮಳ ಮಂಚದ ಮೇಲಿದ್ದವು. ಅಲ್ಲಿ ಒಂದು ಚಾಕುವೂ ಇತ್ತು. ಬೇಲೂರು ಶ್ರೀನಿ-ವಾಸ ಅಯ್ಯಂಗಾರರ ಕೋಣೆಯಲ್ಲಿ ಮಾತ್ರ ಯಾವ ಆಯುಧವೂ ಇರಲಿಲ್ಲ.

ಆಗಿಂದಾಗ ಅಂಬ್ಯುಲನ್ಸ್ ಗಾಡಿ ತರಿಸಿ ಶಿವ-ಚರಣರು ಅಯ್ಯಂಗಾರ ಮತ್ತು ರಂಗಲಕ್ಷ್ಮಿಯ ರನ್ನು ವಿಕ್ಟೋರಿಯಾ ಆಸ್ಪತ್ರೆಗೆ ಕಳಿಸಿದರು. ಆಮೇಲೆ ಅವರು ಟೈಗರನನ್ನು ಶೋಧಿಸತೊಡಗಿ ದರು. ತೋಟದ ಮೂಲೆಯಲ್ಲಿ ಒಂದು ಗಿಡದಡಿ ಅದು ಸ್ಮೃತಿ ತಪ್ಪಿ ಬಿದ್ದಿತ್ತು. ಅದರ ಮೈಮೇಲೆ ಒಂದೂ ಗಾಯವಿರಲಿಲ್ಲ. ಆದರೆ ಅದರ ಮೇಲೆ ವಿಷಪ್ರಯೋಗವಾಗಿತ್ತು. ಶಿವಚರಣರು ಅದನ್ನು ಆಸ್ಪತ್ರೆಗೆ ಕಳಿಸಿದರು.

ರಂಗವಿಲಾಸದಲ್ಲಿ ನಡೆದ ಹತ್ಯಾಕಾಂಡದ ಸುದ್ದಿ ಇಷ್ಟರಲ್ಲಿ ನಗರದಲ್ಲೆಲ್ಲ ಹಬ್ಬಿದ್ದರಿಂದ ಜನರು ತಂಡತಂಡವಾಗಿ ಬರತೊಡಗಿದ್ದರು. ಶಿವಚರಣರು ಟೆಲಿಫೋನಿನಿಂದ ಡಿ. ಎಸ್. ಪಿ., ಪೋಲೀಸ್ ಇನಸ್ಪೆಕ್ಟರ್ ಜನರಲ್ ಮೊದ ಲಾದವರಿಗೆ ಸುದ್ದಿ ತಿಳಿಸಿದರಲ್ಲದೆ ಬಂದೋ ಬಸ್ತಿಗಾಗಿ ಹೆಚ್ಚಿನ ಪೋಲೀಸರನ್ನು ಕರೆಸಿ ಕೊಂಡರು.

ಡಿ. ಎಸ್. ಪಿ. ರೇವಣ್ಣರು ಇತರ ಪೋಲೀಸ ಅಧಿಕಾರಿಗಳೊಂದಿಗೆ ಬಂದಾಗ ರಂಗವಿಲಾಸದ ಎದುರು ರಸ್ತೆಯಲ್ಲಿ ಜನ ಇರುವೆಗಳಂತೆ ಮುತ್ತಿ ದ್ದರು. ಕಷ್ಟದಿಂದಲೆ ದಾರಿಮಾಡಿಕೊಂಡು ರಂಗ ವಿಲಾಸವನ್ನು ಪ್ರವೇಶಿಸಿದ ಅವರು ಮೊದಲು ಬಂಗಲೆಯನ್ನೆಲ್ಲ ಸೂಕ್ಷ್ಮವಾಗಿ ಪರೀಕ್ಷಿಸಿದರು. ಪಡಸಾಲೆಯಲ್ಲಿ ಒಂದು ಕುರ್ಚಿಯ ಮೇಲೆ ಒಂದು ಸುತ್ತಿಗೆ ಬಿದ್ದಿತ್ತು. ಕುರ್ಚಿಯ ಮಗ್ಗ ಲಲ್ಲಿ ಹಿಮಾಲಯ ಟಾಕೀಸಿನ ಎರಡು ತಿಕೀಟು ಗಳು ಬಿದ್ದಿದ್ದವು. ೫ ನೇ ತಾರೀಖಿನ ರಾತ್ರಿ ಒಂಬತ್ತರ ಆಟದ ತಿಕೀಟುಗಳಾಗಿದ್ದವು ಅವು. ಬೇಲೂರರ ಕುಟುಂಬದಲ್ಲಾದರೂ ಆ ರಾತ್ರಿ

ಸಿನೇಮಾಕ್ಕೆ ಹೋಗಿರಲಿಲ್ಲವೆಂದು ಅವರಿಗೆ ತಿಳಿಯಿತು. ಹೊತ್ತುಕಳೆಯಲೆಂದು ಕೊಲೆಗಡಕರು ಸಿನೇಮಾಕ್ಕೆ ಹೋಗಿರಬೇಕು. ರಾತ್ರಿ ೧೨ ರ ನಂತರ ಅವರು ರಂಗವಿಲಾಸದ ಮೇಲೆ ದರೋಡೆ ಹಾಕಿರಬೇಕು ಎಂದು ಡಿ ಎಸ್. ಪಿ. ರೇವಣ್ಣ ಅಂದಾಜು ಕಟ್ಟಿದರು. ಆದರೆ ಬಂಗಲೆಯಲ್ಲಿಯ ಅನಾಹುತವನ್ನು ನೋಡಿದರೆ ಇಬ್ಬರಿಂದಲೇ ಅಷ್ಟೆಲ್ಲ ನಡೆಯಲಾರದು ಎಂದೂ ಅವರಿಗನಿಸಿತು. ಮತ್ತೆ ಆ ಸಿನೇಮಾ ತಿಕೀಟುಗಳ ಮೂಲಕ ಅಪರಾಧಿಗಳ ಪತ್ತೆ ಹಚ್ಚುವುದು ಅಸಾಧ್ಯವಲ್ಲದಿದ್ದರೂ ಬಹು ಕಠಿನವಾಗಿತ್ತು.

ರೇವಣ್ಣ ಕಾರ್ಯಕ್ಕಾರಂಭಿಸಿದರು ಮೊಟ್ಟ ಮೊದಲಿಗೆ ಅವರು ಹೆಬ್ಬೆರಳು ಗುರುತಿನ ತಜ್ಞ ಶ್ರೀ ಪ್ರೇಮ ಮತ್ತು ಫೋಟೋಗ್ರಾಫರ್ ತಿಮ್ಮಯ್ಯನವರನ್ನು ಕರೆಸಿದರು. ಕಪಾಟು, ತಿಜೋರಿ, ಬಾಗಿಲು, ಕಬ್ಬಿಣದ ಹಾರೆ ಮುಂತಾದವುಗಳ ಮೇಲೆ ಮೂಡಿದ್ದ ಬೆರಳುಗಳ ಮುದ್ರೆಯ ಫೋಟೋ ತೆಗೆದುಕೊಳ್ಳಲ್ಪಟ್ಟಿತು ಬೆಳ್ಳಿ ಪಾತ್ರೆಗಳ ಮೇಲಿನ ಬೆರಳಿನ ಗುರುತುಗಳು ಹೆಚ್ಚು ಸ್ಪಷ್ಟವಾಗಿದ್ದವು. ಅಪರಾಧಿಗಳ ಬೆರಳುಗಳ ಗುರುತುಗಳನ್ನು ಕಂಡುಹಿಡಿಯಲು ಅನುಕೂಲವಾಗಲೆಂದು ಶ್ರೀ ಪ್ರೇಮರು ಅಯ್ಯಂಗಾರ ಕುಟುಂಬದ ಎಲ್ಲರ ಬೆರಳುಗಳ ಮುದ್ರೆಗಳೂ ತಮಗೆ ಬೇಕೆಂದು ತಿಳಿಸಿದರು.

ರತ್ನಳಿಂದ ಕಳವಾಗಿ ಹೋದ ದಾಗಿನೆ ಮತ್ತು ಇತರ ವಸ್ತುಗಳ ಯಾದಿಯನ್ನು ಡಿ. ಎಸ್. ಪಿ. ರೇವಣ್ಣ ಬರೆಸಿಕೊಂಡರು. ಪಂಚನಾಮೆ ಮಾಡಿ ಶವಗಳನ್ನು ಪರೀಕ್ಷೆಗಾಗಿ ಆಸ್ಪತ್ರೆಗೆ ಕಳಿಸಿದರು ಮೈಸೂರು ರಾಜ್ಯದಲ್ಲಿಯ ಎಲ್ಲ ಮಹತ್ವದ ಪೋಲೀಸು ಠಾಣೆಗಳಿಗೆ ಸುದ್ದಿ ಕಳಿಸಿ ರೇವಣ್ಣನವರು ಪೋಲೀಸರು ಜಾಗರೂಕರಾಗಿರುವಂತೆ ಮಾಡಿದರು. ಬೆಂಗಳೂರಿನಲ್ಲಿ ಪೋಲೀಸ್ ಬಂದೋಬಸ್ತು ಮಾಡಿ ಓಣಿ ಓಣಿಯಲ್ಲಿ ಗುಪ್ತ ಪೋಲೀಸರ ಜಾಲವು ಪಸರಿಸುವಂತೆ ಏರ್ಪಡಿಸಿದರು.

ಮುಖ್ಯ ಮಂತ್ರಿಗಳ ಸಲಹೆಯಂತೆ ರೇವಣ್ಣನವರು ಮದ್ರಾಸ್ ಪೋಲೀಸರಿಗೆ ಫೋನ್ ಮಾಡಿ ಕಳ್ಳರನ್ನು ಹಿಡಿಯುವಲ್ಲಿ ಅತ್ಯಂತ ಯಶಸ್ವಿಗಳಾದ "ಯುವರಾಜ" ಮತ್ತು "ಚೀಫ್" ಎಂಬ ಎರಡು ನಾಯಿಗಳನ್ನು ಕಳಿಸಲು ಕೇಳಿಕೊಂಡರು. ಒಂದೇ ಒಂದು ತಾಸಿನೊಳಗಾಗಿ ಮದ್ರಾಸ್ ಪೋಲೀಸ್ ಶಾಖೆಯ ಇನಸ್ಪೆಕ್ಟರರೊಬ್ಬರು ಆ ಎರಡು ನಾಯಿಗಳೊಂದಿಗೆ ವಿಮಾನದಲ್ಲಿ ಬೆಂಗಳೂರಿಗೆ ಬಂದಿಳಿದರು.

ಯುವರಾಜ ಮತ್ತು ಚೀಫ್ ರಂಗವಿಲಾಸದಲ್ಲಿಯ ಒಂದೊಂದೇ ವಸ್ತುವಿನ ವಾಸನೆ ಹಿಡಿದು ಅದರ ಸುಳಿವಿನಲ್ಲಿ ರಸ್ತೆಯಲ್ಲಿ ಓಡತೊಡಗಿದವು. ಆದರೆ ಅಂದು ಅವು ಹುಡುಕಿ ಕೊಟ್ಟವರೆಲ್ಲ ಸಂಶಯಾತೀತರಾಗಿದ್ದರು. ಅವರಲ್ಲನೇಕರು ಹಿಂದಿನ ದಿನ ಶ್ರೀನಿವಾಸ ಅಯ್ಯಂಗಾರರನ್ನು ಭೆಟ್ಟಿಯಾಗಿ ಬಂದಿದ್ದ ಅವರ ಆಪ್ತರಾಗಿದ್ದರು. ರೇವಣ್ಣನವರ ಈ ಬ್ರಹ್ಮಾಸ್ತ್ರ ವಿಫಲವಾಯಿತು. ಹಿಮಾಲಯ ಟಾಕೀಸಿನಲ್ಲಿ ನಡೆಸಿದ ತಪಾಸಣೆಯಿಂದಲೂ ಅಪರಾಧಿಗಳ ಸುಳಿವು ಹತ್ತುತ್ತಿರಲಿಲ್ಲ.

ಅಂದು ಸಂಜೆ ಆರರ ಸುಮಾರಿಗೆ ಅಯ್ಯಂಗಾರರು ಪ್ರಾಣ ನೀಗಿದರು. ಟೈಗರ್ ಕೂಡ ಅಂದೇ ಸತ್ತಿತು. ರಂಗಲಕ್ಷ್ಮಿ ಉಳಿದುಕೊಂಡಿದ್ದರೂ ಅವಳಿಗಿನ್ನೂ ಎಚ್ಚರ ಬಂದಿರಲಿಲ್ಲ. ಅವಳ ಮಿದುಳಿಗೆ ವಿಪರೀತ ಆಘಾತವಾಗಿರುವುದರಿಂದ ಅವಳು ಎಚ್ಚರವಾಗಲು ಕನಿಷ್ಠ ಒಂದು ವಾರವಾದರೂ ಬೇಕಾದೀತು ಎಂದು ಡಾಕ್ಟರರು ಹೇಳಿದರು.

ಜೂನ್ ಏಳರಂದು ಬೆಳ್ಳಿ ಪಾತ್ರೆಗಳ ಮೇಲೆ ಮೂಡಿದ್ದ ಬೆರಳುಗಳ ಗುರುತನ್ನು ಅಭ್ಯಸಿಸಿ ಶ್ರೀ ಪ್ರೇಮರು ರೇವಣ್ಣರಿಗೆ ಅಪರಾಧಿಗಳವಾಗಿರಬಹುದಾದ ಮೂರು ಗುರುತುಗಳ ಫೋಟೊಗಳನ್ನು ಒಪ್ಪಿಸಿದರು.

ಜೂನ್ ೮. ಪತ್ರಿಕೆಗಳಲ್ಲಿ ವಿವಿಧ ಬಗೆಯ ಸುದ್ದಿಗಳು ಪ್ರಕಟವಾಗಿದ್ದವು. ಮಧ್ಯಪ್ರದೇಶದ ಒಂದು ದೊಡ್ಡ ದರೋಡೆಖೋರರ ಗುಂಪು ನಗರಕ್ಕೆ ಬಂದಿದೆಯೆಂದೂ ಅವರದೇ ಕಾರ್ಯ ಇದು ಎಂದೂ ಬೆಂಗಳೂರಿನಲ್ಲಿ ಒಂದು ಸುದ್ದಿ ಹಬ್ಬಿತ್ತು.

ಅಂದು ರಾತ್ರಿ ಪೋಲೀಸ್ ಅಧಿಕಾರಿ ವೇದಗಿರಿ ರಾತ್ರಿ ಹನ್ನೊಂದರ ಸುಮಾರಿಗೆ ಜೀಪ್ ಗಾಡಿಯಲ್ಲಿ ನಗರದಲ್ಲಿ ಗಸ್ತು ತಿರುಗುತ್ತಿದ್ದರು. ಕಳ್ಳರಿಗೆ ವೇದಗಿರಿಯ ಅಂಜಿಕೆ ಬಹಳ. ಜೀಪ್ ಶೇಷಾದ್ರಿಪುರಕ್ಕೆ ಬಂದಾಗ ರಾತ್ರಿ ೧೨ ಹೊಡೆದಿತ್ತು. ರಸ್ತೆಯಲ್ಲಿ ಒಂದು ಪಿಳ್ಳೆಯೂ ಇರಲಿಲ್ಲ. ಜೀಪ್ ವೇಗದಿಂದ ಓಡುತ್ತಿತ್ತು. ಒಂದು ಮುರುವಿನಲ್ಲಿ ಅವರು ಗಾಡಿಯ ವೇಗ ಕಡಿಮೆ ಮಾಡಿ ಹ್ಯಾಂಡ್‌ಲ್ಯಾಂಪ್ಸ್ ಹಚ್ಚಿದರು. ಆ ಪ್ರಕಾಶದಲ್ಲಿ ರಸ್ತೆಯ ಅಂಚಿನಲ್ಲಿ ಕಳ್ಳತನದಿಂದ ಸಾಗುತ್ತಿದ್ದ ವ್ಯಕ್ತಿಯೊಂದು ಅವರಿಗೆ ಕಾಣಿಸಿತು. ಬೆಳಕು ಬಿದ್ದೊಡನೆ ಅದು ಬಾಗಿತು. ಅದರ ಕೈಯಲ್ಲೊಂದು ಗಂಟಿತ್ತು. ಗಾಡಿ ನಿಲ್ಲಿಸಿ ವೇದಗಿರಿ ಕೆಳಗೆ ಧುಮುಕಿ ಆ ವ್ಯಕ್ತಿಯನ್ನು ಹಿಡಿದು "ಯಾರು? ಈ ಹೊತ್ತಿನಲ್ಲಿ ಇಲ್ಲೇನು ನಡೆಸಿರುವಿ?" ಎಂದು ಕೇಳಿದರು.

"ನಾನು ಚೆನ್ನ, ಸ್ವಾಮಿ. ನನಗೆ ಮನೆಮಾರಿಲ್ಲ" ಆ ವ್ಯಕ್ತಿ ಅಳು ಸ್ವರದಲ್ಲಿ ನುಡಿಯಿತು. ಹ್ಯಾಂಡ್‌ಲ್ಯಾಂಪಿನ ಪ್ರಕಾಶದಲ್ಲಿ ಅವನನ್ನು ಚೆನ್ನಾಗಿ ನಿರುಕಿಸಿದರು ವೇದಗಿರಿ. ಕನ್ನ ಹಾಕಿದ್ದಕ್ಕಾಗಿ ಆತನನ್ನು ಕೆಲ ದಿನಗಳ ಹಿಂದೆ ತಾನು ಹಿಡಿದದ್ದು ಅವರಿಗೆ ನೆನಪಾಯಿತು.

"ಈ ಗಂಟಿನಲ್ಲೇನಿದೆ? ಬಿಚ್ಚು ಅದನ್ನು."

ಗಂಟಿನಲ್ಲಿ ಒಂದು ಹಾರೆ, ಮನೆಗೆ ಕನ್ನ ಹಾಕುವ ಸಾಧನಗಳಿದ್ದವು. ವೇದಗಿರಿ ಚೆನ್ನನನ್ನು ಶೇಷಾದ್ರಿಪುರದ ಪೋಲೀಸ್ ಠಾಣೆಯಲ್ಲಿ ಬಂಧಿಸಿಟ್ಟರು. ಮುಂಜಾನೆ ಇನ್‌ಸ್ಪೆಕ್ಟರ್ ಬಸವರಾಜರ ಎದುರು ಚೆನ್ನನನ್ನು ನಿಲ್ಲಿಸಿದರು. ಹಿಂದೆ ಬಸವರಾಜರ ಕೈಲಿ ಸಿಕ್ಕಿಬಿದ್ದಿದ್ದ ಚೆನ್ನ ಅವರನ್ನು ಕಂಡೊಡನೆ ಹೆದರಿ ಕಂಗಾಲಾದ. ಬಸವರಾಜರು ಕಟುಸ್ವರದಲ್ಲಿ ಕೇಳಿದರು.

"ಯಾರು ನೀನು?"

"ಚೆನ್ನ, ಸ್ವಾಮಿ."

"ಎಲ್ಲಿರುವಿ?"

"ಚಿಕ್ಕನಾಯಕನ ಹಳ್ಳಿಯಲ್ಲಿ."

"ಹಾಗಾದರೆ ಇಲ್ಲೇಕೆ ಬಂದೆ? ಕನ್ನ ಹಾಕಲಿಕ್ಕೇನು? ಎಂದು ಬಂದೆ?"

"ಹದಿನೈದು ದಿನವಾಯಿತು ಸ್ವಾಮಿ. ಅಲಸೂರಿನ ಕೃಷ್ಣ ಮತ್ತು ಮುನಿಸ್ವಾಮಿ ನನ್ನನ್ನು ಕರೆಸಿಕೊಂಡರು."

"ಯಾತಕ್ಕೆ? ಕನ್ನ ಹಾಕಲೇನು? ಯಾರ ಮನೆಗೆ ಕನ್ನಹಾಕಿದಿರಿ?"

"ಯಾರ ಮನೆಗೂ ಹಾಕಲಿಲ್ಲ ಸ್ವಾಮಿ. ಬೇಲೂರರ ಮನೆಗೆ ಕನ್ನ ಹಾಕಲು ಹದಿನೈದು ದಿನಗಳ ಹಿಂದೆ ಹೋಗಿದ್ದೆವು. ಆದರೆ ಅಲ್ಲಿ ನಾಯಿ ಬೊಗಳಿದ್ದರಿಂದ ಹಾಗೇ ತಿರುಗಿ ಓಡಿ ಬಂದೆವು."

"ಆಮೇಲೆ ಮತ್ತೆ ಯಾವಾಗ ಹೋದಿರಿ?"

"ನಾನು ಮತ್ತೆ ಹೋಗಲೇ ಇಲ್ಲ"

ಬಸವರಾಜರಿಗೆ ಮುಗಿಲು ಸಿಕ್ಕಿದಂತಾಯಿತು. ಯಾವ ಪ್ರಕರಣದ ಸುಳಿವಿಗಾಗಿ ಅವರೆಲ್ಲ ಒದ್ದಾಡುತ್ತಿದ್ದರೊ ಅದರ ಸುಳಿವು ಹೀಗೆ ಅಕಸ್ಮಾತ್ತಾಗಿ ಸಿಕ್ಕೀತೆಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ. ಅವರು ಚೆನ್ನನನ್ನು ಲಾಕಪ್ಪಿನಲ್ಲಿಟ್ಟು ರೇವಣ್ಣನವರಿಗೆ ಸುದ್ದಿ ಕಳಿಸಿದರು.

ರೇವಣ್ಣ ಕೂಡಲೆ ಬಂದು ಚೆನ್ನನ ತಪಾಸಣೆ ನಡೆಸಿದರು. ಅವನ ಲಿಖಿತ ಹೇಳಿಕೆ ತೆಗೆದುಕೊಂಡರು. ಮೊದಲನೆಯ ಸಲ ಅಸಫಲರಾದ ಕೃಷ್ಣ ಮತ್ತು ಮುನಿಸ್ವಾಮಿ ಮತ್ತೆ ಪ್ರಯತ್ನಿಸಿ ದರೋಡೆ ಹಾಕಿರುವ ಸಂಭವವಿತ್ತು. ಚೆನ್ನನಿಗೆ ಮಾತ್ರ ಆ ಬಗ್ಗೆ ಏನೂ ಗೊತ್ತಿರಲಿಲ್ಲ.

ಆದರೆ ಆತ ಕೃಷ್ಣ ಮತ್ತು ಮುನಿಸ್ವಾಮಿಯವರ ಮನೆಗಳನ್ನು ತೋರಿಸಲು ಒಪ್ಪಿದ.

ಅಲಸೂರಿನಲ್ಲಿರುವ ಕೃಷ್ಣನ ಮನೆಯಲ್ಲಿ ಅವನ ಹೆಂಡತಿ ಜಯಾ ಇದ್ದಳು. ಬಸವರಾಜರು ಅವನ ಹಾದಿ ಕಾಯುತ್ತ ಅಡಗಿ ಕುಳಿತರು. ಸುತ್ತಲಿನ ನಾಕೆಗಳಲ್ಲೆಲ್ಲ ಅವರು ಪೋಲೀಸರನ್ನು ಕಾವಲು ನಿಲ್ಲಿಸಿದರು.

ಹನ್ನೊಂದರ ಸುಮಾರಿಗೆ ಕೃಷ್ಣ ಮೋಟರ್ ಸೈಕಲ್ಲಿನಲ್ಲಿ ಬಂದ. ಆತ ಮನೆಯಲ್ಲಿ ಕಾಲಿಟ್ಟೊಡನೆ ಪೋಲೀಸರು ಅವನ ಮನೆ ಮುತ್ತಿದರು. ಬಸವರಾಜರು ಒಳಗೆ ಹೋಗಿ ಅವನನ್ನು ಬಂಧಿಸಿದರು. ಅಕಸ್ಮಾತ್ತಾಗಿ ನಡೆದ ಈ ಘಟನೆಯಿಂದ ಆತ ಕಂಗೆಟ್ಟು ಹೋದ. ಅವನನ್ನು ಝಡತಿ ಮಾಡಿ ಬಸವರಾಜರು ಅವನ ಕಿಸೆಯಲ್ಲಿದ್ದ ೧,೦೬೫ ರೂಪಾಯಿಗಳ ನೋಟುಗಳನ್ನೂ ಕೀಲೀಕೈಗಳ ಒಂದು ಗೊಂಚಲನ್ನೂ ಎರಡು ಪಾವತಿಗಳನ್ನೂ ವಶಪಡಿಸಿಕೊಂಡರು.

ರೇವಣ್ಣನವರು ಅವನಿಗೆ ಅವನ ವಿರುದ ಇದ್ದ ಸಾಕ್ಷಿಗಳ ವಿಚಾರ ತಿಳಿಸಿ ಅಪರಾಧ ಒಪ್ಪಿಗೆಯೆ ಎಂದು ಕೇಳಿದರು. ತಾನು ಪೂರಾ ಸಿಕ್ಕಿಬಿದ್ದೆ ಎಂದು ಖಾತ್ರಿಯಾಗಿದ್ದ ಕೃಷ್ಣ ಒಪ್ಪಿಗೆಯ ಜವಾಬು ಕೊಟ್ಟ. ತನ್ನ ತಮ್ಮ ಮುನಿಸ್ವಾಮಿ ಮತ್ತು ಕಕ್ಕ ಗೋವಿಂದ ರೆಡ್ಡಿಯೊಂದಿಗೆ ತಾನು ದರೋಡೆ ಹಾಕಿದ್ದಾಗಿ ಆತ ಹೇಳಿದ.

ಕೃಷ್ಣನನ್ನು ಅವನ ಮನೆಗೆ ಕರತಂದರು. ಬಸವರಾಜರಿಂದ ಕೀಲಿಕೈ ಇಸಿದುಕೊಂಡು ಆತ ಮನೆಯಲ್ಲಿದ್ದ ಎರಡು ಟ್ರಂಕುಗಳನ್ನು ತೆರೆದ. ಬೆಲೆ ಬಾಳುವ ದಾಗಿನೆ ಮತ್ತು ವಸ್ತುಗಳಿಂದ ಅವೆರಡೂ ತುಂಬಿ ಹೋಗಿದ್ದವು, ಬೇಲೂರರಲ್ಲಿ ಕಳವಾಗಿದ್ದ ಯಾದಿಯಲ್ಲಿನ ಹೆಚ್ಚಿನ ವಸ್ತುಗಳು ರೇವಣ್ಣನವರಿಗೆ ಸಿಕ್ಕವು. ಮನೆಯ ಹೊರಗಿನ ಬೇಲಿಯಲ್ಲಿ ಅಡಗಿಸಿಟ್ಟಿದ್ದ ಒಂದು ಗಂಟನ್ನೂ ಅವನು ಒಪ್ಪಿಸಿದ. ಅದರಲ್ಲಿ ರಕ್ತದ ಕಲೆಗಳಿದ್ದ ಕೆಲವು ಅರಿವೆಗಳಿದ್ದವು.

ಇನ್ನು ಮುನಿಸ್ವಾಮಿ ಮತ್ತು ಗೋವಿಂದ ರೆಡ್ಡಿಯನ್ನು ಹಿಡಿಯುವ ಕೆಲಸ ಉಳಿಯಿತು. ಅಂದೇ ಬಸವರಾಜರು ಮುನಿಸ್ವಾಮಿಯ ಮನೆಗೆ ಮುತ್ತಿಗೆ ಹಾಕಿದರು. ಆತ ಮನೆಯಲ್ಲಿರಲಿಲ್ಲ. ಆದರೆ ಮನೆಯ ಝಡತಿಯಲ್ಲಿ ಕಾಗದದ ಲಕೋಟೆಯೊಂದರಲ್ಲಿಟ್ಟಿದ್ದ ಕೆಲವು ದಾಗಿನೆಗಳು ಸಿಕ್ಕವು.

ಗಾಂಧಿನಗರದಲ್ಲಿದ್ದ ಗೋವಿಂದ ರೆಡ್ಡಿಯ ಮನೆಯನ್ನು ಬಸವರಾಜರು ಮುತ್ತಿದಾಗ ಅವನೂ ಮನೆಯಲ್ಲಿರಲಿಲ್ಲ. ಗೋವಿಂದನ ಹೆಂಡತಿ ಆಗ ಮಗುವಿಗೆ ಮೊಲೆ ಉಣಿಸುತ್ತ ಕುಳಿತಿದ್ದಳು. ರಂಗವಿಲಾಸದ ಹತ್ಯಾಕಾಂಡದ ಸುದ್ದಿಯನ್ನವಳು ಕೇಳಿದ್ದರೂ ಅದರಲ್ಲಿ ಗಂಡನ ಅಂಗವಿರಬಹುದೆಂಬ ಕಲ್ಪನೆ ಅವಳಿಗಿರಲಿಲ್ಲ. ಝಡತಿಯಲ್ಲಿ ಬಸವರಾಜರಿಗೆ ರಕ್ತದ ಕಲೆಯುಳ್ಳ ಒಂದು ಪಂಜೆ ಸಿಕ್ಕಿತು.

ಮುನಿಸ್ವಾಮಿ ಮತ್ತು ಗೋವಿಂದರೆಡ್ಡಿಯ ಬೆನ್ನು ಹತ್ತಿದ ಪೋಲೀಸರು ಅಂದು ಮಧ್ಯಾಹ್ನದ ಸುಮಾರಿಗೆ ಒಂದು ಹೆಂಡದಂಗಡಿಯಲ್ಲಿ ಮುನಿಸ್ವಾಮಿಯನ್ನು ಬಂಧಿಸಿದರು. ಅವನ ಕಿಸೆಯಲ್ಲಿ ಕೆಲ ದಾಗಿನೆ ಮತ್ತು ನೋಟುಗಳು ಸಿಕ್ಕವು. ಗೋವಿಂದ ಅಂದು ಅವರ ಕೈಗೆ ಸಿಗಲಿಲ್ಲ.

ಪತ್ರಿಕೆಗಳಲ್ಲಿ ಈ ಎಲ್ಲ ಸುದ್ದಿ ಬಂದಿತು. ಗೋವಿಂದ ಬೆಂಗಳೂರಿಂದ ಓಡಿ ಹೋಗುವ ಸಂಭವವಿತ್ತು. ಅವನನ್ನು ಬಂಧಿಸಲು ರೇವಣ್ಣ ಗುಪ್ತ ಪೋಲೀಸ್ ಖಾತೆಯಲ್ಲಿ ಖ್ಯಾತಿವೆತ್ತಿದ್ದ ಹುಚ್ಚರಾಯರನ್ನು ನೇಮಿಸಿದರು.

ಗೋವಿಂದ ಸಿಟಿ ಮಾರ್ಕೆಟ್ಟಿನ ಬಳಿ ಒಂದು ಗುಡಿಸಲಲ್ಲಿ ಅಡಗಿ ಕುಳಿತಿದ್ದ. ಆ ಗುಡಿಸಲಿನ ಬಳಿ ಗುಪ್ತ ಪೋಲೀಸರ ವಾಸನೆ ಬಡಿಯಲು ಗೋವಿಂದ ಅಲ್ಲಿಂದ ಜಾರಿದ. ಆತ ಟಾಕ್ಸಿ

ಸ್ಟ್ಯಾಂಡಿನ ಕಡೆ ನಡೆದ ವಿಚಾರ ಪೋಲೀಸರಿಗೆ ತಿಳಿಯಿತು.

ಆತ ಇಸ್ತ್ರಿ ಮಾಡಿದ ಧೋತರ ಉಟ್ಟು ಬಿಳಿ ಶರ್ಟು ಮತ್ತು ಉಲನ್ ಕೋಟು ಧರಿಸಿದ್ದ. ಜನರ ಗದ್ದಲದಲ್ಲಿ ನುಸುಳಿ ಆತ ಟ್ಯಾಕ್ಸಿ ಸ್ಟ್ಯಾಂಡಿಗೆ ಬಂದು ಒಂದು ಟ್ಯಾಕ್ಸಿಯ ಬಾಗಿಲು ತೆರೆಯುತ್ತಿದ್ದಂತೆ ಹುಚ್ಚರಾಯರು ಅವನನ್ನು ಹಿಡಿದು ಅವನನ್ನು ರಂಗವಿಲಾಸದ ದರೋಡೆಯ ಸಂಬಂಧದಲ್ಲಿ ಬಂಧಿಸುತ್ತಿರುವುದಾಗಿ ಹೇಳಿದರು.

ಗೋವಿಂದ ತುಸು ಗದ್ದಲ ಮಾಡಿದ. ಆದರೆ ಹುಚ್ಚರಾಯರ ಜೊತೆಯಲ್ಲಿ ಅವರ ಸಂಗಡಿಗರಿದ್ದರು. ಜನರೂ ಕೂಡಿದರು. ಹುಚ್ಚರಾಯರು ಗೋವಿಂದನ ಝಡತಿ ಮಾಡಿದಾಗ ಕೋಟಿನ ಕಿಸೆಯಲ್ಲಿ ಚಿಲ್ಲರೆಯ ಹೊರತು ಮತ್ತೇನೂ ಸಿಗಲಿಲ್ಲ. ಆದರೆ ಧೋತರದ ಒಳಗಡೆ ಆತ ತೊಟ್ಟಿದ್ದ ಪಾಯಜಾಮಾದ ಕಿಸೆಯಲ್ಲಿದ್ದ ಲಕೋಟೆಯಲ್ಲಿ ಒಂದು ಮುತ್ತಿನ ಬಳೆಗಳ ಜೋಡು, ವಜ್ರದ ಬಳೆಯ ಜೊತೆ ಮತ್ತು ಒಂದು ಮುತ್ತಿನ ಹಾರ ಸಿಕ್ಕವು.

ಕೃಷ್ಣ, ಮುನಿಸ್ವಾಮಿ ಮತ್ತು ಗೋವಿಂದರನ್ನು ಬೇರೆ ಬೇರೆ ಕೋಣೆಯಲ್ಲಿ ಬಂಧಿಸಿಟ್ಟರು. ಅವರ ಬೆರಳುಗಳ ಮುದ್ರೆಗಳನ್ನು ಶ್ರೀ ಪ್ರೇಮರ ಹತ್ತರ ಕಳಿಸಿದರು. ಅವು ಮತ್ತು ಶ್ರೀಪ್ರೇಮರು ಪೋಲೀಸರಿಗೆ ಕಳಿಸಿದ್ದ ಬೆರಳು ಮುದ್ರೆಗಳು ಒಂದೇ ಆಗಿದ್ದವು.

ಕೃಷ್ಣ ಅಪರಾಧವನ್ನೊಪ್ಪಿಕೊಂಡಿದ್ದ. ಮುನಿಸ್ವಾಮಿ ಮತ್ತು ಗೋವಿಂದರೆಡ್ಡಿ ತನ್ನ ಸಹಕಾರಿಗಳು ಎಂದೂ ಹೇಳಿದ್ದ. ರಂಗವಿಲಾಸದಲ್ಲಿ ನಡೆಸಿದ ಕೊಲೆಗಳ ಕಾಲದಲ್ಲಿ ಉಪಯೋಗಿಸಿದ ಒಂದು ಚಾಕುವನ್ನು ತಾನು ತನ್ನ ಮನೆಯ ಹಿಂದಿನ ಬಾವಿಯಲ್ಲಿ ಚೆಲ್ಲಿರುವುದಾಗಿ ಆತ ಜೂನ್ ೧೩ ರಂದು ತಿಳಿಸಿದ. ಬಾವಿ ತುಂಬ ಆಳವಾಗಿತ್ತಲ್ಲದೆ ಬಹಳ ನೀರೂ ಇತ್ತು.

ಪ್ರಯಾಸದಿಂದ ನೀರು ತೆಗೆದಾಗ ಚಾಕು ಸಿಕ್ಕಿತು. ಅದರ ಮೇಲೆ ರಕ್ತದ ಕಲೆಗಳು ಸ್ಪಷ್ಟವಾಗಿ ಕಾಣಿಸಿದ್ದವು. ಆದರೆ ರಕ್ತ ಮನುಷ್ಯರದೇ ಎಂದು ಸ್ಪಷ್ಟವಾಗಿ ಹೇಳುವಂತಿರಲಿಲ್ಲವಾದರೂ ಖಟ್ಲೆಯಲ್ಲಿ ಈ ಪುರಾವೆ ಪ್ರಯೋಜನಕ್ಕೆ ಬರುವಂತಿತ್ತು. ಕೃಷ್ಣನ ಮನೆಯಲ್ಲಿ ಸಿಕ್ಕ ದಾಗಿನೆಗಳ ಮೇಲೆ ಬೇಲೂರರ ಹೆಸರಿನ ಆದ್ಯಾಕ್ಷರಗಳಿದ್ದವು.

ಗೋವಿಂದನ ಬಂಧನದ ನಂತರ ಪೋಲೀಸ್ ತಪಾಸಣೆಯ ಕಾರ್ಯ ಭರದಿಂದ ನಡೆಯಿತು. ರೇವಣ್ಣನವರು ಬಹು ಶ್ರಮಪಟ್ಟು ಸಾಧ್ಯವಿರುವಷ್ಟು ಪುರಾವೆಗಳನ್ನು ಸಂಗ್ರಹಿಸಿ ಜುಲೈ ೭ ರಂದು ಕೆಳಗಿನ ಕೋರ್ಟಿನಲ್ಲಿ ಆರೋಪ ಪತ್ರಗಳನ್ನು ದಾಖಲು ಮಾಡಿದರು. ಸರಕಾರೀ ವಕೀಲರು ೧೬೦ ಸಾಕ್ಷಿಗಳ ಯಾದಿಯನ್ನು ಕೋರ್ಟಿಗೊಪ್ಪಿಸಿದರು. ಸಾಕ್ಷಿಗಳಲ್ಲಿ ರತ್ನಾ, ಪ್ರಸನ್ನಾ, ಚೆನ್ನ, ಪೋಲೀಸ್ ಅಧಿಕಾರಿಗಳಲ್ಲದೆ ಕೃಷ್ಣನ ಹೆಂಡತಿ ಜಯಾಳ ಹೆಸರೂ ಇತ್ತು. ರಂಗಲಕ್ಷ್ಮಿಯ ಹೆಸರು ಮಾತ್ರ ಇರಲಿಲ್ಲ. ಅವಳ ತಲೆಗೆ ಬಿದ್ದ ಪೆಟ್ಟಿನಿಂದ ಮಿದುಳಿಗೆ ಹೊಡೆತ ಬಿದ್ದುದರಿಂದ ಅವಳು ಸಾಕ್ಷಿ ಹೇಳುವ ಸ್ಥಿತಿಯಲ್ಲಿರಲಿಲ್ಲ. ಮುಖ್ಯ ಸಾಕ್ಷಿದಾರರ ಹೇಳಿಕೆಗಳನ್ನು ಕೇಳಿಕೊಂಡು ಕೋರ್ಟು ಖಟ್ಲೆಯನ್ನು ಸೆಶನ್ಸ್ ಕೋರ್ಟಿಗೆ ಕಳಿಸಿತು.

ಸೆಪ್ಟೆಂಬರ್ ೧೦ ರಂದು ಬೆಂಗಳೂರು ಸೆಶನ್ಸ್ ಕೋರ್ಟಿನಲ್ಲಿ ವಿಚಾರಣೆ ಆರಂಭವಾಯಿತು. ಸುದ್ದಿಗಾರರು ಮತ್ತು ವಕೀಲರಿಗಾಗಿ ವಿಶೇಷ ವ್ಯವಸ್ಥೆ ಮಾಡಿದ್ದರು. ಕೋರ್ಟಿನಲ್ಲಿ ಜನ ಕಿಕ್ಕಿರಿದು ತುಂಬಿದ್ದರು. ಖಟ್ಲೆಯ ತೀರ್ಮಾನ ಏನಾಗುವುದೆಂಬ ಕಲ್ಪನೆ ಇದ್ದರೂ ಜನ ಇಡೀ ಕುಟುಂಬವೊಂದನ್ನು ಅಮಾನುಷ ರೀತಿಯಲ್ಲಿ ಕೊಲೆಗೈದ ರಾಕ್ಷಸರನ್ನು ಪ್ರತ್ಯಕ್ಷ ನೋಡಲು, ಖಟ್ಲೆಯ ವಿವರಗಳನ್ನು ತಿಳಿದುಕೊಳ್ಳಲು ಆತುರರಾಗಿದ್ದರು.

ಆರೋಪಿಗಳ ಪರವಾಗಿ ಮೈಸೂರು ಹೈಕೋರ್ಟಿನ ಶ್ರೀ ಗುರು ಮತ್ತು ಶ್ರೀರಾಮಚಂದ್ರರಾವ್, ಮದ್ರಾಸ್ ಹೈಕೋರ್ಟಿನ ಶ್ರೀಸುಂದರರಾಜನ್ ಮತ್ತು ಶ್ರೀಕೃಷ್ಣಮೂರ್ತಿ ವಕಾಲತ್ತು ವಹಿಸಿದ್ದರು. ಇಂಡಿಯನ್ ಪೀನಲ್ ಕೋಡಿನ ೩೦೨ ಮತ್ತು ೩೮೦ ಹಾಗೂ ಇತರ ಕಲಮುಗಳನ್ವಯ ಆರೋಪ ಹೊರಿಸಲಾಗಿತ್ತು. ಮೂವರೂ ಅಪರಾಧಿಗಳು ಆರೋಪವನ್ನು ಒಪ್ಪಿಕೊಳ್ಳದೆ ಖಟ್ಲೆ ನಡೆಯಲಿ ಎಂದು ಕೋರ್ಟಿಗೆ ವಿನಂತಿ ಮಾಡಿಕೊಂಡರು.

ಈ ಖಟ್ಲೆಯಲ್ಲಿ ಪ್ರತ್ಯಕ್ಷದರ್ಶಿ ಸಾಕ್ಷಿದಾರನೊಬ್ಬನೂ ಇರಲಿಲ್ಲ. ಆರೋಪಿಗಳಲ್ಲಿ ಒಬ್ಬನನ್ನು ಮಾಫಿ ಸಾಕ್ಷಿದಾರನನ್ನಾಗಿ ಮಾಡುವುದಕ್ಕೆ ರೇವಣ್ಣನವರ ವಿರೋಧವಿತ್ತು. ತಾವು ಕಲೆಹಾಕಿದ ಪ್ರಾಸಂಗಿಕ ಪುರಾವೆಗಳು ಆರೋಪವನ್ನು ಸಿದ್ಧ ಮಾಡಲು ಸಾಕು ಎಂದು ಅವರಿಗೆ ನಂಬಿಕೆಯಿತ್ತು. ಆದ್ದರಿಂದ ರತ್ನಾ, ಪ್ರಸನ್ನಾ, ಚೆನ್ನ, ರೇವಣ್ಣ ಮತ್ತು ಕೃಷ್ಣನ ಹೆಂಡತಿ ಜಯಾಳ ಸಾಕ್ಷಿಗಳು ಅತಿ ಮುಖ್ಯವಾಗಿದ್ದವು. ಜಯಾ ಮೊದಲು ಸಾಕ್ಷಿ ಹೇಳಲು ಒಪ್ಪಲಿಲ್ಲ. ಆದರೆ ಪೋಲೀಸ್ ತಪಾಸಣೆಯಲ್ಲಿ ಜಯಾ ಕೃಷ್ಣನ ಹೆಂಡತಿಯಾಗಿರದೆ ಬೇರೊಬ್ಬನ ಹೆಂಡತಿಯೆಂದೂ ಕೃಷ್ಣ ಅವಳನ್ನು ಓಡಿಸಿಕೊಂಡು ಬಲವಂತದಿಂದ ಸಂಸಾರ ನಡೆಸಿದ್ದನೆಂದೂ ಕೃಷ್ಣನಿಂದ ಅವಳಿಗೆ ಮಗು ಹುಟ್ಟಿದ ಬಳಿಕ ಅವಳು ಕೃಷ್ಣನ ಸಂಸಾರದಲ್ಲಿ ಶಾಶ್ವತವಾಗಿರುವಂತಾಯಿತೆಂದೂ ತಿಳಿದುಬಂದಿತ್ತು. ಕೃಷ್ಣನ ಬಂಧನಾನಂತರ ಅವಳಿಗೆ ಯಾವ ಆಶ್ರಯವೂ ಉಳಿದಿರಲಿಲ್ಲ. ಖಟ್ಲೆಯಲ್ಲಿ ಅವಳು ಸಹಕರಿಸಿದರೆ ಅವಳ ಅನ್ನಬಟ್ಟೆಯ ವ್ಯವಸ್ಥೆ ಮಾಡುವ ಆಶ್ವಾಸನ ಸರಕಾರದಿಂದ ದೊರೆತ ಮೇಲೆ ಅವಳು ಸಾಕ್ಷಿ ಹೇಳಲು ಒಪ್ಪಿದಳು.

ಅವಳ ಸಾಕ್ಷಿಗೆ ತುಂಬ ಮಹತ್ವವಿತ್ತು. ಅವಳು ತನ್ನ ಸಾಕ್ಷಿಯಲ್ಲಿ ಹೇಳಿದಳು: "ಮೇ ತಿಂಗಳ ಪ್ರಾರಂಭದಿಂದ ಗೋವಿಂದ ಮತ್ತು ಮುನಿಸ್ವಾಮಿ ಮೇಲಿಂದ ಮೇಲೆ ಕೃಷ್ಣನ ಭೆಟ್ಟಿಗೆ ಬರುತ್ತಿದ್ದರು. ಅವರಲ್ಲಿ ಗುಪ್ತ ಮಾತುಕಥೆಗಳು ನಡೆಯುತ್ತಿದ್ದವು. ಬೇಲೂರರ ಮನೆಯಲ್ಲಿ ಅಪಾರ ಸಂಪತ್ತಿದೆ, ಅದನ್ನು ಹೇಗೆ ಅಪಹರಿಸಬೇಕು ಎಂಬ ಬಗ್ಗೆ ಅವರಲ್ಲಿ ನಡೆದ ಚರ್ಚೆಯನ್ನು ನಾನು ಅನೇಕ ಸಲ ಕೇಳಿದ್ದೇನೆ. ನಾನು ಈ ವಿಚಾರವನ್ನು ವಿರೋಧಿಸಿದೆ. ಆದರೆ ಅವರು ನನಗೆ ಬೆದರಿಕೆ ಹಾಕಿ ನನ್ನ ಬಾಯಿ ಮುಚ್ಚಿಸಿದರು.

"ಮೇ ತಿಂಗಳ ಮೂರನೆಯ ವಾರದಲ್ಲಿ ಚೆನ್ನ ನಮ್ಮ ಮನೆಗೆ ಬಂದಿದ್ದ. ಒಂದು ರಾತ್ರಿ ಕೃಷ್ಣ, ಮುನಿಸ್ವಾಮಿ ಮತ್ತು ಚೆನ್ನ ಬೇಲೂರರ ಮನೆಗೆ ದರೋಡೆ ಹಾಕಲು ಹೋಗಿದ್ದರು. ಆದರೆ ಮಧ್ಯರಾತ್ರಿಯ ಸುಮಾರಿಗೆ ಕೃಷ್ಣನೊಬ್ಬನೇ ಮನೆಗೆ ತಿರುಗಿ ಬಂದ. ಮರುದಿನ ನಸುಕಿನಲ್ಲಿ ಮನೆಗೆ ಬಂದ ಗೋವಿಂದನಿಗೆ, ಬೇಲೂರರ ನಾಯಿ ಬೊಗಳ ತೊಡಗಿದ್ದರಿಂದ ಹಾಗೆಯೆ ತಿರುಗಿ ಬರಬೇಕಾಯಿತೆಂದು ಕೃಷ್ಣ ತಿಳಿಸಿದ. ಮತ್ತೆ ಅವರ ಮಂತ್ರಾಲೋಚನೆ ಶುರುವಾಯಿತು ಜೂನ್, [illegible] ರಂದು ರಾತ್ರಿ ಅವರ ಓಡಾಟ, ಅವಸರ ಬಹಳವಾಗಿತ್ತು. ಅಂದು ಮುಂಜಾನೆಯಿಂದಲೂ ಕೃಷ್ಣ ಮುನಿಸ್ವಾಮಿಯನ್ನು ಕರೆದುಕೊಂಡು ಮೋಟರ್ ಸೈಕಲಿನ ಮೇಲೆ ತಿರುಗಾಡಿದ. ಅಂದವರು ತುಂಬ ಖರೀದಿ ಮಾಡಿದರು. ಸಂಜೆ ಆರರ ಸುಮಾರಿಗೆ ಕೃಷ್ಣ ಪೂಜೆಗೆ ಕುಳಿತು ಒಂದು ತಾಸಿನ ವರೆಗೆ ಪೂಜೆಯಲ್ಲಿ ಮಗ್ನನಾಗಿದ್ದ. ಪೂಜೆ ಮುಗಿಸಿದವನೇ ಆತ ಮೋಟರ್ ಸೈಕಲನ್ನೇರಿ ಹೊರಟು ಹೋದ.

"ಮಧ್ಯರಾತ್ರಿಯಾದರೂ ಆತ ತಿರುಗಿ ಮನೆಗೆ ಬರಲಿಲ್ಲ. ನಸುಕಿನಲ್ಲಿ ಬಾಗಿಲು ಬಡಿದ

ಸಪ್ಪಳವಾಗಲು ನಾನು ಎದ್ದು ಬಾಗಿಲು ತೆರೆದೆ. ಕೃಷ್ಣ ಮತ್ತು ಮುನಿಸ್ವಾಮಿ ಒಳಗೆ ಬಂದರು. ಅವರ ಬಟ್ಟೆಯ ಮೇಲೆ ರಕ್ತದ ಕಲೆಗಳಿದ್ದವು. ಇಬ್ಬರ ಕೈಲೂ ಒಂದೊಂದು ಗಂಟಿತ್ತು. ಕೃಷ್ಣ ಗಂಟು ಬಿಚ್ಚಿ ದಾಗಿನೆಗಳ ರಾಶಿಯನ್ನು ಹೊರ ತೆಗೆದ. ಕಿಸೆಯಿಂದ ನೋಟುಗಳ ಕಟ್ಟುಗಳನ್ನೂ ಹೊರಗೆ ತೆಗೆದ. ಎರಡು ಟ್ರಂಕುಗಳಲ್ಲಿ ಅವನ್ನು ತುಂಬಿದ.

"ಇಬ್ಬರೂ ಆ ಮೇಲೆ ಬಟ್ಟೆ ಬದಲಾಯಿಸಿದರು. ಒಂದಿಷ್ಟು ನೋಟು ಮತ್ತು ದಾಗಿನೆಗಳನ್ನು ತೆಗೆದುಕೊಂಡು ಮುನಿಸ್ವಾಮಿ ಹೊರಟು ಹೋದ. ರಂಗವಿಲಾಸದ ಮೇಲೆ ದರೋಡೆಯಾದ ಸುದ್ದಿ ಮರುದಿನ ಮನೆಮನೆಗೂ ಹಬ್ಬಿತ್ತು. ಅಂದು ಗೋವಿಂದ ನಮ್ಮ ಮನೆಗೆ ಬರಲಿಲ್ಲ ಮೂರನೆಯ ದಿನ ಮುಂಜಾನೆ ಬಂದು ಕೃಷ್ಣನನ್ನು ಭೆಟ್ಟಿಯಾದ. ಕೃಷ್ಣ ಟ್ರಂಕು ತೆರದು ಎಲ್ಲವನ್ನೂ ತೋರಿಸಿದ. ಮುಂದೆ ಒಂದೆರಡು ದಿನಗಳಲ್ಲಿಯೇ ಪೋಲೀಸರು ನಮ್ಮ ಮನೆಯ ಮೇಲೆ ದಾಳಿ ಮಾಡಿ ಕೃಷ್ಣನನ್ನು ಬಂಧಿಸಿದರು. ದಾಗಿನೆಗಳು ಮತ್ತು ಹಣವನ್ನು ಜಪ್ತಿ ಮಾಡಿದರು."

ಚೆನ್ನ ಹೇಳಿದ: "ಏನೋ ಮಹತ್ವದ ಕೆಲಸವಿದೆಯೆಂದು ಗೋವಿಂದ ಮತ್ತು ಕೃಷ್ಣನನ್ನು ಬೆಂಗಳೂರಿಗೆ ಕರೆಸಿಕೊಂಡರು. ಬೇಲೂರರ ಮನೆಯಲ್ಲಿ ಸಾವಿರಾರು ರೂಪಾಯಿಗಳ ಆಭರಣಗಳಿವೆಯೆಂದು ಅವರು ನನಗೆ ಹೇಳಿದರು. ಆ ಮನೆಗೆ ದರೋಡೆ ಹಾಕಲು ಒಂದು ದಿನ ನಿಶ್ಚಯಿಸಲಾಯಿತು. ಅಂದು ಗೋವಿಂದ ನಮ್ಮ ಜೊತೆ ಬರುವವನಾಗಿರಲಿಲ್ಲ. ರಾತ್ರಿ ೧೨ ಹೊಡೆದು ಹೋದ ಮೇಲೆ ಎಲ್ಲ ಸಿದ್ಧತೆಯೊಂದಿಗೆ ನಾನು, ಮುನಿಸ್ವಾಮಿ ಮತ್ತು ಕೃಷ್ಣ ರಂಗವಿಲಾಸಕ್ಕೆ ಹೊರಟೆವು. ಮುನಿಸ್ವಾಮಿ ಗೇಟಿನ ಬಾಗಿಲು ತೆರೆದ ಮೇಲೆ ನಾವು ಒಳ ಹೊಕ್ಕೆವು. ಅಲ್ಲಿ ನಾಯಿಯಿದ್ದೀತೆಂಬ ಕಲ್ಪನೆ ನಮಗಿರಲಿಲ್ಲ. ಗೇಟು ತೆರೆದು ಮುಚ್ಚಿದ ಸಪ್ಪಳ ಕೇಳಿ ಅದು ಬೊಗಳ ಹತ್ತಿತು. ನಾವು ಗಿಡಗಳ ಗುಂಪಿನಲ್ಲಿ ಅಡಗಿ ಕುಳಿತೆವು. ಅಷ್ಟರಲ್ಲಿ ಬಂಗಲೆಯಲ್ಲಿ ದೀಪ ಹತ್ತಿತು. "ಯಾರವರ?" ಎಂದು ಯಾರೊ ಕೂಗಿದರು. ಇನ್ನು ಅಲ್ಲಿರುವುದು ಕ್ಷೇಮವಲ್ಲೆಂದು ನಾವು ಓಡಿದೆವು ಆ ನಂತರ ನಾನು ರಂಗವಿಲಾಸಕ್ಕೆ ಹೋಗಲಿಲ್ಲ."

ಇದೇ ಘಟನೆಯ ವಿಚಾರದಲ್ಲಿ ರತ್ನ ಹೇಳಿದ್ದೇನೆಂದರೆ "ಅಂದು ರಾತ್ರಿ ಟೈಗರ್ ಬೊಗಳಿದ್ದು ಕೇಳಿ ನಮ್ಮ ಅಜ್ಜಿ ಸಿಂಗಮ್ಮ ಎಚ್ಚರಾದಳು. ತೋಟದಲ್ಲಿದ್ದ ತೆಂಗಿನ ಕಾಯಿ ಮತ್ತು ಹಣ್ಣುಗಳ ಕಳವು ಮೇಲಿಂದ ಮೇಲೆ ನಡೆಯುತ್ತಿತ್ತು. ಯಾರೊ ಕಾಯಿ ಕಳ್ಳರು ಬಂದಿರಬೇಕೆಂದು ಅಜ್ಜಿ ದೀಪ ಹಚ್ಚಿ ಕೂಗಿದ್ದಳು. ಟೈಗರ್ ಬೊಗಳುವುದು ನಿಲ್ಲಿಸಿದ ನಂತರ ಅವಳು ಮಲಗಿಕೊಂಡಳು. ಮರುದಿನ ಮುಂಜಾನೆ ಅವಳು ಈ ಸಂಗತಿಯನ್ನು ನಮಗೆಲ್ಲ ಹೇಳಿದ್ದಳು."

ಡಿ. ಎಸ್. ಪಿ. ರೇವಣ್ಣರು ಹತ್ಯಾಕಾಂಡ ನಡೆಯುವ ಮೊದಲು ಹಾಗೂ ನಂತರದಲ್ಲಿ ಆರೋಪಿಗಳ ಚಲನವಲನವನ್ನು ಕುರಿತು ತುಂಬ ಮಾಹಿತಿಯನ್ನು ಕೋರ್ಟಿಗೆ ನಿವೇದಿಸಿದರು.

ಜೂನ್ [illegible] ರಂದು ಮುಂಜಾನೆ ೧೧ ರ ಸುಮಾರಿಗೆ ಗೋವಿಂದ ಗಾಂಧೀನಗರದಲ್ಲಿ ರಾಮನಾಥ ಹೋಟೆಲ್ಲಿನ ಬಳಿ ನಿಂತು ಯಾರದೋ ಹಾದಿ ಕಾಯುತ್ತಲಿದ್ದ ರಾಮನಾಥ ಹೋಟೆಲ್ಲಿನ ರಿಪೇರಿ ಕೆಲಸ ನಡೆದಿತ್ತು. ಗೋವಿಂದನ ಗುರುತಿದ್ದ ಹೋಟೆಲ್ಲಿನ ಮಾಲಕ ವೆಂಕಟರಾಮನು ಗೋವಿಂದನನ್ನು ಒಳಗೆ ಕರೆದು ಕುಶಲಪ್ರಶ್ನೆಗಳನ್ನು ಮಾಡಿದ. ಹೋಟೆಲ್ಲಿಗೆ ನೀರಿನ ನಳಗಳನ್ನು ಜೋಡಿಸಬೇಕಾಗಿತ್ತು. ಗೋವಿಂದನ ಸಹಾಯ

ದಿಂದ ಅದು ಸುಲಭವಾಗಿ ಆಗುವಂತಿತ್ತು. ನೀರಿನ ಖಾತೆಯವರಿಗೆ ಹೇಳಿ ಕೆಲಸ ಮಾಡಿಕೊಡಲು ವೆಂಕಟರಾಮು ಗೋವಿಂದನಿಗೆ ಬಿನ್ನವಿಸಿಕೊಂಡ. ಗೋವಿಂದ ಒಪ್ಪಿದ.

ಆದರೆ ಅಲ್ಲಿಗೆ ಕೃಷ್ಣ ಬರತಕ್ಕವನಿದ್ದುದರಿಂದ ಅವನು ಬಂದರೆ ತನಗಾಗಿ ಕಾಯಲು ಹೇಳಿ, ಎಂದು ವೆಂಕಟರಾಮುನಿಗೆ ತಿಳಿಸಿ, ಗೋವಿಂದ ನೀರಿನ ಖಾತೆಯ ಅಧಿಕಾರಿಗಳನ್ನು ಕಾಣಲು ಹೋದ ೧೨ ರ ಸುಮಾರಿಗೆ ಕೃಷ್ಣ ಹೋಟೆಲ್ಲಿನ ಬಳಿ ಬಂದ ವೆಂಕಟರಾಮು ಗೋವಿಂದನ ಸಂದೇಶವನ್ನು ಅವನಿಗೆ ತಿಳಿಸಿದ. ಆದರೆ ಗಡಿಬಿಡಿಯಲ್ಲಿದ್ದ ಕೃಷ್ಣ "ಗೋವಿಂದನಿಗೆ ಮನೆಗೆ ಬರಲು ಹೇಳಿ" ಎಂದು ಹೋಗಿಬಿಟ್ಟ,

ಮಧ್ಯಾಹ್ನ ೨ ರ ಸುಮಾರಿಗೆ ಕೃಷ್ಣ ಮತ್ತು ಮುನಿಸ್ವಾಮಿ ಮೋಟರ್ ಸೈಕಲ್ಲಿನ ಮೇಲೆ ಸಿವಿಲ್ ಸ್ಟೇಶನ್ನಿನ ಬಳಿ ಬಂದರು. ಅಲ್ಲಿ ಹಳೆ ಸಾಮಾನುಗಳ ವ್ಯಾಪಾರ ನಡೆದಿತ್ತು. ಅಲ್ಲಿ ಧನಲಕ್ಷ್ಮಿ ಅಂಗಡಿಯಲ್ಲಿ ಕೃಷ್ಣ ಒಂದು ಕಬ್ಬಿಣದ ಹಾರೆಯನ್ನೂ ಇಬ್ರಾಹಿಮನ ಅಂಗಡಿಯಲ್ಲಿ ಇನ್ನೊಂದು ಹಾರೆಯನ್ನೂ ಕೊಂಡ.

ರಾತ್ರಿ ೮ ಗಂಟೆಗೆ ಕೃಷ್ಣ ಮತ್ತು ಗೋವಿಂದ ಮೋಟರ್ ಸೈಕಲ್ಲಿನ ಮೇಲೆ ಸುಭೇದಾರ ಛತ್ರ ರಸ್ತೆಯಲ್ಲಿರುವ ವಸಂತರಾಜನ ಪೆಟ್ರೊಲ್ ಅಂಗಡಿಗೆ ಬಂದರು. ಅವರಿಗೆ ಆತನ ಪರಿಚಯ ಚೆನ್ನಾಗಿತ್ತು. "ನಾವು ಸಿನೇಮಾಕ್ಕೆ ಹೋಗುತ್ತೇವೆ. ಆಟ ಮುಗಿದ ಮೇಲೆ ಬಂದು ಸೈಕಲ್ ಒಯ್ಯುತ್ತೇವೆ" ಎಂದು ಅವರು ಸೈಕಲನ್ನು ಅಲ್ಲಿಟ್ಟು ಹೋದರು. ಆದರೆ ರಾತ್ರಿ ಒಂದು ಒಂದೂವರೆ ಗಂಟೆಯಾದರೂ ಕೃಷ್ಣ ಬಾರದಿರಲು ವಸಂತರಾಜ ಅಂಗಡಿ ಮುಚ್ಚಿ ಮಲಗಿಕೊಂಡ. ನಸುಕಿನ ೪-೫ ಸುಮಾರಿಗೆ ಕೃಷ್ಣ ಬಂದು ಆತನನ್ನೆಬ್ಬಿಸಿ ತನ್ನ ಮೋಟರ್ ಸೈಕಲ್ಲನ್ನು ತೆಗೆದುಕೊಂಡುಹೋದ.

೬ ನೆಯ ತಾರೀಖಿನ ದಿನ ಮುಂಜಾನೆ ಕೃಷ್ಣ ಅಕಸ್ಮಾತ್ತಾಗಿ ಶ್ರೀಮಂತನಾಗಿಬಿಟ್ಟಿದ್ದ. ರಂಗವಿಲಾಸದಿಂದ ಅಪಹರಿಸಿ ತಂದ ಸಂಪತ್ತನ್ನು ಹೇಗೆ ಹಂಚಬೇಕು, ಹೇಗೆ ಖರ್ಚುಮಾಡಬೇಕು ಎಂಬ ವಿಚಾರದಲ್ಲಿ ಮಗ್ನನಾಗಿದ್ದ. ಆದರೆ ಅಂದು ರಂಗವಿಲಾಸದ ನೆರೆಹೊರೆಯಲ್ಲಿ ನಡೆದ ಕೋಲಾಹಲದಿಂದ ಆತ ತುಸು ವಿವಂಚನೆಗೊಳಗಾಗಿದ್ದ. ಮದ್ರಾಸಿನಿಂದ ಬಂದಿದ್ದ ನಾಯಿಗಳು ಆರೋಪಿಗಳನ್ನು ಹುಡುಕಹತ್ತಿರುವ ಸುದ್ದಿ ಕೇಳಿದಾಗಲಂತೂ ಆತ ಗಾಬರಿಯಾಗಿದ್ದ. ಯುವರಾಜ ಮತ್ತು ಚೀಫ್ ತನ್ನ ಮುಂದೆ ಎಷ್ಟೊತ್ತಿಗೆ ಬಂದು ನಿಂತಾವು ಎಂಬ ನಿಯಮವಿರಲಿಲ್ಲವಾದ್ದರಿಂದ ಆತ ಮಧ್ಯಾಹ್ನ ಕಳೆಯುವ ವರೆಗೂ ಮನೆಯ ಹೊರಗೇ ಅಡ್ಡಾಡುತ್ತಿದ್ದ. ಮುನಿಸ್ವಾಮಿ ಮತ್ತು ಗೋವಿಂದರಿಗೂ ಆತ ಸರಿಯಾದ ಸೂಚನೆಗಳನ್ನಿತ್ತಿದ್ದ. ಯುವರಾಜ ಮತ್ತು ಚೀಫ್ ಅಯಶಸ್ವಿಯಾದ ಸುದ್ದಿ ಸಂಜೆ ತಿಳಿದಾಗ ಆತ ಗೆದ್ದೆ ಎಂದು ಸಮಾಧಾನದ ಉಸಿರುಬಿಟ್ಟ.

ಅಂದು ಸಂಜೆ ಆತ ಭರ್ಜರಿ ಬಟ್ಟೆ ತೊಟ್ಟು ಚಿಕ್ಕಪೇಟೆಯಲ್ಲಿ ನಿರ್ಭಯನಾಗಿ ಅಡ್ಡಾಡುತ್ತಿದ್ದ. ಆರು ಕೊಲೆಗಳನ್ನು ದಕ್ಕಿಸಿಕೊಂಡ ಹೆಮ್ಮೆ ಅವನಲ್ಲಿ ತುಳುಕುತ್ತಿತ್ತು. ಕಿಸೆಯಲ್ಲಿ ಹೊಸ, ಮಡಿಕೆ ಬೀಳದ ನೋಟುಗಳು ತುಂಬಿದ್ದವು. ಆತ ಒಂದು ಉಲನ್ ಸೂಟ್, ಕನ್ನಡಿಯ ಕಪಾಟ್ಟು ಪಲ್ಲಂಗ ಮತ್ತು ಇನ್ನೂ ಅನೇಕ ಚಿಕ್ಕಪುಟ್ಟ ವಸ್ತುಗಳನ್ನು ಕೊಂಡು ರಾತ್ರಿ ಮನೆಗೆ ಹೋದ.

ಏಳನೆಯ ತಾರೀಖಿನ ದಿನದ ಆರೋಪಿಗಳ ಚಲನವಲನದ ಬಗ್ಗೆ ಪೋಲೀಸರಿಗೆ ಹೆಚ್ಚಿನ ಮಾಹಿತಿಯೇನೂ ದೊರೆತಿರಲಿಲ್ಲ. ಅಂದು ತನ್ನ ಮನೆಗೆ ಬಂದ ಗೋವಿಂದನಿಗೆ ಕೃಷ್ಣ ಅಪಹರಿಸಿ ತಂದಿದ್ದ ವಸ್ತುಗಳನ್ನೆಲ್ಲ ತೋರಿಸಿದ್ದ. ರಂಗವಿಲಾಸದ ಗದ್ದಲ ಶಾಂತವಾಗುವವರೆಗೂ ಹಂಚಿಕೊಳ್ಳುವುದು ಬೇಡ ಎಂದು ಅವರು ನಿರ್ಧರಿಸಿದರು. ಕೆಲವು ದಾಗಿನೆ ಮತ್ತು ಒಂದಿಷ್ಟು ಹಣ

ಇಸಿದುಕೊಂಡು ಗೋವಿಂದ ಹೊರಟುಹೋದ.

ಜೂನ್ ೮ ರಂದು ಬಾಪೂರಾವ್ ಎಂಬವರ ಅಂಗಡಿಯಲ್ಲಿ ಕೃಷ್ಣ ಮೂರು ಚಿನ್ನದ ಸರಗಳನ್ನು ಕರಗಿಸಿಕೊಂಡು ಅಂದೇ ಪಾಂಡುರಂಗ ಎಂಬವನಿಗೆ ಆ ಚಿನ್ನವನ್ನು ೧೧೪ ರೂಪಾಯಿಗಳಿಗೆ ಮಾರಿದ. ಅದನ್ನು ಪಾಂಡುರಂಗ ಮುನಿರತ್ನಂ ಎಂಬಾತನ ಅಂಗಡಿಗೆ ಮಾರಿದ. ತಪಾಸಣೆಯ ಕಾಲದಲ್ಲಿ ಪೋಲೀಸರು ಮುನಿರತ್ನಂ ಅಂಗಡಿಯಿಂದ ಆ ಚಿನ್ನ ಜಪ್ತಿ ಮಾಡಿದರು.

ಫಿರ್ಯಾದಿ ಪಕ್ಷ ೧೬೦ ಸಾಕ್ಷಿದಾರರ ಯಾದಿಯನ್ನು ಕೊಟ್ಟಿದ್ದರೂ ೧೧೬ ಜನರ ಸಾಕ್ಷಿಗಳಾದ ಕೂಡಲೆ ತನ್ನ ಹೇಳಿಕೆ ಮುಗಿಯಿತು ಎಂದು ಸಾರಿತು. ಆ ಮೇಲೆ ಆರೋಪಿಗಳ ಸಾಕ್ಷಿದಾರರ ಯಾದಿ ಒಪ್ಪಿಸಲ್ಪಟ್ಟಿತು. ಅದರಲ್ಲಿ ಮುಖ್ಯಮಂತ್ರಿ ಹನುಮಂತಯ್ಯ, ಗೃಹಮಂತ್ರಿ ಸಿದ್ದವೀರಪ್ಪ, ಆಯ್. ಜಿ. ಪಿ., ಡೆಪ್ಯುಟಿ ಡಿ ಎಸ್. ಪಿ., "ತಾಯಿನಾಡು", "ಜನವಾಣಿ", "ಡೆಕ್ಕನ್ ಹೆರಾಲ್ಡ್" ಮತ್ತು "ಹಿಂದು" ಮುಂತಾದ ಪತ್ರಿಕೆಗಳ ಪ್ರತಿನಿಧಿಗಳ ಹೆಸರು ಮುಖ್ಯವಾಗಿತ್ತು. ಇವರೆಲ್ಲ ಜೂನ್ ೬ ರಂದು ರಂಗವಿಲಾಸಕ್ಕೆ ಭೆಟ್ಟಿಯಿತ್ತು ಅಲ್ಲಿಯ ದೃಶ್ಯವನ್ನು ಪ್ರತ್ಯಕ್ಷ ಕಂಡವರಾದ್ದರಿಂದ ಇವರ ಸಾಕ್ಷಿ ತಮಗೆ ಅಗತ್ಯವಾಗಿದೆ ಎಂದು ಆರೋಪಿಗಳ ಹೇಳಿಕೆಯಿತ್ತು. ಆದರೆ ಈ ಸಾಕ್ಷಿಗಳು ಅನವಶ್ಯಕ, ಇವರ ಸಾಕ್ಷಿ ಹೇಳಿಸುವ ಮೂಲಕ ಕೋರ್ಟಿನ ಕೆಲಸಕ್ಕೆ ವಿಲಂಬವುಂಟುಮಾಡುವುದೇ ಆರೋಪಿಗಳ ಉದ್ದೇಶವಿದೆ ಎಂದು ನಿರ್ಣಯವಿತ್ತು ನ್ಯಾಯಮೂರ್ತಿಗಳು ಆ ಸಾಕ್ಷಿಗಳನ್ನು ಕರೆಸಲು ನಿರಾಕರಿಸಿದರು.

ನವೆಂಬರ್ ೭ ರಂದು ತೀರ್ಪು ಹೇಳಲಾಯಿತು. ರಂಗವಿಲಾಸದಲ್ಲಿ ಜರುಗಿದ ಆರೂ ಕೊಲೆಗಳಿಗಾಗಿ ಮೂರೂ ಆರೋಪಿಗಳನ್ನು ದೋಷಿಗಳೆಂದು ನಿರ್ಣಯಿಸಿ ಪಿನಲ್‌ಕೋಡ್ ೩೦೨ ನೇ ಕಲಮಿನನ್ವಯ ಅವರಿಗೆ ಫಾಶಿ ಶಿಕ್ಷೆ ವಿಧಿಸಲ್ಪಟ್ಟಿತು. ಇತರ ಕಲಮುಗಳನ್ವಯ ಅವರಿಗೆ ಬೇರೆ ಬೇರೆ ಅವಧಿಯ ಶಿಕ್ಷೆಯಾಯಿತು.

ಫಾಶಿ ಶಿಕ್ಷೆಯನ್ನು ಖಾಯಂ ಮಾಡಲು ೧೯೫೭, ಸೆಪ್ಟೆಂಬರ್ ತಿಂಗಳಲ್ಲಿ ಮೈಸೂರು ಹೈಕೋರ್ಟಿನಲ್ಲಿ ಕೆಲಸ ನಡೆಯಿತು. ಆರೋಪಿಗಳ ಅಪೀಲಿನ ಅರ್ಜಿಯ ವಿಚಾರಣೆಯೂ ಅದೇ ಕಾಲದಲ್ಲಿ ನಡೆಯಿತು. ನ್ಯಾಯಮೂರ್ತಿ ಹೊಂಬೇಗೌಡ ಮತ್ತು ಮಳೀಮಠರು ಪುರಾವೆಗಳನ್ನೆಲ್ಲ ಪರಿಶೀಲಿಸಿ ಅಪೀಲಿನ ಅರ್ಜಿಯನ್ನು ತಳ್ಳಿಹಾಕಿ ಫಾಶಿ ಶಿಕ್ಷೆಯನ್ನು ಖಾಯಂ ಮಾಡಿದರು.

ಆರೋಪಿಗಳು ಸುಪ್ರೀಂ ಕೋರ್ಟಿನಲ್ಲಿ ಅಪೀಲು ದಾಖಲು ಮಾಡಿದರು. ತಮ್ಮ ವಿರುದ್ಧ ಇರುವ ಪುರಾವೆಗಳು ಅತ್ಯಂತ ಬಲವಾಗಿರುವುದನ್ನು ಅರಿತಿದ್ದ ಆರೋಪಿಗಳು ಈಗ ಫಾಶಿ ಶಿಕ್ಷೆಯನ್ನು ರದ್ದುಮಾಡಿಸಿಕೊಂಡರೆ ಸಾಕು ಎನ್ನುವಂತಾಗಿದ್ದರು. ೧೯೫೮, ಅಗಸ್ಟ ೧೯ ರಂದು ಸುಪ್ರೀಂ ಕೋರ್ಟಿನಲ್ಲಿ ವಿಚಾರಣೆ ನಡೆದು ಅಪೀಲು ತಿರಸ್ಕೃತವಾಯಿತು. ಫಾಶಿ ಶಿಕ್ಷೆ ಖಾಯಂ ಆಯಿತು.

ಕೊನೆಯ ಪ್ರಯತ್ನವೆಂದು ಆರೋಪಿಗಳು ರಾಷ್ಟ್ರಪತಿಗಳಿಗೆ ಅರ್ಜಿ ಸಲ್ಲಿಸಿ ಫಾಶಿ ಶಿಕ್ಷೆ ರದ್ದು ಮಾಡಬೇಕೆಂದು ವಿನಂತಿ ಮಾಡಿಕೊಂಡರು. ಈ ಅರ್ಜಿ ಕೂಡ ತಿರಸ್ಕೃತವಾಯಿತು.

೧೯೫೮, ಡಿಸೆಂಬರ್ ೧೮ ರಂದು ಕೃಷ್ಣ, ಮುನಿಸ್ವಾಮಿ ಮತ್ತು ಗೋವಿಂದರನ್ನು ಗಲ್ಲಿಗೇರಿಸತಕ್ಕದ್ದು ಎಂದು ನಿರ್ಧರಿಸಲ್ಪಟ್ಟಿತು.

ಈ ಎರಡು ವರ್ಷಗಳಲ್ಲಿ ರಂಗವಿಲಾಸಕ್ಕೆ

ಪ್ರೇತಕಳೆ ಬಂದಿತ್ತು. ರತ್ನಾ, ಪ್ರಸನ್ನಾ ಮತ್ತು ರಂಗಲಕ್ಷ್ಮಿ ತಮ್ಮ ಸಂಬಂಧಿಕರೊಡನೆ ವಾಸಿಸುತ್ತಿದ್ದರು. ರಂಗವಿಲಾಸ ನಿರ್ಜನವಾಗಿ ಅದರ ತೋಟ ಒಣಗಿ ಹೋಗಿತ್ತು. ರಾತ್ರಿ ಹೊತ್ತಿನಲ್ಲಿ ಅದರ ಬಳಿ ಅಡ್ಡಾಡಲು ಯಾರಿಗೂ ಧೈರ್ಯವಾಗುತ್ತಿರಲಿಲ್ಲ. ರಂಗವಿಲಾಸದಲ್ಲಿ ರಾತ್ರಿಹೊತ್ತು ದೀಪಗಳು ಉರಿಯುತ್ತವೆ. ಬೇರೆ ಬೇರೆ ಧ್ವನಿಗಳು ಹೊರಡುತ್ತವೆ. ನಾಯಿ ಬೊಗಳುತ್ತದೆ ಎಂಬಿತ್ಯಾದಿ ನಾನಾ ಸುದ್ದಿಗಳು ಬೆಂಗಳೂರಿನಲ್ಲಿ ಹರಡಿದ್ದವು. ಇನ್ನೂ ಕೆಲ ಸಮಯ ಗತಿಸಿದ್ದರೆ ಅದು ದೆವ್ವದ ಮನೆಯೆಂದೇ ಆಗಿ ಬಿಡುತ್ತಿತ್ತೇನೊ. ಅಷ್ಟರಲ್ಲಿ ಓರ್ವ ಉಡುಪಿ ಹೋಟೆಲ್ ಮಾಲಿಕರು ಅದನ್ನು ಕೊಂಡು ರಿಪೇರಿ ಮಾಡಿಸಿ ಬಣ್ಣ ಬಳೆಸಿ "ಕ್ಲೆರಿಡಾಯಿಜ್ ರೆಸ್ಟಾರೆಂಟ್" ಎಂಬ ಹೆಸರಿನಲ್ಲಿ ಅಲ್ಲಿ ಹೋಟೆಲ್ ಆರಂಭಿಸಿದರು. ಜನ ಬರ ಹೋಗಲು ಆರಂಭವಾಗಿ ರಂಗವಿಲಾಸಕ್ಕೆ ಧರ್ಮಶಾಲೆಯ ಸ್ವರೂಪ ಬಂತು.

ಡಿಸೆಂಬರ್ ೧೯ ರಂದು ಬೆಂಗಳೂರಿನ ಪತ್ರಿಕೆಗಳಲ್ಲಿ ಈ ಮುಂದಿನ ಸುದ್ದಿ ಪ್ರಕಟವಾಯಿತು. ೧೭ ರಂದು ಸಂಜೆ ಕೃಷ್ಣ ಮತ್ತು ಮುನಿಸ್ವಾಮಿಯವರು ತಮ್ಮ ತಾಯಿಯ ಕೊನೆಯ ಭೆಟ್ಟಿ ತೆಗೆದುಕೊಂಡರು. ಈ ದೃಶ್ಯ ಕರುಣಾಜನಕವಾಗಿತ್ತು. ಅವಳ ಕಣ್ಣಿನಲ್ಲಿ ನೀರು ಹರಿಯುತ್ತಿತ್ತು. ಅವಳ ಪಾದದ ಮೇಲೆ ಮಸ್ತಕವಿಟ್ಟು ಇಬ್ಬರೂ ಅವಳಿಗೆ ನಮಸ್ಕರಿಸಿ ಅವಳ ಕೈಯ ಕಾಫಿ ಕುಡಿಯಬೇಕೆಂದರು. ಅವರ ಇಚ್ಛೆ ಪೂರೈಸಲ್ಪಟ್ಟಿತು. ಫಾಶಿಗೇರಿಸುವ ಮೊದಲು ಅವರ ಹೇಳಿಕೆಗಳನ್ನು ಬರೆದುಕೊಳ್ಳಲಾಯಿತು. ಅದರಲ್ಲಿ ಅವರು ತಮ್ಮ ಆಸ್ತಿಯ ಹಂಚುವಿಕೆಯ ವಿಚಾರವಾಗಿ ಹೇಳಿದ್ದರು.

ಜೇಲಿನಲ್ಲಿ ಆರೋಪಿಗಳ ನಡತೆ ಚೆನ್ನಾಗಿತ್ತು. ಜೇಲಿಗೆ ಬಂದಾಗ ಅಶಿಕ್ಷಿತನಾಗಿದ್ದ ಮುನಿಸ್ವಾಮಿ ಈ ಎರಡು ವರ್ಷಗಳಲ್ಲಿ ಓದು ಬರೆಯಲು ಕಲಿತಿದ್ದ. ರಾಷ್ಟ್ರಪತಿಗಳಿಗೆ ಸಲ್ಲಿಸಿದ್ದ ಅರ್ಜಿಯನ್ನು ಸ್ವತಃ ಓದಿ ಆತ ಅದರ ಮೇಲೆ ಇಂಗ್ಲೀಷಿನಲ್ಲಿ ಸಹಿ ಮಾಡಿದ್ದ. ಕೃಷ್ಣ ಸುಶಿಕ್ಷಿತನಾಗಿದ್ದ. ಜೇಲುವಾಸದ ಸಮಯದಲ್ಲಿ ಆತ ಒಂದು ಸಣ್ಣ ಕಥೆಯನ್ನೂ "ಸಬ್ ಇನ್‌ಸ್ಪೆಕ್ಟರ್" ಎಂಬ ಆತ್ಮಕಥನ ಕಾದಂಬರಿಯನ್ನೂ ಬರೆದ. ಈ ಚಿಕ್ಕಕಥೆ ಜೇಲ್ ಬುಲೆಟಿನ್‌ನಲ್ಲಿ ಪ್ರಕಟವಾಗಲಿದೆ. ಕಾದಂಬರಿಯನ್ನು ಪ್ರಸಿದ್ಧಿಸಿ ಬಂದ ಹಣವನ್ನು ತಾಯಿಗೆ ಕೊಡಬೇಕು ಎಂದು ಕೃಷ್ಣ ಹೇಳಿದ್ದ.

ಬೇಲೂರು ಖೂನಿ ಖಟ್ಲೆಯಲ್ಲಿ ಫಿರ್ಯಾದಿ ಸಾಕ್ಷಿದಾರನಾದ ಚೆನ್ನನಿಗೆ ಸರಕಾರವು ಒಂದು ಸಾವಿರ ರೂಪಾಯಿ ಮತ್ತು ಕೆಲವು ಎಕರೆ ಜಮೀನನ್ನು ಇನಾಮವಾಗಿ ಕೊಡಲಿದೆ ಎಂದೂ ಅಂದು ಒಂದು ಸುದ್ದಿ ಪ್ರಕಟವಾಗಿತ್ತು.

ಅಂದೇ "ರಂಗವಿಲಾಸ" ದಲ್ಲಿ ಜರುಗಿದ ದುರಂತ ನಾಟಕದ ಕೊನೆಯ ಪರದೆ ಬಿತ್ತು. *



## ಪುಕ್ಕಟೆ ಸಲಹೆ

ಎಣ್ಣೆ ಹತ್ತಿರುವ ಸೀಸೆಗಳನ್ನು ತೊಳೆಯಬೇಕಾದರೆ ಮೊಟ್ಟಮೊದಲು ಅವುಗಳ ತುಂಬ ಸಣ್ಣ ಬೂದಿಯನ್ನು ತುಂಬಿ ದೊಡ್ಡ ನೀರಿನ ಪಾತ್ರೆಯಲ್ಲಿಟ್ಟು ಆ ನೀರನ್ನು ಕ್ರಮೇಣ ಒಂದು ತಾಸಿನ ವರೆಗೆ ಕುದಿಸುತ್ತಿದ್ದು ಅನಂತರ ತಣ್ಣಗಾಗಲಿಕ್ಕೆ ಬಿಟ್ಟು, ಬೂದಿಯನ್ನು ಹೊರಗೆ ಚೆಲ್ಲಿ ಬಿಸಿಯಾದ ನೀರನ್ನು ಉಪಯೋಗಿಸಿ ಸಾಬೂನಿನಿಂದ ( Soap ) ತೊಳೆದಲ್ಲಿ ಸ್ವಚ್ಛವಾಗುತ್ತವೆ.

— ಎಸ್. ಎನ್. ಅಶೋಕ್ ಕುಮಾರ್, ಶ್ರವಣಬೆಳಗೊಳ.

This Magazine owned by The Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.

ಶ್ರೀ ದಿವಾಕರ ರಂಗರಾಯರ **ಕರ್ಮಯೋಗ** ೩ ನೇ ಆವೃತ್ತಿ

ಪುಟ: ೧೨೦ ಬೆಲೆ: ರೂ. ೧-೫೦ (ಅ. ವೆ. ಪ್ರತ್ಯೇಕ)

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ ಹಾಗೂ ೨, ರೆಸಿಡೆನ್ಸಿ ರೋಡ್, ಬೆಂಗಳೂರು-೧




ತಯಾರಕರು:

ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್

ತುಮಕೂರು. H. O. ಮಂಗಳೂರು.

Regd. No. I



KASTU

A KANNA

MONTHLY D

*Circulates thro*

*the Mysore*

*and outside w*

*Kannada is s*

*Comman*

*the highest n*

*of reade*

*Caters to all*

ರುಗದ

A Loka Shik

Trust Public